ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೨೧

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಶಿವಮಹಾಪುರಾಣಂ

(ಸಂಸ್ಕೃತದಲ್ಲಿ ಮೂಲ, ಕನ್ನಡ ಅರ್ಥಾನುವಾದವಿವರಣೆಗಳೊಡನೆ)

ಭಾಗ—೫

ರುದ್ರಸಂಹಿತಾ—ಕುಮಾರಖಂಡ



ಅನುವಾದಕ :
ಹಾಸನದ ಪಂಡಿತ ವೆಂಕಟರಾವ್



ಮೈಸೂರು
ಶ್ರೀ ಚಾಮುಂಡೇಶ್ವರೀ ಎಲೆಕ್ಟ್ರಿಕ್ ಪ್ರೆಸ್
೧೯೪೫

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೨೧

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಶಿವಮಹಾಪುರಾಣಂ

(ಸಂಸ್ಕೃತದಲ್ಲಿ ಮೂಲ, ಕನ್ನಡ ಅರ್ಥಾನುವಾದವಿವರಣೆಗಳೊಡನೆ)

ಭಾಗ—೫

ರುದ್ರಸಂಹಿತಾ—ಕುಮಾರಖಂಡ



ಅನುವಾದಕ :
ಹಾಸನದ ಪಂಡಿತ ವೆಂಕಟೆರಾವ್

ಮೈಸೂರು
ಶ್ರೀ ಚಾಮುಂಡೇಶ್ವರೀ ಎಲೆಕ್ಟ್ರಿಕ್ ಪ್ರೆಸ್
೧೯೪೫



ಯದುವಂಶಪಯಃಪಾರಾವಾರಸುಧಾಕರರೂ ಸತ್ಸಂಪ್ರದಾಯವೈದಿಕವಿದ್ಯಾವರ್ಧಕರೂ
ಮೈಸೂರುದೇಶವನ್ನಾಳುವ ಧರ್ಮಪ್ರಭುಗಳೂ ಆದ ಶ್ರೀಮನ್ಮಹಾರಾಜ
**ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,**
**ಜಿ.ಸಿ.ಎಸ್.ಐ. ರವರು**




# ಶ್ರೀ ಪ್ರಸನ್ನ ಶಂಕರ

ವಾಮಾಂಕನ್ಯಸ್ಯವಾಮೇತರಕರಕಮಲಾಯಾಸ್ತಥಾ ವಾಮಬಾಹು-
ನ್ಯಸ್ತಾರಕ್ತೋತ್ಪಲಾಯಾಃ ಸ್ತನವಿಧೃತಲಸದ್ವಾಮಬಾಹುಂ ಪ್ರಿಯಾಯಾಃ ।
ಸರ್ವಾಕಲ್ಪಾಭಿರಾಮೋ ಧೃತಪರಶುಮೃಗೇಷ್ಟೈಃ ಕರೈಃ ಕಾಂಚನಾಭೋ
ಧ್ಯೇಯಃ ಪದ್ಮಾಸನಸ್ಥಃ ಸ್ಮರಲಲಿತವಪುಃ ಸಂಪದೇ ಪಾರ್ವತೀಶಃ ॥

ಬೆಂಗಳೂರು ಪ್ರೆಸ್ ಬ್ರಾಂಚ್,
ಮೈಸೂರು.

# ಪ್ರಸ್ತಾವನೆ.



ರುದ್ರಸಂಹಿತೆಯ ನಾಲ್ಕನೆಯ ಖಂಡವಾದ ಈ ಕುಮಾರಖಂಡದಲ್ಲಿ ಕುಮಾರಸ್ವಾಮಿಯ ಉತ್ಪತ್ತಿಯೂ, ತಾರಕಾಸುರನೇ ಮೊದಲಾದ ದೈತ್ಯರ ಸಂಹಾರವೂ, ಗಣೇಶೋತ್ಪತ್ತಿ ಮತ್ತು ಗಣೇಶವಿವಾಹವರ್ಣನೆಯೂ ವಿವರಿಸಲ್ಪಟ್ಟಿವೆ. । ಮುಖ್ಯವಾಗಿ ತಾರಕಾಸುರನ ವಧೆಗಾಗಿಯೇ ಕುಮಾರನ ಉತ್ಪತ್ತಿಯು. ದೈತ್ಯರನ್ನು ನಿಗ್ರಹಿಸಿ ದೇವತೆಗಳನ್ನೂ, ಋಷಿಗಳನ್ನೂ, ಸಜ್ಜನರನ್ನೂ ಸಂರಕ್ಷಿಸುವುದಕ್ಕಾಗಿ ಪರಮೇಶ್ವರನು ಅನೇಕ ಲೀಲೆಗಳನ್ನು ಪ್ರದರ್ಶಿಸುವನು. ಲೋಕಪರಿಪಾಲನೆಗಾಗಿಯೇ ವಿಷ್ಣುವೂ ಅನೇಕ ಅವತಾರಗಳನ್ನು ಮಾಡಿ ದೈತ್ಯರನ್ನು ಸಂಹಾರಮಾಡಿರುವನು. ಜಗನ್ಮಾತೆಯಾದ ದೇವಿಯೂ ಸಹ ಅನೇಕ ರೂಪಗಳನ್ನು ಕೈಗೊಂಡು ದುಷ್ಟದೈತ್ಯರನ್ನು ಸಂಹಾರಮಾಡಿ ಜಗತ್ಪರಿಪಾಲನೆಮಾಡಿರುವಳು. ಈ ವಿಚಾರಗಳು ಎಲ್ಲ ಪುರಾಣಗಳಲ್ಲಿಯೂ ಅನೇಕ ರೀತಿಯಾಗಿ ವರ್ಣಿಸಲ್ಪಟ್ಟಿವೆ.

ಇವುಗಳನ್ನೆಲ್ಲಾ ಓದಿದರೆ ವಿಚಾರಪರರಾದವರ ಮನಸ್ಸಿನಲ್ಲಿ ಒಂದು ಸಂಶಯವು ತಲೆದೋರುವುದು. ದೇವಾಸುರರಿಗೆ ಪದೇಪದೇ ಯುದ್ಧವಾಗಲು ಕಾರಣವೇನು? ಪರಮೇಶ್ವರನು ದೇವತೆಗಳ ಪಕ್ಷವನ್ನೇ ವಹಿಸಿ ದೈತ್ಯರನ್ನು ಏತಕ್ಕೆ ನಿಗ್ರಹಿಸಬೇಕು? ದೈತ್ಯರು ದುಷ್ಟಸ್ವಭಾವವುಳ್ಳವರೆಂದು ಹೇಳುವುದಾದರೆ ಅಂತಹ ದೈತ್ಯರನ್ನು ಏತಕ್ಕೆ ಸೃಷ್ಟಿಮಾಡಬೇಕು? ದುಷ್ಟರನ್ನೇ ಸೃಷ್ಟಿಮಾಡದೆ ಸಜ್ಜನರನ್ನೇ ಲೋಕದಲ್ಲಿ ಸೃಷ್ಟಿಮಾಡಿದಲ್ಲಿ ಈ ತೊಂದರೆಗಳೆಲ್ಲಾ ತಪ್ಪುವುದಿಲ್ಲವೆ ಎಂದರೆ, ಅದಕ್ಕೆ ತಕ್ಕ ಸಮಾಧಾನವು ಸ್ವಲ್ಪ ವಿಚಾರಮಾಡುವುದರಿಂದಲೇ ಚೆನ್ನಾಗಿ ತಿಳಿಯುವುದು. ವಿಕಾರರಹಿತನಾದ ಪರಬ್ರಹ್ಮನಲ್ಲಿ ಸತ್ತ್ವರಜಸ್ತಮೋಗುಣಗಳು ಸಮಾನಾವಸ್ಥೆಯಲ್ಲಿರುವುವು. ಈ ಮೂರು ಗುಣಗಳೂ ಹೆಚ್ಚುಕಡಿಮೆಯಿಲ್ಲದೆ ಒಂದೇ ಪರಿಮಾಣದಲ್ಲಿರುವುವು. ಪರಮೇಶ್ವರನ ಇಚ್ಛೆಯಿಂದ ಆ ಗುಣಗಳಲ್ಲಿ ವ್ಯತ್ಯಾಸವಾಗಿ ಸೃಷ್ಟಿಕಾರ್ಯವು ಪ್ರಾರಂಭವಾಗುವುದು. ಪ್ರಕೃತಿ ಸಂಬಂಧವಾದ ಯಾವ ವಸ್ತುವೇ ಆಗಲಿ ಕಾರ

ಣಾಂತರಗಳಿಂದ ರೂಪಾಂತರವನ್ನು ಹೊಂದುವುದೇ ಹೊರತು, ಎಂದಿಗೂ ನಾಶವಾಗುವುದಿಲ್ಲ. ಯಾವ ವಸ್ತುವನ್ನೂ ನಾಶಮಾಡಲು ಸಾಧ್ಯವಿಲ್ಲ. ಒಂದು ರೂಪವನ್ನು ಬಿಟ್ಟು ಬೇರೆ ರೂಪವನ್ನು ಹೊಂದಿದರೆ ಮೊದಲಿದ್ದ ರೂಪವು ಹೋಗುವುದರಿಂದ ಅದನ್ನು ನಾಶವೆಂದು ಹೇಳುತ್ತೇವೆ. ಇದೇ ರೀತಿಯಲ್ಲಿ, ಪರಬ್ರಹ್ಮನಲ್ಲಿ ಸಾಮ್ಯಾವಸ್ಥೆಯಲ್ಲಿದ್ದ ಸತ್ತ್ವರಜಸ್ತಮೋಗುಣಗಳು ಪ್ರಪಂಚದಲ್ಲಿ ಸೃಷ್ಟಿಸಲ್ಪಟ್ಟ ಸಮಸ್ತ ಪ್ರಾಣಿಗಳಲ್ಲಿಯೂ ಬೇರೆ ಬೇರೆ ಪ್ರಮಾಣದಿಂದ ಇರುವುವು. ಎಂದರೆ ಪ್ರತಿಪ್ರಾಣಿಯಲ್ಲಿ ಈ ಮೂರು ಗುಣಗಳೂ ಇದ್ದೇ ಇರುವುವು. ಕೆಲವರಲ್ಲಿ ಸತ್ತ್ವಗುಣವು ಹೆಚ್ಚಾಗಿಯೂ ರಜಸ್ತಮೋಗುಣಗಳು ಕಡಿಮೆಯಾಗಿಯೂ ಇರುವುವು. ಇಂತವರು ದೇವತೆಗಳೆನಿಸುವರು, ಮತ್ತೆ ಕೆಲವರಲ್ಲಿ ರಜೋಗುಣವು ಹೆಚ್ಚಾಗಿ ಸತ್ತ್ವತಮೋಗುಣಗಳು ಕಡಮೆಯಾಗಿರುವುವು. ಇವರು ಮನುಷ್ಯರೆನಿಸುವರು. ಸತ್ತ್ವರಜೋಗುಣಗಳು ಕಡಮೆಯಾಗಿ ತಮೋಗುಣವೇ ಹೆಚ್ಚಾಗಿಯುಳ್ಳವರು ದೈತ್ಯರೆನಿಸುವರು. ಪಶುಪಕ್ಷಿಮೃಗಾದಿಗಳಲ್ಲಿಯೂ ಇದೇ ರೀತಿ ಇರುವುದು. ಇದಲ್ಲದೆ ಸತ್ತ್ವಗುಣಪ್ರಧಾನರಾದ ದೇವತೆಗಳಲ್ಲಿ ಎಲ್ಲರಲ್ಲಿಯೂ ಸತ್ತ್ವಗುಣವು ಒಂದೇ ಪರಿಮಾಣದಲ್ಲಿರುವುದಿಲ್ಲ. ಕೆಲವರಲ್ಲಿ ಹೆಚ್ಚಾಗಿಯೂ ಕೆಲವರಲ್ಲಿ ಕಡಿಮೆಯಾಗಿಯೂ ಇರುವುದು. ಅದರಂತೆ ಮನುಷ್ಯರಲ್ಲಿಯೂ, ದೈತ್ಯರಲ್ಲಿಯೂ ಪಶುಪಕ್ಷಿಗಳಲ್ಲಿಯೂ ಆಯಾ ಗುಣಗಳು ಬೇರೆ ಬೇರೆ ಪರಿಮಾಣದಲ್ಲಿರುವವು. ಆದ್ದುದರಿಂದ ಒಳ್ಳೆಯ ಗುಣದಲ್ಲಿಯಾಗಲಿ ಕೆಟ್ಟ ಗುಣದಲ್ಲಿಯಾಗಲಿ ಒಬ್ಬರಿಗೊಬ್ಬರಿಗೆ ವ್ಯತ್ಯಾಸವಿದ್ದೇ ಇರುವುದು. ಈ ವ್ಯತ್ಯಾಸಗಳಿಲ್ಲದಿದ್ದರೆ ಪ್ರಪಂಚ ವ್ಯವಹಾರವೇ ನಡೆಯುವುದಿಲ್ಲ. ವ್ಯತ್ಯಾಸಗಳೆಲ್ಲವೂ ಮಾಯವಾಗಿ ಸತ್ತ್ವರಜಸ್ತಮೋಗುಣಗಳು ಸಾಮ್ಯಾವಸ್ಥೆಗೆ ಬಂದರೆ ಆ ಸ್ಥಿತಿಯೇ ಪ್ರಳಯವೆನಿಸುವುದು. ಆಗ ಚರಾಚರಾತ್ಮಕವಾದ ಪ್ರಪಂಚವಿರುವುದಿಲ್ಲ. ಎಲ್ಲವೂ ಪರಮಾತ್ಮನಲ್ಲಿ ಲೀನವಾಗಿ ಅವ್ಯಕ್ತಸ್ವರೂಪವಾದ ಪರಬ್ರಹ್ಮವೊಂದೇ ತಾನೇತಾನಾಗಿ ಎಲ್ಲೆಲ್ಲಿಯೂ ವ್ಯಾಪಿಸಿರುವುದು.

ತಮೋಗುಣವೆಂದರೆ ಕೆಟ್ಟಗುಣವು, ಕೆಲವು ಸಂದರ್ಭಗಳಲ್ಲಿ ಈ ಗುಣವು ದೈತ್ಯರಲ್ಲಿ ಹೆಚ್ಚಾಗಿ ಪ್ರಕಟವಾಗುವುದು. ಆಗ ಅವರು ಇತರರನ್ನು ಹಿಂಸಿಸುವರು. ಅಂತಹ ಸಂದರ್ಭದಲ್ಲಿ ಪರಮೇಶ್ವರನು ವಿಧವಿಧವಾದ ಲೀಲೆಗಳನ್ನು ಪ್ರಕಟಿಸಿ ಅವರನ್ನು ನಿಗ್ರಹಿಸಿ ದೇವಮನುಷ್ಯಾದಿಗಳನ್ನೂ ಚರಾಚರಾತ್ಮಕವಾದ ಪ್ರಪಂಚವನ್ನೂ ರಕ್ಷಣೆಮಾಡುವನು. ಪ್ರಪಂಚವು ನಡೆಯುತ್ತಿರುವವರೆಗೂ ಇಂತಹ ದುಷ್ಟನಿಗ್ರಹ

ಶಿಷ್ಟಪರಿಪಾಲನಕಾರ್ಯಗಳು ನಡೆಯುತ್ತಲೇ ಇರುವುವು. ಇವುಗಳೇ ಪರಮೇಶ್ವರನ ಲೀಲೆಗಳು. ಇವುಗಳನ್ನು ತಿಳಿದುಕೊಳ್ಳುವುದರಿಂದ ಪರಮೇಶ್ವರನ ಅಪಾರವಾದ ಮಹಿಮೆಯು ಸ್ವಲ್ಪಮಟ್ಟಿಗೆ ತಿಳಿದು ಅದರಿಂದ ಭಕ್ತಿಜ್ಞಾನವೈರಾಗ್ಯಗಳು ಜನಿಸಿ ಈಶ್ವರಾನುಗ್ರಹದಿಂದ ಮುಕ್ತಿಯು ಲಭಿಸುವುದು.

ಸಕಲ ಸಜ್ಜನರಿಗೂ ಸನ್ಮಾರ್ಗಪ್ರದರ್ಶಕವಾದ ಇಂತಹ ಪುರಾಣವನ್ನು ಪ್ರಕಟ ಮಾಡಲು ಉದಾರಾಶ್ರಯವನ್ನಿತ್ತು ಸರ್ವವಿಧದಲ್ಲಿಯೂ ಪ್ರಜಾಹಿತಕಾರ್ಯದಲ್ಲಿಯೇ ಆಸಕ್ತರಾದ ನಮ್ಮನ್ನಾಳುವ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ.ಸಿ.ಎಸ್.ಐ. ಮಹಾಪ್ರಭುಗಳವರಿಗೂ ಅವರ ಪ್ರಜೆಗಳಿಗೂ ಪರಮೇಶ್ವರನು ಇತೋಽಪ್ಯತಿಶಯವಾಗಿ ಸಕಲ ಸನ್ಮಂಗಲಗಳನ್ನು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಮೈಸೂರು
ಪಾರ್ಥಿವ ಸಂ॥ ಆಷಾಢ ಶು. ತ್ರಯೋದಶಿ
೨೩—೭—೪೫

ಅನುವಾದಕ:
ಹಾಸನದ ಪಂಡಿತ್ ವೆಂಕಟರಾವ್.

# ವಿಷಯಾನುಕ್ರಮಣಿಕೆ

॥ ಶ್ರೀಃ ॥

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಕುಮಾರಖಂಡೇ

## ಪ್ರಥಮೋಽಧ್ಯಾಯಃ

---

ವಂದೇ ವಂದನತುಷ್ಟಮಾನಸಮತಿಪ್ರೇಮಪ್ರಿಯಂ ಪ್ರೇಮದಂ
ಪೂರ್ಣಂ ಪೂರ್ಣಕರಂ ಪ್ರಪೂರ್ಣನಿಖಿಲೈಶ್ವರ್ಯೈಕವಾಸಂ ಶಿವಂ ।
ಸತ್ಯಂ ಸತ್ಯಮಯಂ ತ್ರಿಸತ್ಯವಿಭವಂ ಸತ್ಯಪ್ರಿಯಂ ಸತ್ಯದಂ
ವಿಷ್ಣುಬ್ರಹ್ಮನುತಂ ಸ್ವಕೀಯಕೃಪಯೋಪಾತ್ತಾಕೃತಿಂ ಶಂಕರಂ ॥ ೧ ॥

---

೧. ನಮಸ್ಕಾರವನ್ನು ಮಾಡಿದ ಮಾತ್ರದಿಂದ ಸಂತೋಷಗೊಳ್ಳುವ ಪರಮೇಶ್ವರನನ್ನು ಭಕ್ತಿಯಿಂದ ನಮಸ್ಕರಿಸುವೆನು. ಆ ಶಿವನು ತನ್ನಲ್ಲಿ ಹೆಚ್ಚಾದ ಭಕ್ತಿಯುಳ್ಳವರಿಗೆ ಇಷ್ಟನಾಗಿಯೂ, ಭಕ್ತರ ಇಷ್ಟಾರ್ಥವನ್ನು ನೆರವೇರಿಸುವವನಾಗಿಯೂ ಇರುವನು. ಎಲ್ಲಾ ವಿಧವಾದ ಇಷ್ಟಗಳಿಗೂ ವಾಸಸ್ಥಾನನಾಗಿ, ತನ್ನನ್ನು ಆಶ್ರಯಿಸಿದವರಿಗೆ ಬೇಕಾದುದನ್ನು ಕೊಟ್ಟು ಅವರವರ ಇಷ್ಟಾರ್ಥಗಳನ್ನು ಪೂರಯಿಸುವವನೂ ಮತ್ತು ಎಲ್ಲಾ ವಿಧವಾದ ಐಶ್ವರ್ಯಗಳಿಗೆ ಮುಖ್ಯಾಧಾರನಾಗಿಯೂ ಇರುವನು. ಸತ್ಯಸ್ವರೂಪನಾಗಿರುವನು. ವರ್ತಮಾನ ಭೂತ, ಭವಿಷ್ಯತ್ಕಾಲಗಳೆಂಬ ಮೂರು ಕಾಲಗಳಲ್ಲಿಯೂ ಇರುವನು, ಮಹಾಮಹಿಮೆಯುಳ್ಳವನು, ಸತ್ಯಪ್ರಿಯನು, ಮತ್ತು ಭಕ್ತರಿಗೆ ಸತ್ಯಮಾರ್ಗದರ್ಶಕನು, ವಿಷ್ಣು, ಬ್ರಹ್ಮಾದಿಗಳಿಂದಲೂ ಸ್ತುತಿಸಲ್ಪಡುವವನು. ಯಾವಾಗಲೂ ಮಂಗಳಕರನಾಗಿಯೂ, ತನ್ನ ದಯೆಯಿಂದ ಭಕ್ತರ ಅನುಗ್ರಹಕ್ಕಾಗಿ ಸಗುಣರೂಪವನ್ನು ಧರಿಸಿಯೂ ಇರುವನು. ಇಂತಹ ಮಂಗಳಾಕೃತಿಯಾದ ಶಿವನನ್ನು ನಮಸ್ಕರಿಸುವೆನು.

॥ ನಾರದ ಉವಾಚ ॥

ವಿವಾಹಯಿತ್ವಾ ಗಿರಿಜಾಂ ಶಂಕರೋ ಲೋಕಶಂಕರಃ ।
ಗತ್ವಾ ಸ್ವಪರ್ವತಂ ಬ್ರಹ್ಮನ್ ಕಿಮುಕಾರ್ಷೀದ್ಧಿ ತದ್ವದ ॥ ೨ ॥

ಕಥಂ ಹಿ ತನಯೋ ಜಜ್ಞೇ ಶಿವಸ್ಯ ಪರಮಾತ್ಮನಃ ।
ಯದರ್ಥಮಾತ್ಮಾರಾಮೋಽಪಿ ಸಮುವಾಹ ಶಿವಾಂ ಪ್ರಭುಃ ॥ ೩ ॥

ತಾರಕಸ್ಯ ಕಥಂ ಬ್ರಹ್ಮನ್ ವಧೋಽಭೂದ್ದೇವ ಶಂಕರಾತ್ ।
ಏತತ್ಸರ್ವಮಶೇಷೇಣ ವದ ಕೃತ್ವಾ ದಯಾಂ ಮಯಿ ॥ ೪ ॥

॥ ಸೂತ ಉವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯ ನಾರದಸ್ಯ ಪ್ರಜಾಪತಿಃ ।
ಸುಪ್ರಸನ್ನಮನಾಃ ಸ್ಮೃತ್ವಾ ಶಂಕರಂ ಪ್ರತ್ಯುವಾಚ ಹ ॥ ೫ ॥

॥ ಬ್ರಹ್ಮೋವಾಚ ॥

ಚರಿತಂ ಶೃಣು ವಕ್ಷ್ಯಾಮಿ ಶಶಿಮೌಳೇಸ್ತು ನಾರದ ।
ಗುಹಜನ್ಮಕಥಾಂ ದಿವ್ಯಾಂ ತಾರಕಾಸುರಸದ್ವಧಂ ॥ ೬ ॥

---

೨. ನಾರದನು ಪ್ರಶ್ನೆಮಾಡುವನು :—ಎಲೈ ಬ್ರಹ್ಮನೇ, ಲೋಕಕ್ಕೆ ಶುಭವನ್ನುಂಟುಮಾಡುವ ಶಂಕರನು ಗಿರಿಜೆಯನ್ನು ಮದುವೆಯಾದನಂತರ ತನ್ನ ವಾಸಸ್ಥಳವಾದ ಕೈಲಾಸಪರ್ವತಕ್ಕೆ ಹೋಗಿ ಏನು ಮಾಡಿದನು? ಎಂಬುದನ್ನು ನನಗೆ ತಿಳಿಸು.

೩. ಎಲ್ಲರಿಗೂ ಪ್ರಭುವಾದ ಆ ಶಿವನು ಯಾವಾಗಲೂ ಆತ್ಮಾನಂದವನ್ನನುಭವಿಸುತ್ತಿದ್ದರೂ ಕೂಡ ಯಾವ ಸಂತಾನಕ್ಕಾಗಿ ಪಾರ್ವತಿಯನ್ನು ಮದುವೆಯಾದನು? ಆ ಶಿವನಿಗೆ ಪುತ್ರೋತ್ಪತ್ತಿಯು ಹೇಗೆ ಆಯಿತು ?

೪. ಎಲೈ ದೇವನಾದ ಬ್ರಹ್ಮನೇ, ಆ ತಾರಕಾಸುರನವಧೆ ಹೇಗೆಆಯಿತು ? ಈ ವಿಷಯವೆಲ್ಲವನ್ನೂ ದಯವಿಟ್ಟು ನನಗೆ ತಿಳಿಸು ಎಂದನು.

೫-೬. ಸೂತನು ಹೇಳಿದನು :—ಈ ರೀತಿಯಾಗಿ ಹೇಳಿದ ನಾರದನ ಮಾತನ್ನು ಕೇಳಿ ಬ್ರಹ್ಮನು ಪ್ರಸನ್ನಮನಸ್ಕನಾಗಿ ಶಿವನನ್ನು ಧ್ಯಾನಮಾಡುತ್ತಾ ನಾರದನನ್ನು ಕುರಿತು ಎಲೈ ನಾರದನೇ, ಆ ಶಶೀಮೌಳಿಯಿಂದ ಸ್ಕಂದನು ಹುಟ್ಟಿದ ಶ್ರೇಷ್ಠವಾದ ಕಥೆಯನ್ನೂ, ತಾರಕಾಸುರನ ಸಂಹಾರದ ಕಥೆಯನ್ನೂ ಹೇಳುವೆನು ಕೇಳು.

ಶ್ರೂಯತಾಂ ಕಥಯಾಮ್ಯದ್ಯ ಕಥಾಂ ಪಾಪಪ್ರಣಾಶಿನೀಂ ।
ಯಾಂ ಶ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ಮಾನವೋ ಭೃಶಂ ॥ ೭ ॥

ಇದಮಾಖ್ಯಾನಮನಘಂ ರಹಸ್ಯಂ ಪರಮಾದ್ಭುತಂ ।
ಪಾಪಸಂತಾಪಹರಣಂ ಸರ್ವವಿಘ್ನವಿನಾಶನಂ ॥ ೮ ॥

ಸರ್ವಮಂಗಲದಂ ಸಾರಂ ಸರ್ವಂ ಶ್ರುತಿಮನೋಹರಂ ।
ಸುಖದಂ ಮೋಕ್ಷಬೀಜಂ ಚ ಕರ್ಮಮೂಲನಿಕೃಂತನಂ ॥ ೯ ॥

ಕೈಲಾಸಮಾಗತ್ಯ ಶಿವಾಂ ವಿವಾಹ್ಯ
ಶೋಭಾಂ ಪ್ರಪೇದೇ ನಿತರಾಂ ಶಿವೋऽಪಿ ।
ವಿಚಾರಯಾಮಾಸ ಚ ದೇವಕೃತ್ಯಂ
ಪೀಡಾಂ ಜನಸ್ಯಾಪಿ ಚ ದೇವಕೃತ್ಯೇ ॥ ೧೦ ॥

---

೭. ಈಗ ನಾನು ಹೇಳುವ ಕಥೆಯು ಪಾಪವನ್ನು ನಾಶಮಾಡತಕ್ಕದು ಇದನ್ನು ಕೇಳಿದರೆ ಮಾನವನು ತಾನು ಮಾಡಿದ ಎಲ್ಲಾ ಪಾಪಗಳಿಂದಲೂ ಮುಕ್ತನಾಗುವನು.

೮-೯. ಈ ಚರಿತ್ರೆಯು ಪಾಪನಾಶಕರವಾದುದು, ಬಹಳ ರಹಸ್ಯವಾದುದು, ಪರಮಾಶ್ಚರ್ಯಕರವಾದುದು. ಪಾತಕಗಳೇ ಮೊದಲಾದ ದುಃಖಗಳನ್ನು ನಾಶ ಮಾಡತಕ್ಕದು ಎಲ್ಲಾ ವಿಘ್ನಗಳನ್ನೂ ನಾಶಮಾಡುವುದು. ಸರ್ವ ವಿಧವಾದ ಮಂಗಳವನ್ನುಂಟುಮಾಡುವುದು, ಸಾರವತ್ತಾದುದು. ಕಿವಿಗಿಂಪಾದ ಕಥೆಯಿದು. ಸುಖವನ್ನುಂಟುಮಾಡುವುದು, ಮೋಕ್ಷಕ್ಕೆ ಕಾರಣವಾದುದು. ಕರ್ಮಗಳ ಬೇರನ್ನು ನಾಶಮಾಡುವುದರ ಮೂಲಕ ಮೋಕ್ಷವನ್ನುಂಟುಮಾಡುವುದು.

೧೦. ಶಿವನು ಪಾರ್ವತಿಯನ್ನು ವಿವಾಹಮಾಡಿಕೊಂಡು ಕೈಲಾಸಪರ್ವತಕ್ಕೆ ಬಂದು ಅತ್ಯಂತ ಕಾಂತಿಯುಕ್ತನಾಗಿದ್ದನು. ಅಲ್ಲಿ ದೇವತೆಗಳು ಈಗ ಮಾಡುತ್ತಿರುವ ಕೆಲಸವನ್ನೂ ಮತ್ತು ಅವರಿಗುಂಟಾಗಿರುವ ತೊಂದರೆಯನ್ನು ವಿಚಾರಿಸಿ ಅದಕ್ಕೋಸ್ಕರವಾಗಿ ತನ್ನಿಂದ ಅವರಿಗಾಗಬೇಕಾದ ಸಹಾಯವನ್ನು ಯೋಚಿಸುತ್ತಾ ಇದ್ದನು.

ಶಿವಸ್ಸ ಭಗವಾನ್ ಸಾಕ್ಷಾತ್ಕೈಲಾಸಮುಗಮುದ್ಯದಾ ।
ಸೌಖ್ಯಂ ಚ ವಿವಿಧಂ ಚಕ್ರುರ್ಗಣಾಸ್ಸರ್ವೇ ಸುಹರ್ಷಿತಾಃ ॥ ೧೧ ॥

ಮಹೋತ್ಸವೋ ಮಹಾನಾಸೀಚ್ಛಿವೇ ಕೈಲಾಸಮಾಗತೇ ।
ದೇವಾಸ್ಸ್ವವಿಷಯಂ ಪ್ರಾಪ್ತಾ ಹರ್ಷನಿರ್ಭರಮಾನಸಾಃ ॥ ೧೨ ॥

ಅಥ ಶಂಭುರ್ಮಹಾದೇವೋ ಗೃಹೀತ್ವಾ ಗಿರಿಜಾಂ ಶಿವಾಂ ।
ಜಗಾಮ ನಿರ್ಜನಂ ಸ್ಥಾನಂ ಮಹಾದಿವ್ಯಂ ಮನೋಹರಂ ॥ ೧೩ ॥

ಶಯ್ಯಾಂ ರತಿಕರೀಂ ಕೃತ್ವಾ ಪುಷ್ಪಚಂದನಚರ್ಚಿತಾಂ ।
ಅದ್ಭುತಾಂ ತತ್ರ ಪರಮಾಂ ಭೋಗವಸ್ತ್ವನ್ವಿತಾಂ ಶುಭಾಂ ॥ ೧೪ ॥

ಸ ರೇಮೇ ತತ್ರ ಭಗವಾನ್ ಶಂಭುರ್ಗಿರಿಜಯಾ ಸಹ ।
ಸಹಸ್ರವರ್ಷಪರ್ಯಂತಂ ದೇವಮಾನೇನ ಮಾನದಃ ॥ ೧೫ ॥

---

೧೧. ಭಗವಂತನಾದ ಶಂಕರನು ಕೈಲಾಸಪರ್ವತಕ್ಕೆ ಬಂದನಂತರ ಪ್ರಮಥ ಗಣಗಳೆಲ್ಲವೂ ಬಹಳ ಸಂತೋಷದಿಂದ ಆ ಶಿವನಿಗೆ ಸುಖವುಂಟಾಗುವ ಅನೇಕ ವಿಧ ವಾದ ಕಾರ್ಯಗಳನ್ನು ಮಾಡಿದರು.

೧೨. ಅಲ್ಲಿ ಮಹಾವಿಜೃಂಭಣೆಯಿಂದ ಉತ್ಸವವು ಜರುಗಿತು. ಅನಂತರ ದೇವತೆಗಳೆಲ್ಲರೂ ಸಂತೋಷಚಿತ್ತರಾಗಿ ತಮ್ಮ ತಮ್ಮ ಸ್ಥಾನಗಳಿಗೆ ಹೊರಟು ಹೋದರು.

೧೩. ಅನಂತರ ಮಹಾದೇವನು ಮಂಗಳಕರಳಾದ ಗಿರಿಜೆಯನ್ನು ತನ್ನೊ ಡನೆ ಕರೆದುಕೊಂಡು ದಿವ್ಯವೂ ಮನೋಹರವೂ ಆದ ರಹಸ್ಯಸ್ಥಾನಕ್ಕೆ ಹೋದನು.

೧೪-೧೫. ಆ ರಹಸ್ಯಸ್ಥಾನದಲ್ಲಿ ಶಿವನು ರತ್ಯುದ್ಬೋಧಕವಾಗಿಯೂ ಶುಭ ಕರವಾಗಿಯೂ ಇರುವ ಒಂದು ಹಾಸಿಗೆಯನ್ನು ನಿರ್ಮಿಸಿದನು. ಆ ಹಾಸಿಗೆಯ ಮೇಲೆ ಪುಷ್ಪಗಳು ಹರಡಿ ಗಂಧಾದಿ ಪರಿಮಳದ್ರವ್ಯವು ಚುಮುಕಿಸಲ್ಪಟ್ಟಿದ್ದಿತು. ಭೋಗವಸ್ತುಗಳಿಂದ ಸಜ್ಜುಗೊಳಿಸಲ್ಪಟ್ಟು ಪರಮಾಶ್ಚರ್ಯಕರವಾಗಿದ್ದಿತು. ಇಂತಹ ಹಾಸಿಗೆಯಲ್ಲಿ ಗಿರಿಜೆಯೊಡನೆ ಆ ಪರಶಿವನು ದೇವಮಾನದ ಸಾವಿರವರ್ಷಗಳವರೆವಿಗೂ ಕ್ರೀಡಿಸಿದನು.

ದುರ್ಗಾಂಗಸ್ಪರ್ಶಮಾತ್ರೇಣ ಲೀಲಯಾ ಮೂರ್ಛಿತಶ್ಶಿವಃ ।
ಮೂರ್ಛಿತಾ ಸಾ ಶಿವಸ್ಪರ್ಶಾದ್ಬುಬುಧೇ ನ ದಿವಾನಿಶಂ ॥ ೧೧ ॥

ಹರೇ ಭೋಗಪ್ರವೃತ್ತೇ ತು ಲೋಕಧರ್ಮಪ್ರವರ್ತಿನಿ ।
ಮಹಾನ್ಕಾಲೋ ವ್ಯತೀಯಾಯ ತಯೋಃ ಕ್ಷಣ ಇವಾನಘ ॥ ೧೨ ॥

ಅಥ ಸರ್ವೇ ಸುರಾಸ್ತಾತ ಏಕತ್ರೀಭೂಯ ಚೈಕದಾ ।
ಮಂತ್ರಯಾಂಚಕ್ರುರಾಗತ್ಯ ಮೇರೌ ಶಕ್ರಪುರೋಗಮಾಃ ॥ ೧೩ ॥

॥ ಸುರಾ ಊಚುಃ ॥

ವಿವಾಹಂ ಕೃತವಾನ್ಶಂಭುರಸ್ಮತ್ಕಾರ್ಯಾರ್ಥಮೀಶ್ವರಃ ।
ಯೋಗೀಶ್ವರೋ ನಿರ್ವಿಕಾರೋ ಸ್ವಾತ್ಮಾರಾಮೋ ನಿರಂಜನಃ ॥ ೧೯ ॥

ನೋತ್ಪನ್ನಸ್ತನಯಸ್ತಸ್ಯ ನ ಜಾನೀಮೋಽತ್ರ ಕಾರಣಂ ।
ವಿಲಂಬಃ ಕ್ರಿಯತೇ ತೇನ ಕಥಂ ದೇವೇಶ್ವರೇಣ ಹಾ ॥ ೨೦ ॥

---

೧೧. ರತಿವಿಲಾಸ ಸಮಯದಲ್ಲಿ ಶಿವನು ಪಾರ್ವತಿಯ ಅಂಗಸ್ಪರ್ಶಮಾತ್ರದಿಂದಲೇ ಆನಂದಪರವಶನಾಗಿ ತನ್ನನ್ನು ತಾನೇ ಮರೆಯುತ್ತಿದ್ದನು. ಪಾರ್ವತಿಯೂ ಸಹ ಶಿವನ ಅಂಗಸ್ಪರ್ಶದಿಂದ ಆನಂದಪರವಶಳಾಗಿ ತನ್ನನ್ನು ತಾನೇ ಮರೆತು ಎಚ್ಚರಗೊಳ್ಳುತ್ತಿದ್ದಳು. ಈ ಕ್ರೀಡೆಯಲ್ಲಿ ತಲ್ಲೀನರಾಗಿ ಹಗಲು ರಾತ್ರಿಗಳ ಜ್ಞಾನವೂ ಅವರಿಗಿರಲಿಲ್ಲ.

೧೨. ಎಲೈ ನಾರದನೇ, ಲೋಕಧರ್ಮಪ್ರವರ್ತಕನಾದ ಶಿವನು ರತಿವಿಲಾಸಪ್ರವೃತ್ತನಾಗಿರಲು ಅನೇಕ ಕಾಲವು ಕಳೆಯಿತು. ಆದರೂ ರತಿಕ್ರೀಡೆಯಲ್ಲಾಸಕ್ತರಾದ ಶಿವಗಿರಿಜೆಯರಿಗೆ ಆ ಮಹಾಕಾಲವು ಒಂದು ಕ್ಷಣದಂತೆ ಕಾಣುತ್ತಿತ್ತು.

೧೩. ಹೀಗಿರಲು ಇಂದ್ರನೇ ಮೊದಲಾದ ದೇವತೆಗಳೆಲ್ಲರೂ ಮೇರುಪರ್ವತದಲ್ಲಿ ಒಟ್ಟುಗೂಡಿ ಮಂತ್ರಾಲೋಚನೆಯನ್ನು ಮಾಡಿದರು.

೧೯-೨೦. ದೇವತೆಗಳು ಯೋಚಿಸಿದರು :—ಯೋಗೀಶ್ವರನಾದ ಈಶ್ವರನು ಅವನಿಗೆ ನಿರ್ವಿಕಾರನು, ಬ್ರಹ್ಮಾನಂದನಿರತನು, ನಿರಂಜನನು, ಇಂತಹ ಈಶ್ವರನು

ಏತಸ್ಮಿನ್ನಂತರೇ ದೇವಾ ನಾರದಾದೇವ ದರ್ಶನಾತ್ ।
ಬುಬುಧುಸ್ತನ್ನಿಮಿತಂ ಭೋಗಂ ತಯೋಶ್ಚ ರಮಮಾಣಯೋಃ ॥ ೨೧ ॥

ಚಿರಂ ಜ್ಞಾತ್ವಾ ತಯೋರ್ಭೋಗಂ ಚಿಂತಾಮಾಪುಸ್ಸುರಾಶ್ಚ ತೇ ।
ಬ್ರಹ್ಮಾಣಂ ಮಾಂ ಪುರಸ್ಕೃತ್ಯ ಯಯುರ್ನಾರಾಯಣಾಂತಿಕಂ ॥ ೨೨ ॥

ತಂ ನತ್ವಾ ಕಥಿತಂ ಸರ್ವಂ ಮಯಾ ವೃತ್ತಾಂತಮೀಪ್ಸಿತಂ ।
ಸಂತಸ್ಥಿರೇ ಸರ್ವದೇವಾ ಚಿತ್ರೇ ಪುತ್ಥಲಿಕಾ ಯಥಾ ॥ ೨೩ ॥

॥ ಬ್ರಹ್ಮೋವಾಚ ॥

ಸಹಸ್ರವರ್ಷಪರ್ಯಂತಂ ದೇವಮಾನೇನ ಶಂಕರಃ ।
ರತೌ ರತಶ್ಚ ನಿಶ್ಚೇಷ್ಟೋ ಯೋಗೀ ವಿರಮತೇ ನ ಹಿ ॥ ೨೪ ॥

---

ನಮ್ಮ ಕಾರ್ಯಕ್ಕೋಸ್ಕರವಾಗಿ ಪಾರ್ವತಿಯನ್ನು ಮದುವೆಯಾದನು. ಇದು ವರೆವಿಗೂ ಮಕ್ಕಳಾಗದಿರಲು ಕಾರಣವೇನೆಂಬುದು ನಮಗೆ ಗೊತ್ತಾಗಲಿಲ್ಲ. ದೇವೇಶ್ವರನಾದ ಈತನಿಗೆ ಪುತ್ರೋತ್ಪತ್ತಿಯು ಇಷ್ಟು ವಿಲಂಬವಾಗಲು ಕಾರಣವೇನು ? ಇದು ನಮಗೆ ದುಃಖಕರವಾದ ವಿಷಯವಾಗಿರುವುದು.

೨೧. ಹೀಗೆ ದೇವತೆಗಳು ಯೋಚಿಸುತ್ತಿರುವಲ್ಲಿ ನಾರದನು ಅಲ್ಲಿಗೆ ಬಂದನು. ಆ ನಾರದನಿಂದ ಆ ಪಾರ್ವತೀಪರಮೇಶ್ವರರ ಭೋಗವಿಷಯವನ್ನು ತಿಳಿದು ಕೊಂಡರು.

೨೨. ಆ ಪಾರ್ವತೀಪರಮೇಶ್ವರರ ಭೋಗವು ಬಹಳ ಕಾಲದವರೆಗೂ ನಡೆದು ಬಂದಿರುವುದನ್ನು ತಿಳಿದು ಅದರಿಂದ ಯಾವ ಪ್ರಯೋಜನವೂ ಆಗಲಿಲ್ಲವೆಂದು ಯೋಚಿಸಿ ಬಹಳ ಖಿನ್ನರಾಗಿ ನನ್ನನ್ನೂ (ಬ್ರಹ್ಮ) ಕರೆದುಕೊಂಡು ನಾರಾಯಣನ ಸಮೀಪಕ್ಕೆ ಹೋದರು.

೨೩. ನಾನು ಆ ವಿಷ್ಣುವನ್ನು ನಮಸ್ಕರಿಸಿ ನಮ್ಮ ಮನಸ್ಸಿನಲ್ಲಿರುವ ಅಭಿಪ್ರಾಯವನ್ನು ತಿಳಿಸಿದೆನು. ಆ ಸಮಯದಲ್ಲಿ ದೇವತೆಗಳೆಲ್ಲರೂ ಚಿತ್ರದಲ್ಲಿ ಬರೆದಿರುವ ಬೊಂಬೆಗಳಂತೆ ನಿಶ್ಚೇಷ್ಟಿತರಾಗಿ ನಿಂತಿದ್ದರು.

೨೪. ಬ್ರಹ್ಮನು ಹೇಳಿದನು :—ಎಲೈ ವಿಷ್ಣುವೇ, ಶಂಕರನು ದೇವಮಾನದ ಸಹಸ್ರವರ್ಷಪರ್ಯಂತ ರತಿಕ್ರೀಡೆಯಲ್ಲಿ ಆಸಕ್ತನಾಗಿ ಇದುವರೆವಿಗೂ ರತಿಯಿಂದ

॥ ಭಗವಾನುವಾಚ ॥

ಚಿಂತಾ ನಾಸ್ತಿ ಜಗದ್ಧಾತಸ್ಸರ್ವಂ ಭದ್ರಂ ಭವಿಷ್ಯತಿ ।
ಶರಣಂ ವ್ರಜ ದೇವೇಶ ಶಂಕರಸ್ಯ ಮಹಾಪ್ರಭೋಃ ॥ ೨೫ ॥

ಮಹೇಶಶರಣಾಪನ್ನಾ ಯೇ ಜನಾ ಮನಸಾ ಮುದಾ ।
ತೇಷಾಂ ಪ್ರಜೇಶ ಭಕ್ತಾನಾಂ ನ ಕುತಶ್ಚಿದ್ಭಯಂ ಕ್ವಚಿತ್ ॥ ೨೬ ॥

ಶೃಂಗಾರಭಂಗಸ್ಸಮಯೇ ಭವಿತಾ ನಾಧುನಾ ವಿಧೇ ।
ಕಾಲಪ್ರಯುಕ್ತಂ ಕಾರ್ಯಂ ಚ ಸಿದ್ಧಿಂ ಪ್ರಾಪ್ನೋತಿ ನಾನ್ಯಥಾ ॥ ೨೭ ॥

ಶಂಭೋಸ್ಸಂಭೋಗಮಿಷ್ಟಂ ಕೋ ಭೇದಂ ಕರ್ತುಮಿಹೇಶ್ವರಃ ।
ಪೂರ್ಣೇ ವರ್ಷಸಹಸ್ರೇ ಚ ಸ್ವೇಚ್ಛಯಾ ಹಿ ವಿರಂಸ್ಯತಿ ॥ ೨೮ ॥

---

ವಿಶ್ರಾಂತಿಯನ್ನೇ ಹೊಂದಲಿಲ್ಲ. ಈಗ ನಾವು ಮುಂದೇನು ಮಾಡಬೇಕು ? ದಯ ವಿಟ್ಟು ತಿಳಿಸು ಎಂದು ಪ್ರಾರ್ಥಿಸಲು,

೨೫. ವಿಷ್ಣುವು ಹೇಳಿದನು :—ಜಗತ್ಕರ್ತೃವಾದ ಎಲೈ ಬ್ರಹ್ಮನೇ, ನೀನು ಚಿಂತೆಯನ್ನು ಬಿಡು. ಎಲ್ಲವೂ ಒಳ್ಳೆಯದಾಗುವುದು. ನೀನು ಆ ಮಹಾಮಹಿಮನಾದ ಶಂಕರನನ್ನು ಶರಣುಹೊಂದು.

೨೬. ಎಲೈ ಪ್ರಜೇಶನೇ, ಯಾರು ಶಂಕರನನ್ನು ಸಂತೋಷದಿಂದ ಮನಃಪೂರ್ವಕವಾಗಿ ಶರಣುಹೊಂದುವರೋ ಅಂತಹ ಭಕ್ತರಿಗೆ ಎಲ್ಲಿಯೂ ಯಾವಾಗಲೂ ಭಯವಿರುವುದಿಲ್ಲ.

೨೭. ಎಲೈ ವಿಧಿಯೇ, ಪಾರ್ವತೀಪರಮೇಶ್ವರರಲ್ಲಿ ಹರಿಯುತ್ತಿರುವ ಶೃಂಗಾರ ರಸದ ಭಂಗವು ಈಗಲೇ ಆಗುವುದಿಲ್ಲ. ಕಾಲವು ಬಂದಾಗ ಕಾರ್ಯವು ನೆರವೇರುವುದು. ಹಾಗಲ್ಲದೆ ಯಾವ ಕೆಲಸವೂ ಆಗಲಾರದು.

೨೮. ಯಾರುತಾನೇ ಈಶ್ವರನಿಗಿಷ್ಟವಾಗಿರುವ ಸಂಭೋಗವನ್ನು ತಪ್ಪಿಸಲು ಸಮರ್ಥರು ? ಸಹಸ್ರ ವರ್ಷಗಳು ಪೂರ್ಣವಾದನಂತರ ಈಶ್ವರನ ಸಂಭೋಗೇಚ್ಛೆಯು ಪೂರಯಿಸುವುದು. ಆಗ ಆತನೇ ವಿಶ್ರಾಂತಿಯನ್ನು ಹೊಂದುವನು.

ಸ್ತ್ರೀಪುಂಸೋ ರತಿವಿಚ್ಛೇದಮುಪಾಯೇನ ಕರೋತಿ ಯಃ ।
ತಸ್ಯ ಸ್ತ್ರೀಪುತ್ರಯೋರ್ಭೇದೋ ಭವೇಜ್ಜನ್ಮನಿ ಜನ್ಮನಿ ॥ ೨೯ ॥

ಭ್ರಷ್ಟಜ್ಞಾನೋ ನಷ್ಟಕೀರ್ತಿರಲಕ್ಷ್ಮೀಕೋ ಭವೇದಿತಿ ।
ಪ್ರಯಾತ್ಯಂತೇ ಕಾಲಸೂತ್ರಂ ವರ್ಷಲಕ್ಷಂ ಸ ಪಾತಕೀ ॥ ೩೦ ॥

ರಂಭಾಯುಕ್ತಂ ಶಕ್ರಮಿಮಂ ಚಕಾರ ವಿರತಂ ರತೌ ।
ಮಹಾಮುನೀಂದ್ರೋ ದುರ್ವಾಸಾಸ್ತತ್ಸ್ತ್ರೀಭೇದೋ ಬಭೂವ ಹ ॥ ೩೧ ॥

ಪುನರನ್ಯಾಂ ಸ ಸಂಪ್ರಾಪ್ಯ ವಿಷೇವ್ಯ ಶುಭಪಾಣಿಕಾಂ ।
ದಿವ್ಯಂ ವರ್ಷಸಹಸ್ರಂ ಚ ವಿಜಹೌ ವಿರಹಜ್ವರಂ ॥ ೩೨ ॥

---

೨೯. ಯಾರು ಯಾವುದಾದರೂ ಉಪಾಯದಿಂದ ಸ್ತ್ರೀಪುರುಷರ ಸಂಭೋಗವನ್ನು ತಪ್ಪಿಸುವರೋ ಅವರಿಗೆ ಪ್ರತಿ ಜನ್ಮದಲ್ಲಿಯೂ ಪುತ್ರಕಳತ್ರರ ವಿಯೋಗವುಂಟಾಗುವುದು.

೩೦. ಹಾಗೆ ತಪ್ಪಿಸಿದ ಪಾಪಿಯು ಜ್ಞಾನವಿಹೀನನಾಗಿ ಹುಟ್ಟುವನು. ಅವನಿಗೆ ಬರುವ ಕೀರ್ತಿಯು ನಾಶವಾಗುವುದು. ಐಶ್ವರ್ಯವನ್ನು ಕಳೆದುಕೊಳ್ಳುವನು. ಮತ್ತು ತಾನು ಸತ್ತನಂತರ ಲಕ್ಷವರ್ಷಗಳ ಕಾಲ ಕಾಲಸೂತ್ರವೆಂಬ ನರಕದಲ್ಲಿ ಬೀಳುವನು. ಈ ವಿಚಾರದಲ್ಲಿ ಕೆಲವು ದೃಷ್ಟಾಂತಗಳನ್ನು ಹೇಳುವೆನು ಕೇಳು.

೩೧. ಹಿಂದೆ ಇಂದ್ರನು ರಂಭೆಯೊಡನೆ ಭೋಗಪಡುವ ಕಾಲದಲ್ಲಿ ದೂರ್ವಾಸ ಮುನೀಂದ್ರನು ಅದನ್ನು ತಪ್ಪಿಸಿದನು. ಅದಕ್ಕೋಸ್ಕರವಾಗಿ ಆ ದೂರ್ವಾಸನಿಗೆ ತನ್ನ ಹೆಂಡತಿಯ ವಿಯೋಗವುಂಟಾಯಿತು.

೩೨. ಅನಂತರ ಇಂದ್ರನು ಶುಭಲಕ್ಷಣಸಂಪನ್ನೆಯಾದ ಮತ್ತೊಬ್ಬಳೊಡನೆ ದೇವಮಾನದ ಸಹಸ್ರ ವರ್ಷಗಳವರೆಗೆ ವಿಹರಿಸಿ ವಿರಹಜ್ವರವನ್ನು ಪರಿಹರಿಸಿಕೊಂಡನು.

ಘೃತಾಚ್ಯಾ ಸಹ ಸಂಶ್ಲಿಷ್ಟಂ ಕಾಮಂ ವಾರಿತವಾನ್ ಗುರುಃ ।
ಷಣ್ಮಾಸಾಭ್ಯಾಂತರೇ ಚಂದ್ರಸ್ತಸ್ಯ ಷತ್ನೀಂ ಜಹಾರ ಹಾ ॥ ೩೩ ॥

ಪುನಶ್ಶಿವಂ ಸಮಾರಾಧ್ಯ ಕೃತ್ವಾ ತಾರಾಮಯಂ ರಣಂ ।
ತಾರಾಂ ಸಗರ್ಭಾಂ ಸಂಪ್ರಾಪ್ಯ ವಿಜಹೌ ವಿರಹಜ್ವರಂ ॥ ೩೪ ॥

ಮೋಹಿನೀಸಹಿತಂ ಚಂದ್ರಂ ಚಕಾರ ವಿರತಂ ರತೌ ।
ಮಹರ್ಷಿಗೌತಮಸ್ತಸ್ಯ ಸ್ತ್ರಿವಿಚ್ಛೇದೋ ಬಭೂವ ಹ ॥ ೩೫ ॥

ಹರಿಶ್ಚಂದ್ರೋ ಹಾಲಿಕಂ ಚ ವೃಷಲ್ಯಾ ಸಹ ಸಂಯುತಂ ।
ಚಾರಯಾಮಾಸ ನಿಶ್ಚೇಷ್ಟಂ ನಿರ್ಜನೇ ತತ್ಫಲಂ ಶೃಣು ॥ ೩೬ ॥

ಭ್ರಷ್ಟಸ್ತ್ರೀಪುತ್ರರಾಜ್ಯೇಭ್ಯೋ ವಿಶ್ವಾಮಿತ್ರೇಣ ತಾಡಿತಃ ।
ತತಶ್ಶಿವಂ ಸಮಾರಾಧ್ಯ ಮುಕ್ತೋ ಭೂತೋ ಹಿ ಕಶ್ಮಲಾತ್ ॥ ೩೭ ॥

---

೩೩. ಮನ್ಮಥನು ಘೃತಾಚೀ ಎಂಬ ಅಪ್ಸರೆಯೊಡನೆ ಭೋಗಪಡುತ್ತಿರಲು ಬೃಹಸ್ಪತಿಯು ಅದನ್ನು ತಪ್ಪಿಸಿದನು. ಅದಕ್ಕೋಸ್ಕರ ಆರು ತಿಂಗಳೊಳಗೆ ಆ ಬೃಹಸ್ಪತಿಯ ಹೆಂಡತಿಯನ್ನು ಚಂದ್ರನು ಅಪಹರಿಸಿದನು.

೩೪. ಅನಂತರ ಬೃಹಸ್ಪತಿಯು ಶಿವನನ್ನು ಪೂಜಿಸಿ ತಾರೆಗೋಸ್ಕರವಾಗಿ ಯುದ್ಧಮಾಡಿ ಗರ್ಭಿಣಿಯಾಗಿರುವ ಅವಳನ್ನು ಪಡೆದು ವಿಯೋಗಜ್ವರವನ್ನು ಪರಿಹರಿಸಿಕೊಂಡನು.

೩೫. ಚಂದ್ರನು ಮೋಹಿನಿಯೊಡನಿರುವಾಗ ಗೌತಮಮಹರ್ಷಿಯು ಅವರ ಭೋಗವನ್ನು ತಪ್ಪಿಸಿದನು. ಅದಕ್ಕೋಸ್ಕರವಾಗಿ ಆ ಗೌತಮನಿಗೆ ಪತ್ನೀವಿಯೋಗ ವುಂಟಾಯಿತು.

೩೬. ಹರಿಶ್ಚಂದ್ರನು ಶೂದ್ರಸ್ತ್ರೀಯೊಡನೆ ಭೋಗಪಡುತ್ತಿರುವ ಹಾಲಿಕನೆಂಬುವನ ಭೋಗವನ್ನು ತಪ್ಪಿಸಿ ನಿರ್ಜನವಾದ ಸ್ಥಳದಲ್ಲಿ ಓಡಾಡಿಸಿದನು. ಅದರಿಂದುಂಟಾದ ಫಲವನ್ನು ಹೇಳುವೆನು ಕೇಳು.

೩೭. ಅದರಿಂದ ಹರಿಶ್ಚಂದ್ರನು ಪುತ್ರ, ಕಳತ್ರ, ರಾಜ್ಯ ಇವುಗಳಿಂದ ಬಿಡಲ್ಪಟ್ಟವನಾಗಿ ವಿಶ್ವಾಮಿತ್ರನ ತೊಂದರೆಗೆ ಒಳಗಾಗಿ ದುಃಖಪಟ್ಟನು. ಅನಂತರ ಶಿವನನ್ನು ಪೂಜಿಸಲು ಈ ತೊಂದರೆಗಳೆಲ್ಲವೂ ಪರಿಹಾರವಾದವು.

ಅಜಾಮಿಲಂ ದ್ವಿಜಶ್ರೇಷ್ಠಂ ವೃಷಲ್ಯಾ ಸಹ ಸಂಯುತಂ ।
ನ ಭಿಯಾ ವಾರಯಾಮಾಸುಸ್ಸುರಾಸ್ತಾಂ ಚಾಪಿ ಕೇಚನ ॥ ೩೮ ॥

ಸರ್ವಂ ನಿಷೇಕಸಾಧ್ಯಂ ಚ ನಿಷೇಕೋ ಬಲವಾನ್ವಿಧೇ ।
ನಿಷೇಕಫಲದೋ ವೈ ಸ ನಿಷೇಕಃ ಕೇನ ವಾರ್ಯತೇ ॥ ೩೯ ॥

ದಿವ್ಯಂ ವರ್ಷಸಹಸ್ರಂ ಚ ಶಂಭೋಃ ಸಂಭೋಗಕರ್ಮ ತತ್ ।
ಪೂರ್ಣೇ ವರ್ಷಸಹಸ್ರೇ ಚ ಗತ್ವಾ ತತ್ರ ಸುರೇಶ್ವರಾಃ ॥ ೪೦ ॥

ಯೇನ ವೀರ್ಯಂ ಪತೇದ್ಭೂಮೌ ತತ್ಕರಿಷ್ಯಥ ನಿಶ್ಚಿತಂ ।
ತತ್ರ ವೀರ್ಯೇ ಚ ಭವಿತಾ ಸ್ಕಂದನಾಮಾ ಪ್ರಭೋಸ್ಸುತಃ ॥ ೪೧ ॥

ಅಧುನಾ ಸ್ವಗೃಹಂ ಗಚ್ಛ ವಿಧೇ ಸುರಗಣೈಸ್ಸಹ ।
ಕರೋತು ಶಂಭುಸ್ಸಂಭೋಗಂ ಪಾರ್ವತ್ಯಾ ಸಹ ನಿರ್ಜನೇ ॥ ೪೨ ॥

---

೩೮. ಶೂದ್ರಸ್ತ್ರೀಯೊಡನೆ ಭೋಗಪಡುತ್ತಿದ್ದ ಅಜಾಮಿಲನೆಂಬ ಬ್ರಾಹ್ಮಣ ಶ್ರೇಷ್ಠನನ್ನು ಕೆಲವು ದೇವತೆಗಳೂ ಸಹ ಹೆದರಿಕೆಯಿಂದ ತಪ್ಪಿಸಲಿಲ್ಲ.

೩೯. ಎಲೈ ಬ್ರಹ್ಮನೇ, ಸಂಭೋಗಸುಖವೇ ಪ್ರಾಣಿಗಳಿಗೆ ಇಷ್ಟವಾದುದು. ಅದರಿಂದಲೇ ಎಲ್ಲವೂ ನಡೆಯುವುದು. ಇಂತಹ ಸಂಭೋಗವನ್ನು ಯಾರು ತಾನೇ ತಪ್ಪಿಸಲು ಸಮರ್ಥರು ?

೪೦-೪೧. ಈಶ್ವರನ ಸಂಭೋಗವು ದೇವಮಾನದ ಸಹಸ್ರ ವರ್ಷಗಳವರೆವಿಗೂ ನಡೆಯುವುದು. ಸಹಸ್ರ ವರ್ಷಗಳು ಕಳೆದ ಮೇಲೆ ದೇವತೆಗಳಾದ ನೀವೆಲ್ಲರೂ ಅಲ್ಲಿಗೆ ಹೋಗಿ ಆ ಶಂಕರನ ವೀರ್ಯವು ಭೂಮಿಯಲ್ಲಿ ಬೀಳುವಂತೆ ಮಾಡಿರಿ. ಆ ವೀರ್ಯದಿಂದ ಸ್ಕಂದನೆಂಬ ಹೆಸರುಳ್ಳ ಶಿವನ ಪುತ್ರನು ಹುಟ್ಟುವನು.

೪೨. ಎಲೈ ಬ್ರಹ್ಮನೇ, ಈಗ ನೀನು ದೇವತೆಗಳೊಡನೆ ನಿನ್ನ ಸ್ಥಾನಕ್ಕೆ ಹೊರಡು. ಶಂಕರನು ಪಾರ್ವತಿಯೊಡನೆ ರಹಸ್ಯಸ್ಥಾನದಲ್ಲಿ ಸಂಭೋಗವನ್ನು ಮಾಡಲಿ ಎಂದನು.

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ಕಮಲಾಕಾಂತಃ ಶೀಘ್ರಂ ಸ್ವಾಂತಃಪುರಂ ಯಯೌ ।
ಸ್ವಾಲಯಂ ಪ್ರಯಯುರ್ದೇವಾ ಮಯಾ ಸಹ ಮುನೀಶ್ವರ ॥ ೪೩ ॥

ಶಕ್ತಿಶಕ್ತಿಮತೋಶ್ಚಾಥ ವಿಹಾರೇಣಾತಿ ಚ ಕ್ಷಿತಿಃ ।
ಭಾರಾಕ್ರಾಂತಾ ಚಕಂಪೇ ಸಾ ಸಶೇಷಾಪಿ ಸಕಚ್ಛಪಾ ॥ ೪೪ ॥

ಕಚ್ಛಪಸ್ಯ ಹಿ ಭಾರೇಣ ಸರ್ವಾಧಾರಸ್ಸಮೀರಣಃ ।
ಸ್ತಂಭಿತೋಽಥ ತ್ರಿಲೋಕಾಶ್ಚ ಬಭೂವುರ್ಭಯವಿಹ್ವಲಾಃ ॥ ೪೫ ॥

ಅಥ ಸರ್ವೇ ಮಯಾ ದೇವಾ ಹರೇಶ್ಚ ಶರಣಂ ಯಯುಃ ।
ಸರ್ವಂ ನಿವೇದಯಾಂ ಚಕ್ರುಸ್ತದ್ವೃತ್ತಂ ದೀನಮಾನಸಾಃ ॥ ೪೬ ॥

॥ ದೇವಾ ಊಚುಃ ॥

ದೇವದೇವ ರಮಾನಾಥ ಸರ್ವಾವನಕರ ಪ್ರಭೋ ।
ರಕ್ಷ ನಃ ಶರಣಾಪನ್ನಾನ್ ಭಯವ್ಯಾಕುಲಮಾನಸಾನ್ ॥ ೪೭ ॥

---

೪೩. ಬ್ರಹ್ಮನು ಹೇಳಿದನು :—ಎಲೈ ನಾರದಮುನಿವರನೇ, ವಿಷ್ಣುವು ಈ ರೀತಿಯಾಗಿ ಹೇಳಿ ಶೀಘ್ರವಾಗಿ ತನ್ನ ಅಂತಃಪುರಕ್ಕೆ ಹೊರಟುಹೋದನು. ದೇವತೆಗಳೂ ಕೂಡ ನನ್ನೊಡನೆ ತಮ್ಮ ತಮ್ಮ ಮನೆಗಳಿಗೆ ಹೋದರು.

೪೪. ಶಕ್ತಿಸ್ವರೂಪಳಾದ ಪಾರ್ವತಿಯು ಮತ್ತು ಪ್ರಭುವಾದ ಪರಮೇಶ್ವರನ ವಿಹಾರದಿಂದ ಅತ್ಯಂತ ಭಾರಾಕ್ರಾಂತಳಾಗಿ ಭೂಮಿಯು ಆದಿಶೇಷ ಮತ್ತು ಆದಿಕೂರ್ಮರ ಆಶ್ರಯವನ್ನು ಹೊಂದಿದ್ದರೂ ಸಹ ನಡುಗಿದಳು.

೪೫. ಆ ಆದಿಕೂರ್ಮನ ಭಾರದಿಂದ ಸರ್ವಾಧಾರವಾದ ವಾಯುವು ಚಲಿಸದೆ ನಿಂತುಹೋಯಿತು. ವಾಯುವು ನಿಂತಿದ್ದರಿಂದ ಮೂರು ಲೋಕಗಳೂ ಭಯದಿಂದ ತತ್ತಳಿಸಿದವು.

೪೬. ಅನಂತರ ದೇವತೆಗಳೆಲ್ಲರೂ ನನ್ನೊಡನೆ ಹೊರಟು ನಾರಾಯಣನನ್ನು ಶರಣುಹೊಂದಿದರು. ದುಃಖಿತರಾಗಿ ಎಲ್ಲಾ ವಿಷಯವನ್ನೂ ಅವನಲ್ಲಿ ಹೇಳಿಕೊಂಡರು.

೪೭. ದೇವತೆಗಳು ಹೇಳಿದರು :—ಎಲೈ ದೇವದೇವನಾದ ವಿಷ್ಣುವೇ, ನೀನು ಸರ್ವರಕ್ಷಕನಾದ ಪ್ರಭುವು, ನಮಗೆ ಮಹತ್ತಾದ ಭಯವು ಪ್ರಾಪ್ತವಾಗಿರುವುದು. ನಮ್ಮನ್ನು ನೀನೇ ರಕ್ಷಿಸಬೇಕು. ನಾವು ನಿನ್ನನ್ನು ಶರಣುಹೊಂದಿರುವೆವು.

ಸ್ತಂಭಿತಸ್ತ್ರಿಗತಪ್ರಾಣೋ ನ ಜಾನೇ ಕೇನ ಹೇತುನಾ ।
ವ್ಯಾಕುಲಂ ಮುನಿಭಿರ್ಲೋಕೈಸ್ತ್ರೈಲೋಕ್ಯಂ ಸ ಚರಾಚರಂ ॥ ೪೮ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ಸಕಲಾ ದೇವಾ ಮಯಾ ಸಹ ಮುನೀಶ್ವರ ।
ದೀನಾಸ್ತಸ್ಥುಃ ಪುರೋ ವಿಷ್ಣೋರ್ವಾಗ್ನೀಭೂತಾಸ್ಸುದುಃಖಿತಾಃ ॥ ೪೯ ॥

ತದಾಕರ್ಣ್ಯ ಸಮಾದಾಯ ಸುರಾನ್ನಃ ಸಕಲಾನ್ ಹರಿಃ ।
ಜಗಾಮ ಪರ್ವತಂ ಶೀಘ್ರಂ ಕೈಲಾಸಂ ಶಿವವಲ್ಲಭಂ ॥ ೫೦ ॥

ತತ್ರ ಗತ್ವಾ ಹರಿರ್ದೇವೈರ್ಮಯಾ ಚ ಸುರವಲ್ಲಭಃ ।
ಯಯೌ ಶಿವವರಸ್ಥಾನಂ ಶಂಕರಂ ದ್ರಷ್ಟುಕಾಮ್ಯಯಾ ॥ ೫೧ ॥

ತತ್ರ ದೃಷ್ಟ್ವಾ ಶಿವಂ ವಿಷ್ಣುರ್ನ ಸುರೈರ್ವಿಸ್ಮಿತೋಽಭವತ್ ।
ತತ್ರ ಸ್ಥಿತಾನ್ ಶಿವಗಣಾನ್ ಪಪ್ರಚ್ಛ ವಿನಯಾನ್ವಿತಃ ॥ ೫೨ ॥

---

೪೮. ಜಗದಾಧಾರವಾಗಿರುವ ವಾಯುವು ನಿಂತುಹೋಗಿರುವುದು. ಕಾರಣ ವೇನೆಂಬುದು ನಮಗೆ ಗೊತ್ತಿಲ್ಲ. ಮುನಿಗಳೆಲ್ಲರೂ ವ್ಯಾಕುಲರಾಗಿರುವರು. ಚರಾಚರಾತ್ಮಕವಾದ ಮೂರು ಲೋಕವೂ ವಾಕ್ಯಲಿತವಾಗಿರುವುದು ಎಂದರು.

೪೯. ಬ್ರಹ್ಮನು ಹೇಳಿದನು :—ಎಲೈ ನಾರದನೇ! ದೇವತೆಗಳೆಲ್ಲರೂ ಈ ರೀತಿಯಾಗಿ ಹೇಳಿ ವಿಷ್ಣುವಿನ ಮುಂಭಾಗದಲ್ಲಿ ಬಹಳ ದುಃಖದಿಂದ ದೀನರಾಗಿ ನಿಂತಿದ್ದರು.

೫೦-೫೧. ದೇವತೆಗಳು ಹೇಳಿದ ಮಾತನ್ನು ಕೇಳಿ ಆ ನಾರಾಯಣನು ನಮ್ಮನ್ನೆಲ್ಲಾ ಕರೆದುಕೊಂಡು ಶಿವನಿಗೆ ಪ್ರೀತಿಯ ಸ್ಥಳವಾದ ಕೈಲಾಸಪರ್ವತಕ್ಕೆ ಬಂದು ಶಿವನನ್ನು ನೋಡಲು ಅವನಿರುವ ಜಾಗಕ್ಕೆ ಹೊರಟನು.

೫೨. ಅಲ್ಲಿ ಶಿವನನ್ನು ಕಾಣದೆ ವಿಷ್ಣುವು ವಿಸ್ಮಿತನಾದನು. ದೇವತೆಗಳಿಗೂ ಆಶ್ಚರ್ಯವುಂಟಾಯಿತು. ಆಗ ಅಲ್ಲಿರುವ ಶಿವಗಣಗಳನ್ನು ವಿನಯದಿಂದ ಪ್ರಶ್ನೆ ಮಾಡಿದನು.

॥ ವಿಷ್ಣುರುವಾಚ ॥

ಹೇ ಶಾಂಕರಾಃ ಶಿವಃ ಕುತ್ರ ಗತಸ್ಸರ್ವಪ್ರಭುರ್ಗಣಾಃ ।
ನಿವೇದಯತ ನಃ ಪ್ರೀತ್ಯಾ ದುಃಖಿತಾನ್ವೈ ಕೃಪಾಲವಃ ॥ ೫೩ ॥

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯ ಸಾಮರಸ್ಯ ಹರೇರ್ಗಣಾಃ ।
ಪ್ರೋಚುಃ ಪ್ರೀತ್ಯಾ ಗಣಾಸ್ತೇ ಹಿ ಶಂಕರಸ್ಯ ರಮಾಪತಿಂ ॥ ೫೪ ॥

॥ ಶಿವಗಣಾ ಊಚುಃ ॥

ಹರೇ ಶೃಣು ಶಿವಪ್ರೀತ್ಯಾ ಯಥಾರ್ಥಂ ಬ್ರೂಮಹೇ ವಯಂ ।
ಬ್ರಹ್ಮಣಾ ನಿರ್ಜರೈಸ್ಸಾರ್ಧಂ ವೃತ್ತಾಂತಮಖಿಲಂ ಚ ಯತ್ ॥ ೫೫ ॥

ಸರ್ವೇಶ್ವರೋ ಮಹಾದೇವೋ ಜಗಾಮ ಗಿರಿಜಾಲಯಂ ।
ಸಂಸ್ಥಾಪ್ಯ ನೋಽತ್ರ ಸುಪ್ರೀತ್ಯಾ ನಾನಾಲೀಲಾವಿಶಾರದಃ ॥ ೫೬ ॥

ತದ್ಗುಹಾಭ್ಯಂತರೇ ಶಂಭುಃ ಕಿಂ ಕರೋತಿ ಮಹೇಶ್ವರಃ ।
ನ ಜಾನೀಮೋ ರಮಾನಾಥ ವ್ಯತೀಯುರ್ಬಹವಸ್ಸಮಾಃ ॥ ೫೭ ॥

---

೫೩. ಎಲೈ ಶಿವಗಣಗಳಿರಾ, ಶಂಕರನು ಈಗ ಎಲ್ಲಿರುವನು? ಅದನ್ನು ದಯವಿಟ್ಟು ನಮಗೆ ತಿಳಿಸಿ, ನಾವು ದುಃಖಿಗಳಾಗಿರುವೆವು. ನೀವು ಕೃಪಾಳುಗಳು ಎಂದನು.

೫೪. ಬ್ರಹ್ಮನು ಹೇಳಿದನು :—ದೇವತೆಗಳೊಡನೆ ವಿಷ್ಣುವು ಶಿವಗಣಗಳನ್ನು ಪ್ರಶ್ನಿಸಿದುದನ್ನು ಕೇಳಿ ಆ ಶಿವಗಣಗಳು ವಿಷ್ಣುವನ್ನು ಕುರಿತು,

೫೫. ಶಿವಗಣಗಳು ಹೇಳುವುವು :—ಎಲೈ ವಿಷ್ಣುವೇ ನಾವು ನಿಜವಾದ ವಿಷಯವನ್ನು ಹೇಳುವೆವು. ಬ್ರಹ್ಮನೇ ಮೊದಲಾದ ದೇವತೆಗಳೂ ನೀನೂ ಈ ವೃತ್ತಾಂತವೆಲ್ಲವನ್ನೂ ಕೇಳಿ.

೫೬-೫೭. ಎಲೈ ಲಕ್ಷ್ಮೀಪತಿಯೇ, ಸರ್ವಪ್ರಭುವಾದ ಆ ಮಹಾದೇವನು ನಮ್ಮನ್ನೆಲ್ಲಾ ಇಲ್ಲಿಯೇ ಇರಿಸಿ ಗಿರಿಜಾಲಯಕ್ಕೆ ಹೊರಟುಹೋದನು. ವಿವಿಧಲೀಲಾವಿಶಾರದನಾದ ಆತನು ಆ ಗುಹೆಯ ಒಳಗಡೆ ಏನು ಮಾಡುತ್ತಿರುವನೆಂಬ ವಿಷಯವು ನಮಗೆ ತಿಳಿಯದು. ಗಿರಿಜೆಯೊಡನೆ ಆ ಗುಹೆಯೊಳಕ್ಕೆ ಹೋಗಿ ಅನೇಕ ವರ್ಷಗಳು ಕಳೆದುಹೋದವು ಎಂದವು.

॥ ಬ್ರಹ್ಮೋವಾಚ ॥

ಶ್ರುತ್ವೇತಿ ವಚನಂ ತೇಷಾಂ ಸ ವಿಷ್ಣುಸ್ಸಾಮರೋ ಮಯಾ ।
ವಿಸ್ಮಿತೋಽತಿ ಮುನಿಶ್ರೇಷ್ಠ ಶಿವದ್ವಾರಂ ಜಗಾಮ ಹ ॥ ೫೮ ॥

ತತ್ರ ಗತ್ವಾ ಮಯಾ ದೇವೈಸ್ಸ ಹರಿರ್ದೇವವಲ್ಲಭಃ ।
ಆರ್ತವಾಣ್ಯಾ ಮುನೇ ಪ್ರೋಚೇ ತಾರಸ್ವರತಯಾ ತದಾ ॥ ೫೯ ॥

ಶಂಭುಮಸ್ತೌನ್ಮಹಾಪ್ರೀತ್ಯಾ ಸಾಮರೋ ಹಿ ಮಯಾ ಹರಿಃ ।
ತತ್ರ ಸ್ಥಿತೋ ಮುನಿಶ್ರೇಷ್ಠ ಸರ್ವಲೋಕಪ್ರಭುಂ ಹರಂ ॥ ೬೦ ॥

॥ ವಿಷ್ಣುರುವಾಚ ॥

ಕಿಂ ಕರೋಷಿ ಮಹಾದೇವಾಽಭ್ಯಂತರೇ ಪರಮೇಶ್ವರ ।
ತಾರಕಾರ್ತಾನ್ಸುರಾನ್ಸರ್ವಾನ್ ಪಾಹಿ ನಃ ಶರಣಾಗತಾನ್ ॥ ೬೧ ॥

ಇತ್ಯಾದಿ ಸಂಸ್ತುವನ್ ಶಂಭುಂ ಬಹುಧಾ ಸೋಽಮರೈರ್ಮಯಾ ।
ರುರೋದಾತಿ ಹರಿಸ್ತತ್ರ ತಾರಕಾರ್ತೈರ್ಮುನೀಶ್ವರ ॥ ೬೨ ॥

---

೫೮. ಬ್ರಹ್ಮನು ಹೇಳಿದನು:—ಎಲೈ ಮುನಿವರನೇ, ಆ ಶಿವಗಣಗಳು ಹೇಳಿದ ಮಾತನ್ನು ಕೇಳಿ ದೇವತೆಗಳೂ, ನಾನೂ, ವಿಷ್ಣುವೂ ಎಲ್ಲರೂ ಆತ್ಯಾಶ್ಚರ್ಯದಿಂದ ಶಿವನಿರುವ ಗುಹೆಯ ದ್ವಾರಕ್ಕೆ ಹೋದೆವು.

೫೯-೬೦. ಅಲ್ಲಿಗೆ ಹೋದಮೇಲೆ ವಿಷ್ಣುವು ಆರ್ತನಾದದಿಂದಲೂ, ಉಚ್ಚಸ್ವರದಿಂದಲೂ ಸ್ತೋತ್ರಮಾಡಿದನು. ನಾನೂ, ದೇವತೆಗಳೂ ಸಹ ಸರ್ವಲೋಕೇಶ್ವರನಾದ ಆ ಹರನನ್ನು ಸ್ತೋತ್ರಮಾಡಿದೆವು.

೬೧. ವಿಷ್ಣುವು ಹೇಳಿದನು;—ಎಲೈ ಪರಮೇಶ್ವರನೇ, ಒಳಗಡೆ ಏನು ಮಾಡುತ್ತಿರುವೆ? ನಾವೆಲ್ಲರೂ ತಾರಕಾಸುರನಿಂದ ಆರ್ತರಾಗಿರುತ್ತೇವೆ. ಶರಣಾಗತರಾದ ನಮ್ಮನ್ನು ಕಾಪಾಡು.

೬೨. ಎಲೈ ಮುನಿವರನೇ, ಹೀಗೆ ಅನೇಕ ಪ್ರಕಾರವಾಗಿ ಆ ಶಂಭುವನ್ನು ಸ್ತೋತ್ರಮಾಡಿ ವಿಷ್ಣುವು ಅತಿಯಾಗಿ ರೋದಿಸಿದನು.

ದುಃಖಕೋಲಾಹಲಸ್ತತ್ರ ಬಭೂವ ತ್ರಿದಿವೌಕಸಾಂ ।
ಮಿಶ್ರಿತಶ್ಶಿವಸಂಸ್ತುತ್ಯಾಸುರಾರ್ತಾನಾಂ ಮುನೀಶ್ವರ ॥ ೬೩ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಕುಮಾರಖಂಡೇ ಶಿವವಿಹಾರವರ್ಣನಂ ನಾಮ
ಪ್ರಥಮೋಽಧ್ಯಾಯಃ



---

೬೩. ಎಲೈ ಮುನಿಶ್ರೇಷ್ಠನೇ, ದೇವತೆಗಳಲ್ಲೆಲ್ಲಾ ದುಃಖ ಕೋಲಾಹಲವು ಹಬ್ಬಿತು. ಆರ್ತರಾದ ದೇವತೆಗಳೆಲ್ಲರೂ ದುಃಖಮಿಶ್ರಿತವಾದ ಧ್ವನಿಯಿಂದ ಶಿವನನ್ನು ಸ್ತೋತ್ರಮಾಡಿದರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ರುದ್ರಸಂಹಿತೆಯ ಕುಮಾರಖಂಡದಲ್ಲಿ
ಶಿವವಿಹಾರವರ್ಣನವೆಂಬ ಮೊದಲನೆಯ ಅಧ್ಯಾಯವು
ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಕುಮಾರಖಂಡೇ

## ದ್ವಿತೀಯೋಽಧ್ಯಾಯಃ

॥ ಬ್ರಹ್ಮೋವಾಚ ॥

ತದಾಕರ್ಣ್ಯ ಮಹಾದೇವೋ ಯೋಗಜ್ಞಾನವಿಶಾರದಃ ।
ತ್ಯಕ್ತಕಾಮೋ ನ ತತ್ಯಾಜ ಸಂಭೋಗಂ ಪಾರ್ವತೀಭಯಾತ್ ॥ ೧ ॥

ಆಜಗಾಮ ಗೃಹದ್ವಾರಿ ಸುರಾಣಾಂ ನಿಕಟಂ ಶಿವಃ ।
ದೈತ್ಯೇನ ಪೀಡಿತಾನಾಂ ಚ ಶಂಕರೋ ಭಕ್ತವತ್ಸಲಃ ॥ ೨ ॥

---

ಎರಡನೆಯ ಅಧ್ಯಾಯವು.

೧. ದೇವತೆಗಳ ಆರ್ತನಾದವನ್ನು ಕೇಳಿ ಯೋಗಜ್ಞಾನವಿಶಾರದನಾದ ಮಹಾದೇವನು ಕಾಮವನ್ನು ಬಿಟ್ಟವನಾದರೂ ಪಾರ್ವತಿಯ ಭಯದಿಂದ ಸಂಭೋಗವನ್ನು ಮಾತ್ರ ಬಿಡಲಿಲ್ಲ.

೨. ಆದರೆ ಭಕ್ತವತ್ಸಲನಾದ ಶಿವನು ತಾರಕನ ಪೀಡೆಗೊಳಗಾದ ದೇವತೆಗಳನ್ನು ನೋಡಲು ಆ ಗುಹೆಯ ಬಾಗಿಲಿಗೆ ಬಂದನು.

ದೇವಾಸ್ಸರ್ವೇ ಪ್ರಭುಂ ದೃಷ್ಟ್ವಾ ಹರಿಣಾ ಚ ಮಯಾ ಶಿವಂ ।
ಬಭೂವುಸ್ಸುಖಿನಶ್ಚಾತಿ ತದಾ ವೈ ಭಕ್ತವತ್ಸಲಂ ॥ ೩ ॥

ಪ್ರಣಮ್ಯ ಸುಮಹಾಪ್ರೀತ್ಯಾ ನತಸ್ಕಂಧಾಶ್ಚ ನಿರ್ಜರಾಃ ।
ತುಷ್ಟುವುಃ ಶಂಕರಂ ಸರ್ವೇ ಮಯಾ ಚ ಹರಿಣಾ ಮುನೇ ॥ ೪ ॥

॥ ದೇವಾ ಊಚುಃ ॥

ದೇವದೇವ ಮಹಾದೇವ ಕರುಣಾಸಾಗರ ಪ್ರಭೋ ।
ಅಂತರ್ಯಾಮೀ ಹಿ ಸರ್ವೇಷಾಂ ಸರ್ವಂ ಜಾನಾಸಿ ಶಂಕರ ॥ ೫ ॥

ದೇವಕಾರ್ಯಂ ಕುರು ವಿಭೋ ರಕ್ಷ ದೇವಾನ್ ಮಹೇಶ್ವರ ।
ಜಹಿ ದೈತ್ಯಾನ್ ಕೃಪಾಂ ಕೃತ್ವಾ ತಾರಕಾದೀನ್ ಮಹಾಪ್ರಭೂನ್ ॥ ೬ ॥

ಇತ್ಯಾಕರ್ಣ್ಯ ವಚಸ್ತೇಷಾಂ ಸುರಾಣಾಂ ಭಗವನ್ಭವಃ ।
ಪ್ರತ್ಯುವಾಚ ವಿಷಣ್ಣಾತ್ಮಾ ದೂಯಮಾನೇನ ಚೇತಸಾ ॥ ೭ ॥

---

೩. ನಾನು (ಬ್ರಹ್ಮ) ವಿಷ್ಣು ಮುಂತಾದ ದೇವತೆಗಳು ಭಕ್ತವತ್ಸಲನಾದ ಆ ಶಿವನನ್ನು ನೋಡಿ ಆ ಶಿವದರ್ಶನದಿಂದ ಅತ್ಯಂತ ಸಂತೋಷ ಪಟ್ಟೆವು.

೪. ಎಲೈ ನಾರದನೇ, ಅನಂತರ ದೇವತೆಗಳೆಲ್ಲರೂ ಮಹಾಪ್ರೀತಿಯಿಂದ ಶಂಕರನನ್ನು ನಮಸ್ಕರಿಸುತ್ತಾ ಸ್ತೋತ್ರಮಾಡಿದರು.

೫. ದೇವತೆಗಳು ಹೇಳಿದರು :—ಎಲೈ ದೇವದೇವನಾದ ಶಿವನೇ, ನೀನು ಕರುಣಾಸಾಗರನು. ಎಲ್ಲರಿಗೂ ಪ್ರಭುವು. ಸರ್ವಾಂತರ್ಯಾಮಿಯು. ಸರ್ವಜ್ಞನು. ಭಕ್ತರಿಗೆ ಮಂಗಳವನ್ನುಂಟುಮಾಡುವವನು.

೬. ಎಲೈ ಪ್ರಭುವೇ, ಮಹೇಶ್ವರನಾದ ನೀನು ದೇವತೆಗಳ ಕಾರ್ಯವನ್ನು ನಿರ್ವಹಿಸಬೇಕು. ತಾರಕನೇ ಮೊದಲಾದ ರಾಕ್ಷಸರನ್ನು ಕೊಂದು ದೇವತೆಗಳನ್ನು ರಕ್ಷಿಸಬೇಕು ಎಂದು ಪ್ರಾರ್ಥಿಸಲು,

೭. ದೇವತೆಗಳು ಹೇಳಿದ ಮಾತನ್ನು ಕೇಳಿ ಭಗವಂತನಾದ ಶಂಕರನು ಬಹಳ ದುಃಖಿತನಾಗಿ ಅವರನ್ನು ಕುರಿತು ಮಾತನಾಡಿದನು.

॥ ಶಿವ ಉವಾಚ ॥

ಹೇ ವಿಷ್ಣೋ ಹೇ ವಿಧೇ ದೇವಾಸ್ಸರ್ವೇಷಾಂ ವೋ ಮನೋಗತಿಃ ।
ಯದ್ಭಾವಿ ತದ್ಭವತ್ಯೇವ ಕೋಽಪಿ ನೋ ತನ್ನಿವಾರಕಃ ॥ ೮ ॥

ಯಜ್ಞಾತಂ ತಜ್ಞಾತಮೇವಾತ್ರ ಪ್ರಸ್ತುತಂ ಶೃಣುತಾಮರಾಃ ।
ಸ್ಖಲಿತಂ ಶಿವವೀರ್ಯಂ ತು ಕೋಗ್ರಹೀಷ್ಯತಿ ಮೇಽಧುನಾ ॥ ೯ ॥

ಸ ಗೃಹ್ಣೀಯಾದಿತಿ ಪ್ರೋಚ್ಯ ಪಾತಯಾಮಾಸ ತದ್ಭುವಿ ।
ಅಗ್ನಿರ್ಭೂತ್ವಾ ಕಪೋತೋ ಹಿ ಪ್ರೇರಿತಸ್ಸರ್ವನಿರ್ಜರೈಃ ॥ ೧೦ ॥

ಅಭಕ್ಷಚ್ಛಾಂಭವಂ ವೀರ್ಯಂ ಚಂಚ್ವಾ ತು ನಿಖಿಲಂ ತದಾ ।
ಏತಸ್ಮಿನ್ನಂತರೇ ತತ್ರಾಽಽಜಗಾಮ ಗಿರಿಜಾ ಮುನೇ ॥ ೧೧ ॥

ಶಿವಾಗಮವಿಲಂಬೇ ಚ ದದರ್ಶ ಸುರಪುಂಗವಾನ್ ।
ಜ್ಞಾತ್ವಾ ತದ್ವೃತ್ತಮಖಿಲಂ ಮಹಾಕ್ರೋಧಯುತಾ ಶಿವಾ ॥ ೧೨ ॥

---

೮. ಶಿವನು ಹೇಳಿದನು :–ಎಲೈ ವಿಷ್ಣುವೇ, ಬ್ರಹ್ಮನೇ, ಮತ್ತು ದೇವತೆಗಳೇ, ನಿಮ್ಮ ಮನಸ್ಸಿನಲ್ಲಿರುವ ಅಭಿಪ್ರಾಯವು ತಿಳಿಯಿತು. ಯಾವುದು ಆಗಬೇಕಾಗಿರುವುದೋ ಅದು ಆಗಿಯೇ ಆಗುವುದು. ಅದನ್ನು ನಿವಾರಿಸಲು ಯಾರಿಗೂ ಸಾಧ್ಯವೇ ಇಲ್ಲ.

೯. ಯಾವುದು ಆಗಬೇಕಾಗಿದ್ದಿತೋ ಅದು ಆಗಿಹೋಯಿತು. ಈಗ ನನ್ನ ವೀರ್ಯವು ನೆಲದಮೇಲೆ ಬೀಳುವುದು. ಅದನ್ನು ಧರಿಸಲು ಯಾರು ಸಮರ್ಥರು ?

೧೦. ಅಂತಹ ಸಮರ್ಥನಿದ್ದರೆ ಧರಿಸಲೆಂದು ಹೇಳಿ ತನ್ನ ವೀರ್ಯವನ್ನು ಭೂಮಿಯಮೇಲೆ ಬೀಳುವಂತೆ ಮಾಡಿದನು. ದೇವತೆಗಳೆಲ್ಲರ ಪ್ರೇರಣೆಯಿಂದ ಅಗ್ನಿಯು ಪಾರಿವಾಳದ ರೂಪವನ್ನು ಧರಿಸಿ ಅಲ್ಲಿಗೆ ಹೋದನು.

೧೧. ಎಲೈ ಮುನಿಯೇ, ಪಾರಿವಾಳದ ರೂಪವನ್ನು ಧರಿಸಿದ ಅಗ್ನಿಯು ತನ್ನ ಕೊಕ್ಕಿನಿಂದ ಆ ಈಶ್ವರನ ವೀರ್ಯವೆಲ್ಲವನ್ನೂ ತಿಂದುಬಿಟ್ಟನು. ಇದೇ ಸಮಯದಲ್ಲಿಯೆ ಗಿರಿಜೆಯು ಅಲ್ಲಿಗೆ ಬಂದಳು.

೧೨-೧೩. ಶಿವನು ಒಳಕ್ಕೆಬರಲು ಇಷ್ಟು ನಿಧಾನವಾದುದನ್ನು ತಿಳಿಯಲು ಪಾರ್ವತಿಯು ಅಲ್ಲಿಗೆ ಬಂದು ದೇವತೆಗಳನ್ನು ನೋಡಿದಳು. ಅವರು ಬಂದ ವೃತ್ತಾಂತ

ಉವಾಚ ತ್ರಿದಿಶಾನ್ ಸರ್ವಾನ್ ಹರಿಪ್ರಭೃತಿಕಾಂಸ್ತದಾ ॥ ೧೩ ॥

॥ ದೇವ್ಯುವಾಚ ॥

ರೇ ರೇ ಸುರಗಣಾಸ್ಸರ್ವೇ ಯೂಯಂ ದುಷ್ಟಾ ವಿಶೇಷತಃ ।
ಸ್ವಾರ್ಥಸಂಸಾಧಕಾ ನಿತ್ಯಂ ತದರ್ಥಂ ಪರದುಃಖದಾಃ ॥ ೧೪ ॥

ಸ್ವಾರ್ಥಹೇತೋರ್ಮಹೇಶಾನಮಾರಾಧ್ಯ ಪರಮಂ ಪ್ರಭುಂ ।
ನಷ್ಟಂ ಚಕ್ರುರ್ಮದ್ವಿಹಾರಂ ವಂಧ್ಯಾ್ಯಭವಮಹಂ ಸುರಾಃ ॥ ೧೫ ॥

ಮಾಂ ವಿರೋಧ್ಯ ಸುಖಂ ನೈವ ಕೇಷಾಂಚಿದಪಿ ನಿರ್ಜರಾಃ ।
ತಸ್ಮಾದ್ದುಃಖಂ ಭವೇದ್ವೋ ಹಿ ದುಷ್ಟಾನಾಂ ತ್ರಿದಿಸೌಕಸಾಂ ॥ ೧೬ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ವಿಷ್ಣುಪ್ರಮುಖಾಸ್ಸುರಾನ್ಸರ್ವಾನ್ ಶಶಾಪ ಸಾ ।
ಪ್ರಜ್ವಲಂತೀ ಪ್ರಕೋಪೇನ ಶೈಲರಾಜಸುತಾ ಶಿವಾ ॥ ೧೭ ॥

---

ವೆಲ್ಲವನ್ನೂ ತಿಳಿದು ಬಹಳ ಕೋಪಗೊಂಡು ವಿಷ್ಣುವೇ ಮೊದಲಾದ ದೇವತೆಗಳನ್ನು ಕುರಿತು,

೧೪. ಪಾರ್ವತಿಯು ಹೇಳಿದಳು:--ಎಲೈ ನೀಚರಾದ ದೇವತೆಗಳಿರಾ, ನೀವು ಅತಿ ದುಷ್ಟರು. ಯಾವಾಗಲೂ ಸ್ವಾರ್ಥಸಾಧನೆಯಲ್ಲಿ ತತ್ಪರರಾಗಿ ಅದಕ್ಕೋಸ್ಕರ ಪರರಿಗೆ ದುಃಖವನ್ನುಂಟುಮಾಡುವವರು.

೧೫. ನಿಮ್ಮ ಕೆಲಸವನ್ನು ಸಾಧಿಸಿಕೊಳ್ಳುವುದಕ್ಕಾಗಿ ಪರಮಪ್ರಭುವಾದ ಈಶ್ವರನನ್ನು ಒಲಿಸಿಕೊಂಡು ನನ್ನ ಭೋಗವನ್ನು ನಾಶಮಾಡಿರುವಿರಿ. ಎಲೈ ದೇವತೆಗಳೇ, ನಾನು ಮಕ್ಕಳಿಲ್ಲದವಳಾದೆನು.

೧೬. ನನ್ನ ಸುಖಕ್ಕೆ ಭಂಗವನ್ನು ತಂದಿದ್ದರಿಂದ ನಿಮಗಾರಿಗೂ ಸುಖವುಂಟಾಗುವುದಿಲ್ಲ. ದುಷ್ಟರಾದ ನಿಮಗೆಲ್ಲರಿಗೂ ದುಃಖವೇ ಉಂಟಾಗುವುದು ಎಂದಳು.

೧೭. ಬ್ರಹ್ಮನು ಹೇಳಿದನು.—ವಿಷ್ಣುವೇ ಮೊದಲಾದ ದೇವತೆಗಳನ್ನು ಕುರಿತು ಪರ್ವತರಾಜಪುತ್ರಿಯಾದ ಪಾರ್ವತಿಯು ಈ ರೀತಿ ಹೇಳಿ ಕೋಪದಿಂದ ಪ್ರಜ್ವಲಿಸುತ್ತಾ ಶಪಿಸಿದಳು.

॥ ಪಾರ್ವತ್ಯುವಾಚ ॥

ಅದ್ಯಪ್ರಭೃತಿ ದೇವಾನಾಂ ವಂಧ್ಯಾ ಭಾರ್ಯಾ ಭವಂತ್ವಿತಿ ।
ದೇವಾಶ್ಚ ದುಃಖಿತಾಸ್ಸಂತು ನಿಖಿಲಾ ಮದ್ವಿರೋಧಿನಃ ॥ ೧೮ ॥

॥ ಬ್ರಹ್ಮೋವಾಚ ॥

ಇತಿ ಶಪ್ತ್ವಾಖಿಲಾನ್ ದೇವಾನ್ ವಿಷ್ಣ್ವಾದ್ಯಾನ್ಸಕಲೇಶ್ವರೀ ।
ಉವಾಚ ಪಾವಕಂ ಕ್ರುದ್ಧಾ ಭಕ್ಷಕಂ ಶಿವರೇತಸಃ ॥ ೧೯ ॥

॥ ಪಾರ್ವತ್ಯುವಾಚ ॥

ಸರ್ವಭಕ್ಷೀ ಭವ ಶುಚೇ ಪೀಡಿತಾತ್ಮೇತಿ ನಿತ್ಯಶಃ ।
ಶಿವತತ್ತ್ವಂ ನ ಜಾನಾಸಿ ಮೂರ್ಖೋಽಸಿ ಸುರಕಾರ್ಯಕೃತ್ ॥ ೨೦ ॥

ರೇ ರೇ ಶಠ ಮಹಾದುಷ್ಟ ದುಷ್ಟಾನಾಂ ದುಷ್ಟಬೋಧವಾನ್ ।
ಅಭಕ್ಷಶ್ಶಿವವೀರ್ಯಂ ಯನ್ನಾಕಾರ್ಷೀದುಚಿತಂ ಹಿತಂ ॥ ೨೧ ॥

---

೧೮. ಪಾರ್ವತಿಯು ಮತ್ತೆ ಹೇಳಿದಳು.—ಎಲೈ ದೇವತೆಗಳೇ, ಇಂದಿನಿಂದ ನಿಮ್ಮ ಪತ್ನಿಯರೆಲ್ಲರೂ ಮಕ್ಕಳಿಲ್ಲದವರಾಗಲಿ. ನೀವೆಲ್ಲರೂ ನನಗೆ ವಿರೋಧವಾಗಿ ವರ್ತಿಸಿದ್ದರಿಂದ ದುಃಖಿತರಾಗಿರಿ.

೧೯. ಬ್ರಹ್ಮನು ಹೇಳಿದನು.—ಈ ರೀತಿಯಾಗಿ ವಿಷ್ಣುವೇ ಮೊದಲಾದ ದೇವತೆಗಳನ್ನು ಶಪಿಸಿ ಸಕಲೇಶ್ವರಿಯಾದ ಆ ಗಿರಿಜೆಯು, ಶಿವನ ರೇತಸ್ಸನ್ನು ಭಕ್ಷಿಸಿದ ಆ ಅಗ್ನಿಯನ್ನು ಕುರಿತು ಕೋಪದಿಂದ ನುಡಿದಳು.

೨೦-೨೧. ಪಾರ್ವತಿಯು ಹೇಳಿದಳು.—ಎಲೈ ಅಗ್ನಿಯೇ, ನೀನು ಸರ್ವಭಕ್ಷಕನಾಗು ಎಂದರೆ, ಎಲ್ಲಾ ಪದಾರ್ಥವನ್ನೂ ಭಕ್ಷಿಸುವವನಾಗು. ದಿನವೂ ನಿನಗೆ ದುಃಖವುಂಟಾಗಲಿ. ನೀನು ಮೂರ್ಖನು, ಶಿವನ ತತ್ವವನ್ನು ತಿಳಿಯಲಾರದೆ ದೇವತೆಗಳ ಕಾರ್ಯವನ್ನು ಮಾಡಲು ಹೋಗಿರುವೆ. ಎಲೈ ನೀಚನೇ, ಮೂರ್ಖನೇ, ನೀನು ಮಹಾದುಷ್ಟನು. ದುಷ್ಟರಿಗೆ ದುರ್ಬೋಧನೆಯನ್ನು ಮಾಡುವವನು. ಶಿವನ ವೀರ್ಯವನ್ನು ಭಕ್ಷಿಸಿ ಅನುಚಿತವಾದ ಕೆಲಸವನ್ನೂ, ಅಹಿತವನ್ನೂ ಮಾಡಿರುವೆ ಎಂದಳು.

॥ ಬ್ರಹ್ಮೋವಾಚ ॥
ಇತಿ ಶಪ್ತ್ವಾ ಶಿವಾ ವಹ್ನಿಂ ಸಹೇಶೇನ ನಗಾತ್ಮಜಾ ।
ಜಗಾಮ ಸ್ವಾಲಯಂ ಶೀಘ್ರಮಸಂತುಷ್ಟಾ ತತೋ ಮುನೇ ॥ ೨೨ ॥

ಗತ್ವಾ ಶಿವಾ ಶಿವಂ ಸಮ್ಯಕ್ ಬೋಧಯಾಮಾಸ ಯತ್ನತಃ ।
ಅಜೀಜನತ್ಪರಂ ಪುತ್ರಂ ಗಣೇಶಾಖ್ಯಂ ಮುನೀಶ್ವರ ॥ ೨೩ ॥

ತದ್ವೃತ್ತಾಂತಮಶೇಷಂ ಚ ವರ್ಣಯಿಷ್ಯೇ ಮುನೇಽಗ್ರತಃ ।
ಇದಾನೀಂ ಶೃಣು ಸುಪ್ರೀತ್ಯಾ ಗುಹೋತ್ಪತ್ತಿಂ ವದಾಮ್ಯಹಂ ॥ ೨೪ ॥

ಪಾವಕಾದಿತಮನ್ನಾದಿ ಭುಂಜತೇ ನಿರ್ಜರಾಃ ಖಲು ।
ವೇದವಾಣ್ಯೇತಿ ಸರ್ವೇ ತೇ ಸಗರ್ಭಾ ಅಭವನ್ಸುರಾಃ ॥ ೨೫ ॥

---

೨೨. ಬ್ರಹ್ಮನು ಹೇಳಿದನು.—ಎಲೈ ನಾರದನೇ, ಈರೀತಿಯಾಗಿ ಶಪಿಸಿ ಗಿರಿಜೆಯು ಈಶ್ವರನನ್ನು ಕರೆದುಕೊಂಡು ಜಾಗ್ರತೆಯಾಗಿ ತನ್ನಾಲಯಕ್ಕೆ ಅತೃಪ್ತಿ ಪಟ್ಟುಕೊಂಡು ತೆರಳಿದಳು.

೨೩. ಅನಂತರ ಪಾರ್ವತಿಯು ಈಶ್ವರನಿಗೆ ಪ್ರಯತ್ನಪೂರ್ವಕವಾಗಿ ವಿಲಾಸ ದಲ್ಲಿ ಪ್ರವೃತ್ತನಾಗುವಂತೆ ಬೋಧಿಸಿದಳು. ಆಗ ಪಾರ್ವತಿಗೆ ಗಣೇಶನೆಂಬ ಹೆಸ ರುಳ್ಳ ಪುತ್ರನು ಹುಟ್ಟಿದನು.

೨೪. ಎಲೈ ಮುನಿಯೇ, ಆ ಗಣೇಶೋತ್ಪತ್ತಿಯ ವಿಷಯವನ್ನು ಮುಂದೆ ಹೇಳುವೆನು. ಈಗ ಗುಹನ ಉತ್ಪತ್ತಿಯ ವಿಷಯವನ್ನು ಹೇಳುವೆನು ಪ್ರೀತಿಯಿಂದ ಕೇಳು.

೨೫. ದೇವತೆಗಳಿಗೆ ಆಹಾರವು ಅಗ್ನಿಯಲ್ಲಿ ಹೋಮಮಾಡಿಸುವುದರ ಮೂಲಕ ಸೇರಬೇಕಷ್ಟೆ ? ಎಂದರೆ ದೇವತೆಗಳು ಪ್ರತ್ಯಕ್ಷವಾಗಿ ಆಹಾರವನ್ನು ಸ್ವೀಕರಿ ಸುವುದಿಲ್ಲ. ಅಗ್ನಿಯು ದಹಿಸಿ ಆ ಮೂಲಕ ದೇವತೆಗಳಿಗೆ ತಲುಪುವುದು, ಎಂದು ವೇದ ವಾಕ್ಯ ವಿರುವುದು. ಅಗ್ನಿಯು ವೀರ್ಯವನ್ನು ತಿಂದದ್ದರಿಂದ ದೇವತೆಗಳೂ ತಿನ್ನಲೇ ಬೇಕಾಯಿತು. ದೇವತೆಗಳು ವೀರ್ಯವನ್ನು ತಿಂದು ಎಲ್ಲರೂ ಗರ್ಭವನ್ನು ಧರಿಸಿದರು.

ತತೋಽಸಹಂತಸ್ತದ್ವೀರ್ಯಂ ಪೀಡಿತಾ ಹ್ಯಭವನ್ ಸುರಾಃ ।
ವಿಷ್ಣ್ವಾದ್ಯಾ ನಿಖಿಲಾಶ್ಚಾಪಿ ಶಿವಾಽಽಜ್ಞಾನಷ್ಟಬುದ್ಧಯಃ ॥ ೨೬ ॥

ಅಥ ವಿಷ್ಣುಪ್ರಭೃತಿಕಾಸ್ಸರ್ವೇ ದೇವಾ ವಿಮೋಹಿತಾಃ ।
ದಹ್ಯಮಾನಾ ಯಯುಃ ಶೀಘ್ರಂ ಶರಣಂ ಪಾರ್ವತೀಪತೇಃ ॥ ೨೭ ॥

ಶಿವಾಲಯಸ್ಯ ತೇ ದ್ವಾರಿ ಗತ್ವಾ ಸರ್ವೇ ವಿನಮ್ರಕಾಃ ।
ತುಷ್ಟುವುಸ್ಸಶಿವಂ ಶಂಭುಂ ಪ್ರೀತ್ಯಾ ಸಾಂಜಲಯಸ್ಸುರಾಃ ॥ ೨೮ ॥

॥ ದೇವಾ ಊಚುಃ ॥

ದೇವದೇವ ಮಹಾದೇವ ಗಿರಿಜೇಶ ಮಹಾಪ್ರಭೋ ।
ಕಿಂ ಜಾತಮಧುನಾ ನಾಥ ತವ ಮಾಯಾ ದುರತ್ಯಯಾ ॥ ೨೯ ॥

ಸಗರ್ಭಾಶ್ಚ ವಯಂ ಜಾತಾ ದಹ್ಯಮಾನಾಶ್ಚ ರೇತಸಾ ।
ತವ ಶಂಭೋ ಕುರು ಕೃಪಾಂ ನಿವಾರಯ ದಶಾಮಿಮಾಂ ॥ ೩೦ ॥

---

೨೬-೨೭. ಆದರೆ ಶಿವನ ವೀರ್ಯವನ್ನು ಧರಿಸಲು ಅಸಮರ್ಥರಾಗಿ ದುಃಖಿತರಾದರು. ವಿಷ್ಣುವೇ ಮೊದಲಾದ ದೇವತೆಗಳೆಲ್ಲರೂ ಪಾರ್ವತಿಯ ಶಾಪದಿಂದ ಬುದ್ಧಿಶೂನ್ಯರಾದರು. ಶಿವನ ವೀರ್ಯದ ಉಗ್ರತೆಯನ್ನು ತಡೆಯಲಾರದೆ ಶರೀರವೆಲ್ಲ ಸುಡುವಂತಾಗಿ ದಿಕ್ಕುತೋಚದೆ ಪಾರ್ವತೀಪತಿಯಾದ ಈಶ್ವರನನ್ನೇ ಮರೆಹೊಕ್ಕರು.

೨೮. ಆ ದೇವತೆಗಳೆಲ್ಲರೂ ಶಿವನ ಆಲಯದ ಬಾಗಿಲಿನಲ್ಲಿ ನಿಂತುಕೊಂಡು ವಿನಯಭಾವದಿಂದ ಅಂಜಲಿಬದ್ಧರಾಗಿ ಶುಭಕರವಾದ ಸ್ತೋತ್ರಗಳಿಂದ ಪ್ರೀತಿಪೂರ್ವಕವಾಗಿ ಸ್ತುತಿಸಿದರು.

೨೯. ದೇವತೆಗಳು ಹೇಳಿದರು ;—ಎಲೈ ಪಾರ್ವತೀಪತಿಯೇ, ನೀನು ದೇವದೇವನು. ಮಹಾಪ್ರಭುವು. ಈಗ ನಮಗೆ ಮಹತ್ತಾದ ವಿಪತ್ತು ಸಂಭವಿಸಿರವುದು. ನಿನ್ನ ಮಾಯೆಯು ಅಸಾಧಾರಣವಾದುದು.

೩೦. ಓ ಶಂಕರನೇ, ಈಗ ನಾವೆಲ್ಲರೂ ನಿನ್ನ ರೇತಸ್ಸಿನಿಂದ ಗರ್ಭವನ್ನು ಧರಿಸಿರುವೆವು. ಅದು ನಮ್ಮನ್ನು ಬಹಳವಾಗಿ ದಹಿಸುತ್ತಿರುವುದು. ನಮಗೆ ಒದಗಿರುವ ಈ ಅವಸ್ಥೆಯನ್ನು ನಿವಾರಿಸಿ ನಮ್ಮನ್ನು ಕಾಪಾಡು ಎಂದರು.

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯಾಮರನುತಿಂ ಪರಮೇಶಶ್ಶಿವಾಪತಿಃ ।
ಆಜಗಾಮ ದ್ರುತಂ ದ್ವಾರಿ ಯತ್ರ ದೇವಾಃ ಸ್ಥಿತಾ ಮುನೇ ॥ ೩೧ ॥

ಆಗತಂ ಶಂಕರಂ ದ್ವಾರಿ ಸರ್ವೇ ದೇವಾಶ್ಚ ಸಾಚ್ಯುತಾಃ ।
ಪ್ರಣಮ್ಯ ತುಷ್ಟುವುಃ ಪ್ರೀತ್ಯಾ ನತಕಾ ಭಕ್ತವತ್ಸಲಂ ॥ ೩೨ ॥

॥ ದೇವಾ ಊಚುಃ ॥

ಶಂಭೋ ಶಿವ ಮಹೇಶಾನ ತ್ವಾಂ ನತಾಃ ಸ್ಮ ವಿಶೇಷತಃ ।
ರಕ್ಷ ನಶ್ಶರಣಾಪನ್ನಾನ್ ದಹ್ಯಮಾನಾಂಶ್ಚ ರೇತಸಾ ॥ ೩೩ ॥

ಇದಂ ದುಃಖಂ ಹರ ಹರ ಭವಾನೋ ಹಿ ಮೃತಾ ಧ್ರುವಂ ।
ತ್ವಾಂ ವಿನಾ ಕಸ್ಸಮರ್ಥೋಽದ್ಯ ದೇವದುಃಖನಿವಾರಣೇ ॥ ೩೪ ॥

---

೩೧-೩೨. ಬ್ರಹ್ಮನು ಹೇಳಿದನು :-ಎಲೈ ನಾರದನೇ, ದೇವತೆಗಳ ಸ್ತೋತ್ರವನ್ನು ಕೇಳಿ ಪಾರ್ವತೀಪತಿಯಾದ ಶಿವನು ಜಾಗ್ರತೆಯಾಗಿ ದೇವತೆಗಳಿರುವ ತನ್ನ ಮನೆಯ ಬಾಗಿಲಿಗೆ ಬರಲು, ಅಲ್ಲಿ ಬಂದು ನಿಂತಿರುವ ಶಂಕರನನ್ನು ದೇವತೆಗಳು ನೋಡಿ ತಲೆ ಬಗ್ಗಿ ನಮಸ್ಕರಿಸಿ ಪ್ರೀತಿಯಿಂದ ಭಕ್ತವತ್ಸಲನಾದ ಆ ಪರಮೇಶ್ವರನನ್ನು ಸ್ತೋತ್ರ ಮಾಡಿದರು.

೩೩. ದೇವತೆಗಳು ಹೇಳಿದರು :—ಎಲೈ ಶಂಭುವೇ, ನೀನು ಮಂಗಳಕರನು. ಮಹೇಶಾನನಾದ ನಿನ್ನನ್ನು ಬಾರಿಬಾರಿಗೂ ನಮಸ್ಕರಿಸುವೆವು. ನಿನ್ನ ವೀರ್ಯದಿಂದ ಸುಡಲ್ಪಡುತ್ತಿರುವ ನಮ್ಮನ್ನು ಕಾಪಾಡು. ನಾವು ನಿನ್ನನ್ನು ಶರಣುಹೊಂದಿ ರುವೆವು.

೩೪. ಎಲೈ ದೇವನೇ, ನಮಗೆ ಬಂದೊದಗಿರುವ ದುಃಖವನ್ನು ನಿವಾರಿಸು. ಖಂಡಿತವಾಗಿಯೂ ನಾವು ಸಾಯುತ್ತಿರುವೆವು. ದೇವತೆಗಳ ದುಃಖವನ್ನು ನಿವಾರಣೆ ಮಾಡಲು ನಿನ್ನನ್ನು ಬಿಟ್ಟರೆ ಯಾರುತಾನೇ ಸಮರ್ಥರು ? ಎಂದು ಪರಿಪರಿಯಾಗಿ ಬೇಡಿಕೊಂಡರು.

॥ ಬ್ರಹ್ಮೋವಾಚ ॥

ಇತಿ ದೀನತರಂ ವಾಕ್ಯಮಾಕರ್ಣ್ಯ ಸುರರಾಟ್ಪ್ರಭುಃ ।
ಪ್ರತ್ಯುವಾಚ ವಿಹಸ್ಯಾಥ ಸ ಸುರಾನ್ ಭಕ್ತವತ್ಸಲಃ ॥ ೩೫ ॥

॥ ಶಿವ ಉವಾಚ ॥

ಹೇ ಹರೇ ಹೇ ವಿಧೇ ದೇವಾಸ್ಸರ್ವೇ ಶೃಣುತ ಮದ್ವಚಃ ।
ಭವಿಷ್ಯತಿ ಸುಖಂ ವೋಽದ್ಯ ಸಾವಧಾನಾ ಭವಂತು ಹಿ ॥ ೩೬ ॥

ಏತದ್ವಮತ ಮದ್ವೀರ್ಯಂ ದ್ರುತಮೇವಾಖಿಲಾಸ್ಸುರಾಃ ।
ಸುಖಿನಸ್ತದ್ವಿಶೇಷೇಣ ಶಾಸನಾನ್ಮಮ ಸುಪ್ರಭೋ ॥ ೩೭ ॥

॥ ಬ್ರಹ್ಮೋವಾಚ ॥

ಇತ್ಯಾಜ್ಞಾಂ ಶಿರಸಾಧಾಯ ವಿಷ್ಣ್ವಾದ್ಯಾಸ್ಸಕಲಾಸ್ಸುರಾಃ ।
ಅಕಾರ್ಷುರ್ವಮನಂ ಶೀಘ್ರಂ ಸ್ಮರಂತಶ್ಶಿವಮವ್ಯಯಂ ॥ ೩೮ ॥

---

೩೫. ಬ್ರಹ್ಮನು ಹೇಳಿದನು :—ಈರೀತಿಯಾಗಿ ದೈನ್ಯದಿಂದಾಡಿದ ವಾಕ್ಯಗಳನ್ನು ಕೇಳಿ ಸುರರಾಜನಾದ ಆ ಶಂಕರನು ಭಕ್ತರಲ್ಲಿ ವಾತ್ಸಲ್ಯವನ್ನಿಟ್ಟು ನಗುತ್ತಿಂತೆಂದನು.

೩೬. ಶಿವನು ಹೇಳುವನು.—ಎಲೈ ವಿಷ್ಣುವೇ, ಬ್ರಹ್ಮನೇ, ದೇವತೆಗಳಿರಾ, ನನ್ನ ಮಾತನ್ನು ಕೇಳಿರಿ. ನಿಮಗೆ ಸುಖವುಂಟಾಗುವುದು. ನೀವೆಲ್ಲರೂ ಸಮಾಧಾನದಿಂದಿರಿ.

೩೭. ನೀವೆಲ್ಲರೂ ಭಕ್ಷಿಸಿರುವ ನನ್ನ ವೀರ್ಯವನ್ನು ನನ್ನ ಆಜ್ಞೆಯಂತೆ ವಮನ ಮಾಡಿರಿ. ಅನಂತರ ನಿಮಗೆಲ್ಲರಿಗೂ ಅತ್ಯಂತ ಸುಖವುಂಟಾಗುವುದು ಎಂದನು.

೩೮. ಬ್ರಹ್ಮನು ಹೇಳುವನು :—ಶಿವನು ಹೇಳಿದ ಮಾತನ್ನು ಶಿರಸಾವಹಿಸಿ ವಿಷ್ಣುವೇ ಮೊದಲಾದ ದೇವತೆಗಳು ನಿತ್ಯನಾದ ಶಿವನನ್ನು ಸ್ಮರಿಸುತ್ತಾ ವಮನವನ್ನು ಮಾಡಿದರು.

ತಚ್ಛಂಭುರೇತಸ್ಸ್ವರ್ಣಾಭಂ ಪರ್ವತಾಕಾರಮುಚ್ಛ್ರಿತಂ ।
ಅಭವತ್ಪತಿತಂ ಭೂಮೌ ಸ್ಪೃಶದ್ದ್ಯಾಮೇವ ಸುಪ್ರಭಂ　॥ ೩೯ ॥

ಅಭವನ್ಸುಖಿನಸ್ಸರ್ವೇ ಸುರಾಃ ಸರ್ವೇಽಚ್ಯುತಾದಯಃ ।
ಅಸ್ತುವನ್ಪರಮೇಶಾನಂ ಶಂಕರಂ ಭಕ್ತವತ್ಸಲಂ　॥ ೪೦ ॥

ಪಾವಕಸ್ತ್ವಭವನ್ನೈವ ಸುಖೀ ತತ್ರ ಮುನೀಶ್ವರ ।
ತಸ್ಯಾಜ್ಞಾಂ ಪರಮೋಽದಾದ್ವೈ ಶಂಕರಃ ಪರಮೇಶ್ವರಃ　॥ ೪೧ ॥

ತತಸ್ಸ ವಹ್ನಿರ್ವಿಕಲಸ್ಸಾಂಜಲಿರ್ನತಕೋ ಮುನೇ ।
ಅಸ್ತೌತ್ಸ್ಥಿವಂ ಸುಖೀ ನಾತ್ಮಾ ವಚನಂ ಚೇದಮಬ್ರವೀತ್　॥ ೪೨ ॥

॥ ಅಗ್ನಿರುವಾಚ ॥

ದೇವದೇವ ಮಹೇಶಾನ ಮೂಢೋಽಹಂ ತವ ಸೇವಕಃ ।
ಕ್ಷಮಸ್ವ ಮೇಽಪರಾಧಂ ಹಿ ಮಮ ದಾಹಂ ನಿವಾರಯ　॥ ೪೩ ॥

---

೩೯. ವಮನಮಾಡಿದ ಆ ಶಿವನ ವೀರ್ಯವು ಭೂಮಿಯಮೇಲೆ ಬಿದ್ದಿತು. ಅದು ಚಿನ್ನದಂತೆ ಪ್ರಕಾಶಿಸುತ್ತಿತ್ತು. ಪರ್ವತಾಕಾರವಾಗಿ ಸ್ವರ್ಗವನ್ನು ಮುಟ್ಟುವಷ್ಟು ಎತ್ತರವಾಗಿಯೂ, ಪರಮಾಶ್ಚರ್ಯಕರವಾಗಿಯೂ ಇದ್ದಿತು.

೪೦. ಅನಂತರ ವಿಷ್ಣುವೇ ಮುಂತಾದ ದೇವತೆಗಳೆಲ್ಲರೂ ಸುಖಿಗಳಾದರು. ಭಕ್ತವತ್ಸಲನಾದ ಶಂಕರನನ್ನು ಎಲ್ಲರೂ ಸ್ತುತಿಸಿದರು.

೪೧. ಎಲೈ ಮುನಿಯೇ, ಆದರೆ ಅಗ್ನಿಯು ಮಾತ್ರ ಸುಖಿಯಾಗಲಿಲ್ಲ. ಅನಂತರ ಪರಮೇಶ್ವರನು ಅಗ್ನಿಗೆ ಶ್ರೇಷ್ಠವಾದ ಆಜ್ಞೆಯನ್ನು ಮಾಡಿದನು.

೪೨-೪೩. ಅನಂತರ ಅಗ್ನಿಯು ದುಃಖದಿಂದ ಅಂಜಲಿಬದ್ಧನಾಗಿ ಶಿವನನ್ನು ಸ್ತೋತ್ರಮಾಡಿದನು. ದೇವದೇವನಾದ ಮಹೇಶ್ವರನೇ, ನಾನು ನಿನ್ನ ಸೇವಕನು ನಾನು ಏನೂ ತಿಳಿಯದ ಮೂಢನು. ನನ್ನ ಅಪರಾಧವನ್ನು ಕ್ಷಮಿಸಿ ನನ್ನ ದಾಹವನ್ನು ನಿವಾರಿಸು.

ತ್ವಂ ದೀನವತ್ಸಲಸ್ಸ್ವಾಮಿನ್ ಶಂಕರಃ ಪರಮೇಶ್ವರಃ ।
ಪ್ರತ್ಯುವಾಚ ಪ್ರಸನ್ನಾತ್ಮಾ ಪಾವಕೋ ದೀನವತ್ಸಲಂ ॥ ೪೪ ॥

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ಶುಚೇರ್ವಾಣೀಂ ಸ ಶಂಭುಃ ಪರಮೇಶ್ವರಃ ।
ಪ್ರತ್ಯುವಾಚ ಪ್ರಸನ್ನಾತ್ಮಾ ಪಾವಕಂ ದೀನವತ್ಸಲಃ ॥ ೪೫ ॥

॥ ಶಿವ ಉವಾಚ ॥

ಕೃತಂ ತ್ವನುಚಿತಂ ಕರ್ಮ ಮದ್ರೇತೋ ಭಕ್ಷಿತಂ ಹಿ ಯತ್ ।
ಅತೋ ನಿವೃತ್ತಸ್ತೇ ದಾಹ: ಪಾಪಾಧಿಕ್ಯಾನ್ಮದಾಜ್ಞಯಾ ॥ ೪೬ ॥

ಇದಾನೀಂ ತ್ವಂ ಸುಖೀ ನಾಮ ಶುಚೇ ಮಚ್ಛರಣಾಗತಃ ।
ಅತಃ ಪ್ರಸನ್ನೋ ಜಾತೋಽಹಂ ಸರ್ವಂ ದುಃಖಂ ವಿನಶ್ಯತಿ ॥ ೪೭ ॥

ಕಸ್ಯಾಶ್ಚಿತ್ಸುಸ್ತ್ರಿಯೋ ಯೋನೌ ಮದ್ರೇತಸ್ತ್ಯಜ ಯತ್ನತಃ ।
ಭವಿಷ್ಯಸಿ ಸುಖೀ ತ್ವಂ ಹಿ ನಿರ್ದಹಾತ್ಮಾ ವಿಶೇಷತಃ ॥ ೪೮ ॥

---

೪೪. ಎಲೈ ಸ್ವಾಮಿಯೇ, ನೀನು ದೀನವತ್ಸಲನು, ಪರಮೇಶ್ವರನು, ಶುಭಕರನು, ಎಂಬುದಾಗಿ ಅಗ್ನಿಯು ಭಕ್ತಿಯಿಂದ ಸ್ತೋತ್ರಮಾಡಿದನು.

೪೫. ಬ್ರಹ್ಮನು ಹೇಳಿದನು.—ಈ ರೀತಿಯಾದ ಅಗ್ನಿಯ ವಾಕ್ಯವನ್ನು ಕೇಳಿ ದೀನವತ್ಸಲನಾದ ಪರಮೇಶ್ವರನು ಪ್ರಸನ್ನನಾಗಿ ಅಗ್ನಿಯನ್ನು ಕುರಿತು,

೪೬. ಶಿವನು ಹೇಳುವನು:—ಎಲೈ ಅಗ್ನಿಯೇ, ನೀನು ನನ್ನ ವೀರ್ಯವನ್ನು ಭಕ್ಷಿಸಿ ಅನುಚಿತವಾದ ಕಾರ್ಯವನ್ನೆಸಗಿರುವೆ. ಆದುದರಿಂದ ನೀನು ಮಾಡಿದ ಪಾಪಕ್ಕೋಸ್ಕರವಾಗಿ ನನ್ನ ಆಜ್ಞೆಯಿಂದ ನಿನಗೆ ದಾಹವುಂಟಾಗಿರುವುದು.

೪೭. ಈಗ ನೀನು ನನಗೆ ಶರಣಾಗತನಾಗಿರುವೆ. ಆದುದರಿಂದ ನಿನಗೆ ಸುಖವುಂಟಾಗುವುದು. ನಾನು ನಿನಗೆ ಪ್ರಸನ್ನನಾಗಿರುವೆನು. ನಿನಗೆ ಒದಗಿರುವ ದುಃಖಗಳೆಲ್ಲಾ ನಾಶವಾಗುವುವು.

೪೮. ಯಾವಳಾದರೂ ಸುಚರಿತ್ರಳಾದ ಸ್ತ್ರೀಯ ಯೋನಿಯಲ್ಲಿ ನನ್ನ ರೇತಸ್ಸನ್ನು ನೀನು ಬಿಟ್ಟುಬಿಡು. ಇದು ಪ್ರಯತ್ನಪಟ್ಟರೆ ಅಸಾಧ್ಯವೇನಲ್ಲ. ಅನಂತರ ನೀನು ಸುಖಿಯಾಗುವೆ. ನಿನಗೆ ಉಂಟಾಗಿರುವ ದಾಹವೂ ಅಡಗುವುದು, ಎಂದನು.

॥ ಬ್ರಹ್ಮೋವಾಚ ॥
ಶಂಭುವಾಕ್ಯಂ ನಿಶಮ್ಯೇತಿ ಪ್ರತ್ಯುವಾಚ ಶನೈಃ ಶುಚಿಃ ।
ಸಾಂಜಲಿರ್ನತಕಃ ಪ್ರೀತ್ಯಾ ಶಂಕರಂ ಭಕ್ತಶಂಕರಂ ॥ ೪೯ ॥

ದುರಾಸದಮಿದಂ ತೇಜಃ ತವ ನಾಥ ಮಹೇಶ್ವರ ।
ಕಾಚಿನ್ನಾಸ್ತಿ ವಿನಾ ಶಕ್ತ್ಯಾ ಧರ್ತುಂ ಯೋನೌ ಜಗತ್ರಯೇ ॥ ೫೦ ॥

ಇತ್ಥಂ ಯದಾಬ್ರವೀದ್ವಹ್ನಿಸ್ತದಾ ತ್ವಂ ಮುನಿತಸ್ತಮು ।
ಶಂಕರಪ್ರೇರಿತಃ ಪ್ರಾತ್ಥ ಹೃದಾಗ್ನಿಮುಪಕಾರಕಃ ॥ ೫೧ ॥

॥ ನಾರದ ಉವಾಚ ॥
ಶೃಣು ಮದ್ವಚನಂ ವಹ್ನೇ ತವ ದಾಹಹರಂ ಶುಭಂ ।
ಪರಮಾನಂದದಂ ರಮ್ಯಂ ಸರ್ವಕಷ್ಟನಿವಾರಕಂ ॥ ೫೨ ॥

ಕೃತ್ವೋಪಾಯಮಿದಂ ವಹ್ನೇ ಸುಖೀ ಭವ ವಿದಾಹಕಃ ।
ಶಿವೇಚ್ಛಯಾ ಮಯಾ ಸಮ್ಯಗುಕ್ತಂ ತಾತೇದಮಾದರಾತ್ ॥ ೫೩ ॥

---

೪೯. ಬ್ರಹ್ಮನು ಹೇಳಿದನು ;—ಎಲೈ ನಾರದನೇ, ಈಶ್ವರನಾಡಿದ ಮಾತನ್ನು ಕೇಳಿ ಅಗ್ನಿಯು ಅಂಜಲಿಬದ್ಧನಾಗಿ ಭಕ್ತರಿಗೆ ಮಂಗಳವನ್ನುಂಟುಮಾಡುವ ಶಂಕರನನ್ನು ಕುರಿತು ಪ್ರೀತಿಯಿಂದ ಮೆಲ್ಲಮೆಲ್ಲಗೆ ಹೇಳಿದನು.

೫೦. ಎಲೈ ಪ್ರಭುವಾದ ಮಹೇಶನೇ, ನಿನ್ನ ತೇಜಸ್ಸು ಅಸಾಧಾರಣವಾದುದು. ಇದನ್ನು ಯೋನಿಯಲ್ಲಿ ಧರಿಸಲು ಶಕ್ತಿದೇವಿಯನ್ನು ಬಿಟ್ಟರೆ ಮೂರು ಲೋಕದಲ್ಲಿಯೂ ಮತ್ತಾರೂ ಇಲ್ಲ ಎಂದನು.

೫೧. ಎಲೈ ಮುನಿವರನೇ, ಈ ರೀತಿಯಾಗಿ ಅಗ್ನಿಯು ಹೇಳಿದಮೇಲೆ ನೀನು (ನಾರದನು) ಆ ಶಿವನಿಂದ ಪ್ರೇರೇಪಿತನಾಗಿ ಉಪಕಾರಮಾಡಬೇಕೆಂಬ ಬುದ್ಧಿಯಿಂದ ಅಗ್ನಿಯನ್ನು ಕುರಿತು ಹೇಳಿದೆ.

೫೨. ಎಲೈ ವಹ್ನಿಯೇ, ನನ್ನ ಮಾತನ್ನು ಕೇಳು. ಅದು ನಿನ್ನ ದಾಹವನ್ನು ನಿವಾರಿಸುವುದು, ಮಂಗಳಕರವಾದುದು, ಪರಮಾನಂದವನ್ನುಂಟುಮಾಡುವುದು, ರಮ್ಯವಾದುದು, ಎಲ್ಲಾ ಕಷ್ಟಗಳನ್ನೂ ನಿವಾರಿಸುವುದು.

೫೩. ನಾನು ನಿನಗೊಂದುಪಾಯವನ್ನು ಹೇಳುವೆನು ಕೇಳು. ಈ ಉಪಾಯವನ್ನು ನಮ್ಮ ತಂದೆಯಾದ ಬ್ರಹ್ಮನು ಶಿವನ ಅಭಿಪ್ರಾಯದಂತೆ ನನಗೆ ಹೇಳಿರುವನು.

ತಪೋಮಾಸಸ್ನಾನಕರ್ತ್ರ್ಯಃ ಸ್ತ್ರಿಯೋ ಯಾಸ್ಯಃ ಪ್ರಗೇ ಶುಚೇ ।
ತದ್ದೇಹೇಷು ಸ್ಥಾಪಯ ತ್ವಂ ಶಿವರೇತಸ್ತ್ವಿದಂ ಮಹತ್ ॥ ೫೪ ॥

॥ ಬ್ರಹ್ಮೋವಾಚ ॥

ತಸ್ಮಿನ್ನವಸರೇ ತತ್ರಾಗತಾಸ್ಸಪ್ತಮುನಿಸ್ತ್ರಿಯಃ ।
ತಪೋಮಾಸಿ ಸ್ನಾನಕಾಮಾಃ ಪ್ರಾತಸ್ಸನ್ನಿಯಮಾ ಮುನೇ ॥ ೫೫ ॥

ಸ್ನಾನಂ ಕೃತ್ವಾ ಸ್ತ್ರಿಯಸ್ತಾ ಹಿ ಮಹಾಶೀತಾರ್ದಿತಾಶ್ಚ ಷಟ್ ।
ಗಂತುಕಾಮಾ ಮುನೇ ಯಾತಾ ವಹ್ನಿಜ್ವಾಲಾಸಮೀಪತಃ ॥ ೫೬ ॥

ವಿಮೋಹಿತಾಶ್ಚ ತಾ ದೃಷ್ಟ್ವಾರುಂಧತೀ ಗಿರಿಶಾಜ್ಞಯಾ ।
ನಿಷಿಷೇಧ ವಿಶೇಷೇಣ ಸುಚರಿತ್ರಾ ಸುಬೋಧಿನೀ ॥ ೫೭ ॥

ತಾಃ ಷಣ್ಮುನಿಸ್ತ್ರಿಯೋ ಮೋಹಾದ್ಧಠಾತ್ತತ್ರ ಗತಾ ಮುನೇ ।
ಸ್ವಶೀತವಿನಿವೃತ್ತ್ಯರ್ಥಂ ಮೋಹಿತಾಃ ಶಿವಮಾಯಯಾ ॥ ೫೮ ॥

---

೫೪. ಗ್ರೀಷ್ಮಕಾಲದ ದಿವಸಗಳಲ್ಲಿ ಬೆಳಗಿನ ಸಮಯದಲ್ಲಿ ಸ್ನಾನಮಾಡಲು ಸ್ತ್ರೀಯರು ಬರುವರು. ಆ ಸಮಯದಲ್ಲಿ ನೀನು ಶಿವನ ರೇತಸ್ಸನ್ನು ಅವರ ದೇಹದಲ್ಲಿ ಬಿಟ್ಟುಬಿಡು ಎಂದನು.

೫೫. ಬ್ರಹ್ಮನು ಹೇಳಿದನು.—ಎಲೈ ನಾರದನೇ, ಅದೇ ಸಮಯದಲ್ಲಿ ಗ್ರೀಷ್ಮಕಾಲವಾಗಿದ್ದಿತು. ಗ್ರೀಷ್ಮಕಾಲದಲ್ಲಿ ಬೆಳಗಿನ ಸ್ನಾನಮಾಡಬೇಕೆಂದು ಸಪ್ತ ಋಷಿಗಳ ಪತ್ನಿಯರು ಅಲ್ಲಿಗೆ ಬಂದರು.

೫೬-೫೭. ಆ ಏಳು ಜನ ಸ್ತ್ರೀಯರ ಪೈಕಿ ಆರು ಜನರು ಸ್ನಾನವನ್ನು ಮಾಡಿ ಹೊರಡಲುದ್ಯುಕ್ತರಾಗಿ ಅಗ್ನಿಯ ಸಮೀಪಕ್ಕೆ ಬರಲು ಅದರಿಂದ ಮೋಹಿತರಾದರು. ಅನಂತರ ಅರುಂಧತಿಯು ಇವರು ಮೋಹಗೊಂಡುದನ್ನು ನೋಡಿ ಶಿವನ ಆಜ್ಞೆಯ ಮೇರೆಗೆ ಅವರನ್ನು ಹೋಗಬೇಡಿರೆಂದು ತಡೆದಳು. ಆ ಅರುಂಧತಿಯು ಸಚ್ಚರಿತ್ರಳಾದುದರಿಂದ ಈ ರೀತಿ ಚೆನ್ನಾಗಿ ಬೋಧಿಸಿದಳು.

೫೮. ಶಿವನ ಮಾಯೆಯಿಂದ ಮೋಹಿತರಾದ ಆ ಸ್ತ್ರೀಯರು ಅರುಂಧತಿಯ ಮಾತನ್ನು ಕೇಳದೆ ಹಠದಿಂದಲೂ, ಮೋಹದಿಂದಲೂ ಆ ಅಗ್ನಿಯ ಹತ್ತಿರಕ್ಕೆ ತಮಗುಂಟಾಗಿರುವ ಛಳಿಯನ್ನು ನಿವಾರಿಸಿಕೊಳ್ಳಲು ಹೋದರು.

ತದ್ರೇತಃ ಕಣಿಕಾಸ್ಸದ್ಯಸ್ತದ್ದೇಹಾನ್ ವಿವಿಶುರ್ಮುನೇ ।
ರೋಮದ್ವಾರಾತ್ಯಖಿಲಾ ವಹ್ನಿರಭೂದ್ದಾಹವಿವರ್ಜಿತಾಃ ॥ ೫೯ ॥

ಅಂತರ್ಧಾಯ ದ್ರುತಂ ವಹ್ನಿರ್ಜ್ವಾಲಾರೂಪೋ ಜಗಾಮ ಹ ।
ಸುಖೀ ಸ್ವಲೋಕಂ ಮನಸಾ ಸ್ಮರಂಸ್ತ್ವಾಂ ಶಂಕರಂ ಚ ತಂ ॥ ೬೦ ॥

ಸಗರ್ಭಾಸ್ತಾಃ ಸ್ತ್ರಿಯಸ್ಸಾಧೋಽಭವನ್ ದಾಹಪ್ರಪೀಡಿತಾಃ ।
ಜಗ್ಮುಸ್ಸ್ವಭವನಂ ತಾತಾರುಂಧತೀ ದುಃಖಿತಾಽಗ್ನಿನಾ ॥ ೬೧ ॥

ದೃಷ್ಟ್ವಾ ಸ್ವಸ್ತ್ರೀಗತಿಂ ತಾತ ನಾಥಾಃ ಕ್ರೋಧಾಕುಲಾ ದ್ರುತಂ ।
ತತ್ಯಜುಸ್ತಾಃ ಸ್ತ್ರಿಯಸ್ತಾತ ಸುಸಂಮಂತ್ರ್ಯ ಪರಸ್ಪರಂ ॥ ೬೨ ॥

ಅಥ ತಾಃ ಷಟ್ ಸ್ತ್ರಿಯಸ್ಸರ್ವಾ ದೃಷ್ಟ್ವಾ ಸ್ವವ್ಯಭಿಚಾರಕಂ ।
ಮಹಾದುಃಖಾನ್ವಿತಾಸ್ತಾತಾಽಭವನ್ನಾಕುಲಮಾನಸಾಃ ॥ ೬೩ ॥

---

೫೯. ಹಾಗೆ ಹೊರಟ ಸ್ತ್ರೀಯರ ದೇಹವನ್ನು ಆ ಶಿವನ ರೇತಸ್ಸಿನ ಕಣಗಳು ರೋಮದ್ವಾರದಿಂದ ಪ್ರವೇಶಿಸಿದವು. ಅನಂತರ ಅಗ್ನಿಯ ದಾಹವು ನಿವಾರಣೆಯಾಯಿತು.

೬೦. ಕೂಡಲೇ ಅಗ್ನಿಯು ಅಲ್ಲಿಂದ ಅಂತರ್ಧಾನನಾದನು. ಹಾಗೂ ಸುಖಿಯಾಗಿ ನಿನ್ನನ್ನೂ (ನಾರದನನ್ನೂ) ಶಿವನನ್ನೂ ಮನಸ್ಸಿನಲ್ಲಿ ಧ್ಯಾನಿಸುತ್ತಾ ತನ್ನ ಲೋಕಕ್ಕೆ ಹೋದನು.

೬೧. ಅನಂತರ ಆ ಸ್ತ್ರೀಯರೆಲ್ಲರೂ ಗರ್ಭವನ್ನು ಧರಿಸಿದರು. ಮತ್ತು ದಾಹದಿಂದ ಪೀಡಿತರಾಗಿ ತಮ್ಮ ತಮ್ಮ ಊರುಗಳಿಗೆ ಹೊರಟುಹೋದರು. ಆ ಅಗ್ನಿಯ ದೆಸೆಯಿಂದ ಅರುಂಧತಿಯೂ ದುಃಖಿತಳಾದಳು.

೬೨. ಎಲೈ ನಾರದನೆ, ಆ ಆರು ಸ್ತ್ರೀಯರ ಪತಿಯರೆಲ್ಲರೂ ತಮ್ಮ ತಮ್ಮ ಪತ್ನಿಯರಿಗಾಗಿರುವ ಗತಿಯನ್ನು ನೋಡಿ ಕೋಪಗೊಂಡು ಪರಸ್ಪರವಾಗಿ ಆಲೋಚಿಸಿ ತಮ್ಮ ಪತ್ನಿಯರನ್ನು ಬಿಟ್ಟುಬಿಟ್ಟರು.

೬೩. ಆ ಆರು ಜನ ಸ್ತ್ರೀಯರೂ ತಾವು ಮಾಡಿರುವ ವ್ಯಭಿಚಾರವನ್ನು ತಿಳಿದು ತುಂಬಾ ದುಃಖಪಟ್ಟರು.

ತತ್ಯಜುಶ್ಶಿವರೇತಸ್ತದ್ಗರ್ಭರೂಪಂ ಮುನಿಸ್ತ್ರಿಯಃ ।
ತಾ ಹಿಮಾಚಲಪೃಷ್ಠೇಽಥಾಭವನ್ ದಾಹವಿವರ್ಜಿತಾಃ ॥ ೬೪ ॥

ಅಸಹನ್ ಶಿವರೇತಸ್ತದ್ಧಿಮಾದ್ರಿಃ ಕಂಪಮುದ್ವಹನ್ ।
ಗಂಗಾಯಾಂ ಪ್ರಕ್ಷಿಪತ್ತೂರ್ಣಮಸಹ್ಯಂ ದಾಹಪೀಡಿತಃ ॥ ೬೫ ॥

ಗಂಗಯಾಪಿ ತದ್ವೀರ್ಯಂ ದುಸ್ಸಹಂ ಪರಮಾತ್ಮನಃ ।
ನಿಃಕ್ಷಿಪ್ತಂ ಹಿ ಶರಸ್ತಂಬೇ ತರಂಗೈಃ ಸ್ವೈರ್ಮುನೀಶ್ವರ ॥ ೬೬ ॥

ಪತಿತಂ ತತ್ರ ತದ್ರೇತೋ ದ್ರುತಂ ಬಾಲೋ ಬಭೂವ ಹ ।
ಸುಂದರಸ್ಸುಭಗಶ್ಶ್ರೀಮಾಂಸ್ತೇಜಸ್ವೀ ಪ್ರೀತಿವರ್ಧನಃ ॥ ೬೭ ॥

---

೬೪. ಅನಂತರ ಆ ಸ್ತ್ರೀಯರೆಲ್ಲರೂ ಗರ್ಭರೂಪವಾಗಿರುವ ಶಿವನ ರೇತಸ್ಸನ್ನು ಹಿಮಾಚಲದ ತಪ್ಪಲು ಪ್ರದೇಶದಲ್ಲಿ ಬಿಟ್ಟುಬಿಟ್ಟರು. ಆ ಬಳಿಕ ಅವರ ದಾಹವು ಪರಿಹಾರವಾಯಿತು.

೬೫. ಶಿವನ ರೇತಸ್ಸಿನ ವೇಗವನ್ನು ತಡೆಯಲಾರದೆ ಹಿಮವತ್ಪರ್ವತವು ನಡುಗಿತು. ಅನಂತರ ದಾಹಪೀಡಿತವಾದ ಹಿಮವತ್ಪರ್ವತವು ಅಸಾಧಾರಣವಾದ ಆ ರೇತಸ್ಸನ್ನು ಗಂಗಾನದಿಯೊಳಕ್ಕೆ ಹಾಕಿದನು.

೬೬. ಗಂಗೆಯೂ ಕೂಡ ಆ ಪರಮಾತ್ಮನಾದ ಶಂಕರನ ರೇತಸ್ಸನ್ನು ತಡೆಯಲಾರದವಳಾದಳು. ತನ್ನ ಅಲೆಗಳಿಂದ ಆ ವೀರ್ಯವನ್ನು ಜೊಂಡುಗಳಲ್ಲಿ ತಳ್ಳಿದಳು.

೬೭-೬೮. ಹುಲ್ಲುಗಳಲ್ಲಿ ಬಿದ್ದ ವೀರ್ಯದಿಂದ ಜಾಗ್ರತೆಯಾಗಿ ಒಂದು ಮಗುವು ಹುಟ್ಟಿತು. ಮಾರ್ಗಶೀರ್ಷಮಾಸದ ಶುಕ್ಲಪಕ್ಷದಲ್ಲಿ ಷಷ್ಠಿಯ ದಿವಸ ಆ ಮಗುವಿನ ಜನನವಾಯಿತು. ಅದು ಸುಂದರವಾಗಿಯೂ ಷಡ್ಗುಣೈಶ್ವರ್ಯ ಸಂಪನ್ನ

ಮಾರ್ಗಮಾಸೇ ಸಿತೇ ಪಕ್ಷೇ ತಿಥೌ ಷಷ್ಠ್ಯಾಂ ಮುನೀಶ್ವರ ।
ಪ್ರಾದುರ್ಭಾವೋಽಭವತ್ತಸ್ಯ ಶಿವಪುತ್ರಸ್ಯ ಭೂತಲೇ ॥ ೬೮ ॥

ತಸ್ಮಿನ್ನವಸರೇ ಬ್ರಹ್ಮನ್ನಕಸ್ಮಾದ್ಧಿಮಶೈಲಜಾ
ಅಭೂತಾಂ ಸುಖಿನೌ ತತ್ರ ಸ್ವಗಿರಾ ಗಿರಿಶೋಽಪಿ ಚ ॥ ೬೯ ॥

ಶಿವಾಕುಚಾಭ್ಯಾಂ ಸುಸ್ರಾವ ಪಯ ಆನಂದಸಂಭವಂ ।
ತತ್ರ ಗತ್ವಾ ಚ ಸರ್ವೇಷಾಂ ಸುಖಮಾಸೀನ್ಮನೇಽಧಿಕಂ ॥ ೭೦ ॥

ಮಂಗಲಂ ಚಾಭವತ್ತಾತ ತ್ರಿಲೋಕ್ಯಾಂ ಸುಖದಂ ಸತಾಂ ।
ಖಲಾನಾಮುಭವದ್ವಿಘ್ನೋ ದೈತ್ಯಾನಾಂ ಚ ವಿಶೇಷತಃ ॥ ೭೧ ॥

ಅಕಸ್ಮಾದಭವದ್ವ್ಯೋಮ್ನಿ ಪರಮೋ ದುಂದುಭಿಧ್ವನಿಃ ।
ಪುಷ್ಪವೃಷ್ಟಿಃ ಪಪಾತಾಶು ಬಾಲಕೋಪರಿ ನಾರದ ॥ ೭೨ ॥

---

ವಾಗಿಯೂ ಇದ್ದಿತು. ತೇಜಸ್ವಿಯಾಗಿ ನೋಡಿದ ಕೂಡಲೇ ಪ್ರೀತಿಯನ್ನು ಹುಟ್ಟಿಸುವಂತಿತ್ತು. ಈ ರೀತಿಯಾಗಿ ಈಶ್ವರನ ಮಗನು ಹುಟ್ಟಿದನು.

೬೯. ಇದೇ ಸಮಯದಲ್ಲಿ ಅಕಸ್ಮಾತ್ತಾಗಿ ಗಿರಿಜೆಯೂ ಪರಮೇಶ್ವರನೂ ಲೀಲಾರ್ಥವಾಗಿ ಸಂಚರಿಸುತ್ತಾ ಅಲ್ಲಿಗೆ ಬಂದರು.

೭೦. ಆ ಮಗುವನ್ನು ನೋಡಿದ ಕೂಡಲೇ ಆನಂದದಿಂದ ಗಿರಿಜೆಯ ಸ್ತನಗಳಿಂದ ಹಾಲು ಸುರಿಯಲು ಪ್ರಾರಂಭಿಸಿತು. ಎಲ್ಲರೂ ಅಲ್ಲಿಗೆ ಹೋದರು. ಎಲ್ಲರಿಗೂ ಸುಖವುಂಟಾಯಿತು.

೭೧. ಎಲೈ ನಾರದನೇ, ಅನಂತರ ಮೂರು ಲೋಕಕ್ಕೂ ಮಂಗಳವುಂಟಾಯಿತು. ಸತ್ಪುರುಷರಿಗೆ ಸುಖವುಂಟಾಯಿತು. ದುಷ್ಟರಿಗೂ, ದೈತ್ಯರಿಗೂ ವಿಘ್ನವುಂಟಾಯಿತು.

೭೨. ಅಕಸ್ಮಾತ್ತಾಗಿ ಆಕಾಶದಲ್ಲಿ ದೇವದುಂದುಭಿಗಳು ಮೊಳಗಿದುವು. ಬಾಲಕನ ಮೇಲೆ ಪುಷ್ಪವೃಷ್ಟಿಯಾಯಿತು.

ವಿಷ್ಣ್ವಾದೀನಾಂ ಸಮಸ್ತಾನಾಂ ದೇವಾನಾಂ ಮುನಿಸತ್ತಮ ।
ಅಭ್ಯುದಕಸ್ಮಾತ್ಪರಮ ಆನಂದಃ ಪರಮೋತ್ಸವಃ ॥ ೭೩ ॥

ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಕುಮಾರಖಂಡೇ
ಶಿವಪುತ್ರಜನನವರ್ಣನಂ ನಾಮ ದ್ವಿತೀಯೋಽಧ್ಯಾಯಃ

---

೭೩. ಕುಮಾರೋತ್ಪತ್ತಿಯಿಂದ ವಿಷ್ಣುವೇ ಮೊದಲಾದ ಸಮಸ್ತ ದೇವತೆಗಳಿಗೂ, ಪರಮಾನಂದವುಂಟಾಯಿತು ಎಲ್ಲೆಲ್ಲಿಯೂ ಉತ್ಸವಗಳು ನಡೆದವು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿನ ರುದ್ರಸಂಹಿತೆಯಲ್ಲಿನ ಕುಮಾರಖಂಡದಲ್ಲಿ
ಶಿವಪುತ್ರಜನನ ವರ್ಣನವೆಂಬ ಎರಡನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಕುಮಾರಖಂಡೇ

## ತೃತೀಯೋಽಧ್ಯಾಯಃ

॥ ನಾರದ ಉವಾಚ ॥

ದೇವ ದೇವ ಪ್ರಜಾನಾಥ ಬ್ರಹ್ಮನ್ ಸೃಷ್ಟಿಕರ ಪ್ರಭೋ ।
ತತಃ ಕಿಮಭವತ್ತತ್ರ ತದ್ವದಾದ್ಯ ಕೃಪಾಂ ಕುರು ॥ ೧ ॥

॥ ಬ್ರಹ್ಮೋವಾಚ ॥

ತಸ್ಮಿನ್ನವಸರೇ ತಾತ ವಿಶ್ವಾಮಿತ್ರಃ ಪ್ರತಾಪವಾನ್ ।
ಪ್ರೇರಿತೋ ವಿಧಿನಾ ತತ್ರಾಗಚ್ಛತ್ಪ್ರೀತೋ ಯದೃಚ್ಛಯಾ ॥ ೨ ॥

---

### ಮೂರನೆಯ ಅಧ್ಯಾಯವು.

೧. ನಾರದನು ಪ್ರಶ್ನೆ ಮಾಡುವನು ;—ದೇವದೇವನಾದ ಎಲೈ ಬ್ರಹ್ಮನೇ, ನೀನು ಎಲ್ಲರಿಗೂ ಒಡೆಯನು. ಪ್ರಪಂಚದ ಸೃಷ್ಟಿಕರ್ತನು. ಅನಂತರ ಮುಂದೇನು ನಡೆಯಿತೆಂಬ ವಿಷಯವನ್ನು ದಯವಿಟ್ಟು ತಿಳಿಸು ಎನ್ನಲು,

೨. ಬ್ರಹ್ಮನು ಹೇಳಿದನು :—ಅಪ್ಪಾ ನಾರದನೇ, ಕೇಳು. ಅದೇ ಸಮಯದಲ್ಲಿ ವಿಧಿಪ್ರೇರಿತನಾಗಿ ವಿಶ್ವಾಮಿತ್ರಮುನಿಯು ಅಕಸ್ಮಾತ್ತಾಗಿ ಅಲ್ಲಿಗೆ ಬಂದನು. ಅಲ್ಲಿದ್ದ ಮಗುವಿನಲ್ಲಿ ಆವನಿಗೆ ತುಂಬಾ ಪ್ರೀತಿಹುಟ್ಟಿತು.

ಸ ದೃಷ್ಟ್ವಾಽಲೌಕಿಕಂ ಧಾಮ ತತ್ಸುತಸ್ಯ ಸುತೇಜಸಃ ।
ಅಭವತ್ಪೂರ್ಣಕಾಮಸ್ತು ಸುಪ್ರಸನ್ನೋ ನನಾಮ ಚ ॥ ೩ ॥

ಅಕರೋತ್ಸನುತಿಂ ತಸ್ಯ ಸುಪ್ರಸನ್ನೇನ ಚೇತಸಾ ।
ವಿಧಿಪ್ರೇರಿತವಾಗ್ಭಿಶ್ಚ ವಿಶ್ವಾಮಿತ್ರಃ ಪ್ರಭಾವವಿತ್ ॥ ೪ ॥

ತತಸ್ತೋಽಭೂತ್ಸುತಸ್ತತ್ರ ಸುಪ್ರಸನ್ನೋ ಮಹೋತಿಕೃತ್ ।
ಸುಪ್ರಹಸ್ಯಾದ್ಭುತಮಹೋ ವಿಶ್ವಾಮಿತ್ರಮುವಾಚ ಚ ॥ ೫ ॥

॥ ಶಿವಸುತ ಉವಾಚ ॥

ಶಿವೇಚ್ಛಯಾ ಮಹಾಜ್ಞಾನಿನ್ನಕಸ್ಮಾತ್ತ್ವಮಿಹಾಗತಃ ।
ಸಂಸ್ಕಾರಂ ಕುರು ಮೇ ತಾತ ಯಥಾವದ್ವೇದಸಮ್ಮತಂ ॥ ೬ ॥

ಅದ್ಯಾರಭ್ಯ ಪುರೋಧಾಸ್ತ್ವಂ ಭವ ಮೇ ಪ್ರೀತಿಮಾವಹ ।
ಭವಿಷ್ಯಸಿ ಸದಾ ಪೂಜ್ಯಸ್ಸರ್ವೇಷಾಂ ನಾತ್ರ ಸಂಶಯಃ ॥ ೭ ॥

---

೩. ತೇಜಸ್ವಿಯಾದ ಆ ಮಗುವನ್ನೂ, ವಿಲಕ್ಷಣವಾದ ಆ ಮಗುವಿರುವ ಪ್ರದೇಶವನ್ನೂ ನೋಡಿ ಪ್ರಸನ್ನನಾಗಿ ಆ ಮಗುವಿಗೆ ಭಕ್ತಿಯಿಂದ ನಮಸ್ಕರಿಸಿದನು. ಇದರಿಂದ ವಿಶ್ವಾಮಿತ್ರನ ಮನಸ್ಸಿಗೆ ತುಂಬಾ ಸಮಾಧಾನವಾಯಿತು.

೪-೫. ಪ್ರಭಾವಶಾಲಿಯಾದ ವಿಶ್ವಾಮಿತ್ರನು ಸಂತೋಷಗೊಂಡು ಬ್ರಹ್ಮನಿಂದ ಪ್ರೇರಿತನಾಗಿ ಬಹುವಾಗಿ ಸ್ತುತಿಸಲು, ಆ ಸ್ತೋತ್ರದಿಂದ ಪ್ರಸನ್ನನಾದ ಶಿವಸುತನು ತೇಜೋರೂಪನಾದನು. ಆ ಅದ್ಭುತವಾದ ತೇಜೋರೂಪನಾದ ಆ ಶಿವಸುತನು ನಗುತ್ತಾ ವಿಶ್ವಾಮಿತ್ರನನ್ನು ಕುರಿತು,

೬. ಎಲೈ ಪೂಜ್ಯನೇ, ನೀನು ಮಹಾಜ್ಞಾನಿಯು. ಶಿವನ ಇಚ್ಛೆಯಂತೆ ಅಕಸ್ಮಾತ್ತಾಗಿ ಇಲ್ಲಿಗೆ ಬಂದಿರುವೆ. ಈಗ ನನಗೆ ವೇದೋಕ್ತವಾಗಿ ಸಂಸ್ಕಾರವನ್ನು ಮಾಡು.

೭. ನೀನು ಇಂದಿನಿಂದ ನನಗೆ ಪುರೋಹಿತನಾಗುವೆ. ನನ್ನಲ್ಲಿ ಪ್ರೀತಿಯನ್ನಿಡು. ನೀನು ಎಲ್ಲರಿಗೂ ಪೂಜ್ಯನಾಗುವೆ. ಈ ವಿಷಯದಲ್ಲಿ ಸಂಶಯವಿಲ್ಲ ಎಂದನು.

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯ ಸುಪ್ರಸನ್ನೋ ಹಿ ಗಾಧಿಜಃ ।
ತಮುವಾಚಾನುದಾತ್ತೇನ ಸ್ವರೇಣ ಚ ಸುವಿಸ್ಮಿತಃ ॥ ೮ ॥

॥ ವಿಶ್ವಾಮಿತ್ರ ಉವಾಚ ॥

ಶೃಣು ತಾತ ನ ವಿಪ್ರೋಽಹಂ ಗಾಧಿಕ್ಷತ್ರಿಯಬಾಲಕಃ ।
ವಿಶ್ವಾಮಿತ್ರೇತಿ ವಿಖ್ಯಾತಃ ಕ್ಷತ್ರಿಯೋ ವಿಪ್ರಸೇವಕಃ ॥ ೯ ॥

ಇತಿ ಸ್ವಚರಿತಂ ಖ್ಯಾತಂ ಮಯಾ ತೇ ವರಬಾಲಕ ।
ಕಸ್ತ್ವಂ ಸ್ವಚರಿತಂ ಬ್ರೂಹಿ ವಿಸ್ಮಿತಾಯಾಖಿಲಂ ಹಿ ಮೇ ॥ ೧೦ ॥

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯ ತತ್ಸ್ವವೃತ್ತಂ ಜಗಾದ ಹ ।
ತತಶ್ಚೋವಾಚ ಸುಪ್ರೀತ್ಯಾ ಗಾಧಿಜಂ ತಂ ಮಹೋತಿಕೃತ್ ॥ ೧೧ ॥

॥ ಶಿವಸುತ ಉವಾಚ ॥

ವಿಶ್ವಾಮಿತ್ರ ವರಾನ್ಮೇ ತ್ವಂ ಬ್ರಹ್ಮರ್ಷಿರ್ನಾತ್ರ ಸಂಶಯಃ ।
ವಸಿಷ್ಠಾದ್ಯಾಶ್ಚ ನಿತ್ಯಂ ತ್ವಾಂ ಪ್ರಶಂಸಿಷ್ಯತಿ ಚಾದರಾತ್ ॥ ೧೨ ॥

---

೮. ಬ್ರಹ್ಮನು ಹೇಳಿದನು ;—ಅನಂತರ ಗಾಧಿಸೂನುವಾದ ವಿಶ್ವಾಮಿತ್ರನು ಆ ಶಿವಸುತನ ಮಾತನ್ನು ಕೇಳಿ ಅವನನ್ನು ಕುರಿತು ಆದರಪೂರ್ವಕವಾಗಿ,

೯-೧೦. ವಿಶ್ವಾಮಿತ್ರನು ಹೇಳುವನು :-ಎಲೈ ಕುಮಾರನೇ, ನಾನು ಬ್ರಾಹ್ಮಣ ನಲ್ಲ. ಗಾಧಿ ಎಂಬ ಕ್ಷತ್ರಿಯನ ಮಗನು. ವಿಶ್ವಾಮಿತ್ರನೆಂದು ನನ್ನ ಹೆಸರು. ನಾನು ಕ್ಷತ್ರಿಯನಾದುದರಿಂದ ಬ್ರಾಹ್ಮಣರ ಸೇವಕನು. ಇಷ್ಟೇ ನನ್ನ ಪ್ರಸಿದ್ಧವಾದ ಚರಿತ್ರೆಯು. ಎಲೈ ಬಾಲಕನೇ, ನೀನು ಯಾರು ? ನಿನ್ನ ಚರಿತ್ರೆ ಏನು ? ಎಂಬುದನ್ನು ನನಗೆ ತಿಳಿಸು. ನನಗೆ ಆಶ್ಚರ್ಯವಾಗುತ್ತಿರುವುದು ಎಂದನು.

೧೧. ಬ್ರಹ್ಮನು ಹೇಳಿದನು ;—ವಿಶ್ವಾಮಿತ್ರನ ಮಾತನ್ನು ಕೇಳಿ ಆ ತೇಜೋ ರೂಪಿಯಾದ ಬಾಲಕನು ಗಾಧಿಸೂನುವನ್ನು ಕುರಿತು ತನ್ನ ವೃತ್ತಾಂತವೆಲ್ಲವನ್ನೂ ಹೇಳಿದನು.

೧೨. ಶಿವಸುತನು ಹೇಳಿದನು :—ಎಲೈ ವಿಶ್ವಾಮಿತ್ರನೇ, ನನ್ನ ವರದಿಂದ ನೀನು ಬ್ರಹ್ಮಋಷಿಯಾಗಿರುವೆ. ಇದರಲ್ಲಿ ಸಂಶಯವಿಲ್ಲ. ವಸಿಷ್ಠನೇ ಮೊದಲಾದ ವರೆಲ್ಲರೂ ಪ್ರತಿನಿತ್ಯವೂ ನಿನ್ನನ್ನು ಹೊಗಳುವರು, ಆದರಿಸುವರು.

ಅತಸ್ತ್ವಮಾಜ್ಞಯಾ ಮೇ ಹಿ ಸಂಸ್ಕಾರಂ ಕರ್ತುಮರ್ಹಸಿ ।
ಇದಂ ಸರ್ವಂ ಸುಗೋಪ್ಯಂ ತೇ ಕಥನೀಯಂ ನ ಕುತ್ರಚಿತ್ ॥ ೧೩ ॥

॥ ಬ್ರಹ್ಮೋವಾಚ ॥

ತತೋಽಕಾರ್ಷೀತ್ಸ ಸಂಸ್ಕಾರಂ ತಸ್ಯ ಪ್ರೀತ್ಯಾಖಿಲಂ ಯಥಾ ।
ಶಿವಬಾಲಸ್ಯ ದೇವರ್ಷೇ ವೇದೋಕ್ತವಿಧಿನಾ ಪರಂ ॥ ೧೪ ॥

ಶಿವಬಾಲೋಽಪಿ ಸುಪ್ರೀತೋ ದಿವ್ಯಜ್ಞಾನಮದಾತ್ಸ್ವಯಂ ।
ವಿಶ್ವಾಮಿತ್ರಾಯ ಮುನಯೇ ಮಹೋತಿಕಾರಕಃ ಪ್ರಭುಃ ॥ ೧೫ ॥

ಪುರೋಹಿತಂ ಚಕಾರಾಸೌ ವಿಶ್ವಾಮಿತ್ರಂ ಶುಚಸ್ಸುತಃ ।
ತದಾರಭ್ಯ ದ್ವಿಜವರೋ ನಾನಾಲೀಲಾವಿಶಾರದಃ ॥ ೧೬ ॥

ಇತ್ಥಂ ಲೀಲಾ ಕೃತಾ ತೇನ ಕಥಿತಾ ಸಾ ಮಯಾ ಮುನೇ ।
ತಲ್ಲೀಲಾಮಪರಾಂ ತಾತ ಶೃಣು ಪ್ರೀತ್ಯಾ ವದಾಮ್ಯಹಂ ॥ ೧೭ ॥

---

೧೩. ಆದುದರಿಂದ ನೀನು ನನಗೆ ಜಾತಕರ್ಮಾದಿಗಳೇ ಮೊದಲಾದ ಸಂಸ್ಕಾರವನ್ನು ಮಾಡಲನುವಾಗು. ಈ ವಿಷಯಗಳೆಲ್ಲವೂ ಬಹಳ ರಹಸ್ಯವಾದುದರಿಂದ ಎಲ್ಲೂ ಹೇಳಕೂಡದು ಎಂದನು.

೧೪. ಬ್ರಹ್ಮನು ಹೇಳಿದನು ;—ಎಲೈ ದೇವರ್ಷಿಯಾದ ನಾರದನೇ, ಅನಂತರ ಆ ವಿಶ್ವಾಮಿತ್ರನು ಆ ಬಾಲಕನಿಗೆ ವೇದೋಕ್ತರೀತಿಯಿಂದ ಪ್ರೀತಿಪೂರ್ವಕವಾಗಿ ಎಲ್ಲ ಸಂಸ್ಕಾರಗಳನ್ನೂ ಮಾಡಿದನು.

೧೫. ಆದರಿಂದ ಶಿವಸುತನೂ ಸುಪ್ರೀತನಾಗಿ ಆ ವಿಶ್ವಾಮಿತ್ರಮುನಿಗೆ ದಿವ್ಯವಾದ ಜ್ಞಾನವನ್ನು ಕರುಣಿಸಿದನು.

೧೬. ಅಂದಿನಿಂದ ಶಿವಸುತನು ವಿಶ್ವಾಮಿತ್ರನನ್ನು ಪುರೋಹಿತನನ್ನಾಗಿ ಮಾಡಿಕೊಂಡನು.

೧೭. ಎಲೈ ಮುನಿಯೇ, ನಾನಾಲೀಲಾವಿಶಾರದನಾದ ಆ ಶಿವಸುತನ ಲೀಲೆಯನ್ನು ಹೇಳಿರುವೆನು. ಆತನ ಮತ್ತೊಂದು ಲೀಲೆಯನ್ನು ಹೇಳುವೆನು, ಪ್ರೀತಿಯಿಂದ ಕೇಳು.

ತಸ್ಮಿನ್ನವಸರೇ ತಾತ ಶ್ವೇತನಾಮಾ ಚ ಸಂಪ್ರತಿ ।
ತತ್ರಾಪಶ್ಯತ್ಸುತಂ ದಿವ್ಯಂ ನಿಜಂ ಪರಮಪಾವನಂ ॥ ೧೮ ॥

ತತಸ್ತಂ ಪಾವಕೋ ಗತ್ವಾ ದೃಷ್ಟ್ವಾಲಿಂಗ್ಯ ಚುಚುಂಬ ಚ ।
ಪುತ್ರೇತಿ ಚೋಕ್ತ್ವಾ ತಸ್ಮೈ ಸ ಶಸ್ತ್ರಂ ಶಕ್ತಿಂ ದದೌ ಚ ಸಃ ॥ ೧೯ ॥

ಗುಹಸ್ತಾಂ ಶಕ್ತಿಮಾದಾಯ ತಚ್ಛೃಂಗಂ ಚಾರುರೋಹ ಹ ।
ತಂ ಜಘಾನ ತಯಾ ಶಕ್ತ್ಯಾ ಶೃಂಗೋ ಭುವಿ ಪಪಾತ ಹ ॥ ೨೦ ॥

ದಶಪದ್ಮಮಿತಾ ವೀರಾ ರಾಕ್ಷಸಾಃ ಪೂರ್ವಮಾಗತಾಃ ।
ತದ್ವಧಾರ್ಥಂ ದ್ರುತಂ ನಷ್ಟಾ ಬಭೂವುಸ್ತತ್ಪ್ರಹಾರತಃ ॥ ೨೧ ॥

ಹಾಹಾಕಾರೋ ಮಹಾನಾಸೀಚ್ಚ ಕಂಪೇ ಸಾಚಲಾ ಮಹೀ ।
ತ್ರೈಲೋಕ್ಯಂ ಚ ಸುರೇಶಾನಸ್ಸದೇವಸ್ತತ್ರ ಚಾಗಮತ್ ॥ ೨೨ ॥

ದಕ್ಷಿಣೇ ತಸ್ಯ ಪಾರ್ಶ್ವೇ ಚ ವಜ್ರೇಣ ಸ ಜಘಾನ ಚ ।
ಶಾಖನಾಮಾ ತತೋ ಜಾತಃ ಪುಮಾಂಶ್ಚೈಕೋ ಮಹಾಬಲಃ ॥ ೨೩ ॥

---

೧೮-೧೯. ಅದೇ ಸಮಯದಲ್ಲಿ ಅಗ್ನಿಯು ಅಲ್ಲಿಗೆ ಬಂದು ಪರಮಪವಿತ್ರನಾದ ತನ್ನ ಮಗನನ್ನು ನೋಡಿದನು. ಅನಂತರ ಆ ಮಗುವನ್ನು ಎತ್ತಿಕೊಂಡು ಅದನ್ನು ಆಲಿಂಗಿಸಿ ಮಗುವೇ ಎಂದೆನ್ನುತ್ತಾ ಅವನನ್ನು ಚುಂಬಿಸಿದನು. ಮತ್ತು ಅವನಿಗೆ ಒಂದು ಶಕ್ತಿಯನ್ನು (ಶಸ್ತ್ರವನ್ನು) ಕೊಟ್ಟನು.

೨೦. ಗುಹನು ಆ ಶಕ್ತ್ಯಾಯುಧವನ್ನು ಪರ್ವತದ ಶಿಖರದಮೇಲೆ ಪ್ರಯೋಗಿಸಲು ಆ ಶಿಖರವು ಪರ್ವತದಿಂದ ಕಳಚಿ ಭೂಮಿಯಮೇಲೆ ಬಿದ್ದಿತು.

೨೧. ಅನಂತರ ಹತ್ತು ಪದ್ಮಸಂಖ್ಯಾಕರಾದ ರಾಕ್ಷಸರೆಲ್ಲರೂ ಅವನೊಡನೆ ಯುದ್ಧಮಾಡಲು ಬಂದರು. ಗುಹನು ಶಕ್ತ್ಯಾಯುಧವನ್ನು ಪ್ರಯೋಗಿಸಲು ಅದರ ಏಟನಿಂದ ಅವರೆಲ್ಲರೂ ಜಾಗ್ರತೆಯಾಗಿ ನಾಶಹೊಂದಿದರು.

೨೨-೨೩. ಅದರಿಂದ ಅಲ್ಲಿ ಹಾಹಾಕಾರವುಂಟಾಯಿತು. ಪರ್ವತಗಳೂ ಭೂಮಿಯೂ ನಡುಗಿದವು. ಮೂರು ಲೋಕವೂ ತತ್ತರಿಸಿತು. ಆ ಸಮಯದಲ್ಲಿ ಇಂದ್ರನು ಅಲ್ಲಿಗೆ ಬಂದು ತನ್ನ ವಜ್ರಾಯುಧದಿಂದ ಆ ಬಾಲಕನ ಬಲಭಾಗಕ್ಕೆ ಹೊಡೆದನು. ಅದರಿಂದ ಶಾಖನೆಂಬ ಹೆಸರುಳ್ಳ ಬಲಶಾಲಿಯಾದ ಒಬ್ಬ ಮನುಷ್ಯನು ಹುಟ್ಟಿದನು.

ಪುನಶ್ಶಕ್ರೋ ಜಘಾನಾಶು ವಾಮಪಾರ್ಶ್ವೇ ಹಿ ತಂ ತದಾ ।
ವಜ್ರೇಣಾನ್ಯಃ ಪುಮಾರ್ಜಾತೋ ವಿಶಾಖಾಖ್ಯೋಽಪರೋ ಬಲೀ ॥ ೨೪ ॥

ತತಸ್ತದ್ಧೃದಯಂ ಶಕ್ರೋ ಜಘಾನ ಪವಿನಾ ತದಾ ।
ಪರೋಽಭೂನ್ನೈಗಮೋಪಾಖ್ಯಃ ಪುಮಾಂಸ್ತದ್ವನ್ಮಹಾಬಲಃ ॥ ೨೫ ॥

ತದಾ ಸ್ಕಂದಾದಿಚತ್ವಾರೋ ಮಹಾವೀರಾ ಮಹಾಬಲಾಃ ।
ಇಂದ್ರಂ ಹಂತುಂ ದ್ರುತಂ ಜಗ್ಮುಸ್ಸೋಽಹಂ ತಚ್ಛರಣಂ ಯಯೌ ॥ ೨೬ ॥

ಶಕ್ರಸ್ಸ ಸಾಮರಗಣೋ ಭಯಂ ಪ್ರಾಪ್ಯ ಗೃಹಾತ್ತತಃ ।
ಯಯೌ ಸ್ವಲೋಕಂ ಚಕಿತೋ ನ ಭೇದೋ ಜ್ಞಾತವಾನ್ಮುನೇ ॥ ೨೭ ॥

ಸ ಬಾಲಕಸ್ತು ತತ್ರೈವ ತಸ್ಥಾವಾನಂದಸಂಯುತಃ ।
ಪೂರ್ವವನ್ನಿರ್ಭಯಸ್ತಾತ ನಾನಾಲೀಲಾಕರಃ ಪ್ರಭುಃ ॥ ೨೮ ॥

---

೨೪. ಪುನಃ ಇಂದ್ರನು ಆ ಬಾಲಕನ ಎಡಭಾಗಕ್ಕೆ ವಜ್ರಾಯುಧದಿಂದ ಹೊಡೆಯಲು ವಿಶಾಖನೆಂಬ ಹೆಸರುಳ್ಳ ಮತ್ತೊಬ್ಬ ಬಲಶಾಲಿಯಾದ ಪುರುಷನು ಹುಟ್ಟಿದನು.

೨೫. ಇಂದ್ರನು ಮತ್ತೆ ಆ ಹುಡುಗನ ಹೃದಯವನ್ನು ವಜ್ರಾಯುಧದಿಂದ ಹೊಡೆದನು. ಆಗ ನೈಗಮನೆಂಬ ಮತ್ತೊಬ್ಬ ಮಹಾಬಲಿಷ್ಠನಾದ ಪುರುಷನು ಹುಟ್ಟಿದನು.

೨೬. ಅನಂತರ ಸ್ಕಂದ, ಶಾಖ, ವಿಶಾಖ, ನೈಗಮ ಎಂಬ ಮಹಾಬಲಶಾಲಿಗಳಾದ ಈ ನಾಲ್ಕುಜನರೂ ಇಂದ್ರನನ್ನು ಕೊಲ್ಲಲು ಜಾಗ್ರತೆಯಾಗಿ ಹೊರಟರು. ಆಗ ನಾನು ( ಬ್ರಹ್ಮನು ) ಆ ಸ್ಕಂದನನ್ನು ಶರಣುಹೊಂದಿದೆನು.

೨೭. ಅನಂತರ ಇಂದ್ರನು ಭಯಗೊಂಡು ದೇವತೆಗಳೊಡನೆ ತನ್ನ ಲೋಕಕ್ಕೆ ಹೊರಟುಹೋದನು. ಆದರೆ ಈ ಬಾಲಕನಾರೆಂಬುದು ಅವನಿಗೆ ತಿಳಿಯಲಿಲ್ಲ.

೨೮. ಆ ಬಾಲಕನು ಆನಂದದಿಂದ ಅಲ್ಲಿಯೇ ಇದ್ದನು. ಪ್ರಭುವಾದ ಆ ಸ್ಕಂದನು ಪೂರ್ವದಂತೆ ನಿರ್ಭಯನಾಗಿ ನಾನಾವಿಧವಾದ ಆಟಗಳನ್ನಾಡುತ್ತಿದ್ದನು.

ತಸ್ಮಿನ್ನವಸರೇ ತತ್ರ ಕೃತ್ತಿಕಾಖ್ಯಾಶ್ಚ ಷಟ್ ಸ್ತ್ರಿಯಃ ।
ಸ್ನಾತುಂ ಸಮಾಗತಾ ಬಾಲಂ ದದೃಶುಸ್ತಂ ಮಹಾಪ್ರಭುಂ ॥ ೨೯ ॥

ಗ್ರಹೀತುಂ ತಂ ಮನಶ್ಚಕ್ರುಸ್ಸರ್ವಾಸ್ತಾಃ ಕೃತ್ತಿಕಾಃ ಸ್ತ್ರಿಯಃ ।
ವಾದೋ ಬಭೂವ ತಾಸಾಂ ತದ್ಗ್ರಹಣೇಚ್ಛಾಪರೋ ಮುನೇ ॥ ೩೦ ॥

ತದ್ವಾದಶಮನಾರ್ಥಂ ಸ ಷಣ್ಮುಖಾನಿ ಚಕಾರ ಹ ।
ಪಪೌ ದುಗ್ಧಂ ಚ ಸರ್ವಾಸಾಂ ತುಷ್ಟಾಸ್ತಾ ಅಭವನ್ಮುನೇ ॥ ೩೧ ॥

ತನ್ಮನೋಗತಿಮಾಜ್ಞಾಯ ಸರ್ವಾಸ್ತಾಃ ಕೃತ್ತಿಕಾಸ್ತದಾ ।
ತಮಾದಾಯ ಯಯುರ್ಲೋಕಂ ಸ್ವಕೀಯಂ ಮುದಿತಾ ಮುನೇ ॥ ೩೨ ॥

ತಂ ಬಾಲಕಂ ಕುಮಾರಾಖ್ಯಂ ಸ್ತನಂ ದತ್ವಾ ಸ್ತನಾರ್ಥಿನೇ ।
ವರ್ಧಯಾಮಾಸುರೀಶಸ್ಯ ಸುತಂ ಸೂರ್ಯಾಧಿಕಪ್ರಭಂ ॥ ೩೩ ॥

---

೨೯. ಅದೇ ಸಮಯದಲ್ಲಿ ಕೃತ್ತಿಕೆಯರೆಂಬ ಆರುಜನ ಸ್ತ್ರೀಯರು ಸ್ನಾನ ಮಾಡಲು ಅಲ್ಲಿಗೆ ಒಂದು ಆಟವಾಡುತ್ತಿರುವ ಸುಂದರನಾದ ಆ ಬಾಲಕನನ್ನು ನೋಡಿದರು.

೩೦. ಆ ಆರುಜನ ಸ್ತ್ರೀಯರಿಗೂ ಆ ಬಾಲಕನನ್ನು ಎತ್ತಿಕೊಳ್ಳಬೇಕೆಂದು ಮನಸ್ಸಾಯಿತು. ನಾನು ಎತ್ತಿಕೊಳ್ಳಬೇಕು ತಾನು ಎತ್ತಿಕೊಳ್ಳಬೇಕು ಎಂದು ಆ ಆರುಜನ ಕೃತ್ತಿಕೆಯರೂ ಜಗಳವಾಡಿದರು.

೩೧. ಎಲೈ ನಾರದನೇ, ಅವರ ಜಗಳವನ್ನು ಪರಿಹರಿಸಲು ಸ್ಕಂದನು ಆರು ಮುಖಗಳನ್ನು ಧರಿಸಿದನು. ಅನಂತರ ಕೃತ್ತಿಕೆಯರು ಸಂತುಷ್ಟರಾಗಿ ಆ ಮಗುವಿಗೆ ಸ್ತನ್ಯಪಾನವನ್ನು ಮಾಡಿಸಿದರು.

೩೨. ಆ ಬಾಲಕನ ಮನೋಭಿಪ್ರಾಯವನ್ನು ತಿಳಿದು ಆ ಷಟ್ ಕೃತ್ತಿಕೆಯರೂ ಸಂತೋಷದಿಂದ ಆ ಬಾಲಕನನ್ನು ಕರೆದುಕೊಂಡು ತಮ್ಮ ಲೋಕಕ್ಕೆ ಹೋದರು.

೩೩. ಕುಮಾರನೆಂಬ ಹೆಸರನ್ನಿಟ್ಟು ಆ ಬಾಲಕನಿಗೆ ಬೇಕಾದಾಗ ಸ್ತನ್ಯಪಾನ ಮಾಡಿಸುತ್ತಿದ್ದರು ಮತ್ತು ಸೂರ್ಯನಿಗಿಂತಲೂ ಅಧಿಕ ತೇಜಸ್ವಿಯಾದ ಆ ಈಶ್ವರನ ಪುತ್ರನನ್ನು ಪೋಷಿಸುತ್ತಾ ಬಂದರು.

ನ ಚಕ್ರುರ್ಬಾಲಕಂ ಯಾಶ್ಚ ಲೋಚನಾನಾಮಗೋಚರಂ ।
ಪ್ರಾಣೇಭ್ಯೋಽಪಿ ಪ್ರೇಮಪಾತ್ರಂ ಯಃ ಪೋಷ್ಯಾ ತಸ್ಯ ಪುತ್ರಕ ॥ ೩೪ ॥

ಯಾನಿ ಯಾನಿ ಚ ವಸ್ತ್ರಾಣಿ ತ್ರೈಲೋಕ್ಯೇ ದುರ್ಲಭಾನಿ ಚ ।
ದದುಸ್ತಸ್ಮೈ ಚ ತಾಃ ಪ್ರೇಮ್ಣಾ ಭೂಷಣಾನಿ ವರಾಣಿ ಚ ॥ ೩೫ ॥

ದಿನೇ ದಿನೇ ತಾಃ ಪುಪುಷುರ್ಬಾಲಕಂ ತಂ ಮಹಾಪ್ರಭುಂ ।
ಪ್ರಶಂಸಿತಾನಿ ಸ್ವಾದೂನಿ ಭೋಜಯಿತ್ವಾ ವಿಶೇಷತಃ ॥ ೩೬ ॥

ಅಥೈಕಸ್ಮಿನ್ದಿನೇ ತಾತ ಸ ಬಾಲಃ ಕೃತ್ತಿಕಾತ್ಮಜಃ ।
ಗತ್ವಾ ದೇವಸಭಾಂ ದಿವ್ಯಾಂ ಸುಚರಿತ್ರಂ ಚಕಾರ ಹ ॥ ೩೭ ॥

ಸ್ವಮಹೋ ದರ್ಶಯಾಮಾಸ ದೇವೇಭ್ಯೋ ಹಿ ಮಹಾದ್ಭುತಂ ।
ಸವಿಷ್ಣುಭ್ಯೋಽಖಿಲೇಭ್ಯಶ್ಚ ಮಹೋತಿಕರಬಾಲಕಃ ॥ ೩೮ ॥

---

೩೪. ಎಲೈ ನಾರದನೇ, ಆ ಕೃತ್ತಿಕೆಯರ ಕಣ್ಣೆದುರಿಗೇ ಯಾವಾಗಲೂ ಆ ಬಾಲಕನಿರಬೇಕು. ಇಲ್ಲದಿದ್ದರೆ ಅವರಿಗೆ ಸಂತೋಷವಿಲ್ಲ. ಆ ಕುಮಾರನು ಕೃತ್ತಿಕೆಯರಿಗೆ ಅವರ ಪ್ರಾಣಕ್ಕಿಂತಲೂ ಅಧಿಕನಾಗಿ ಪ್ರೇಮಪಾತ್ರನಾದನು. ಈರೀತಿಯಾಗಿ ಅವನನ್ನು ಪೋಷಿಸಿದರು.

೩೫-೩೬. ಕೃತ್ತಿಕೆಯರು ಆ ಬಾಲಕನಿಗೆ ತ್ರೈಲೋಕ್ಯದಲ್ಲಿಯೂ ದುರ್ಲಭವಾಗಿರುವ ವಸ್ತ್ರಗಳನ್ನೂ ಒಡವೆಗಳನ್ನೂ ಇಟ್ಟು ಅಲಂಕರಿಸಿ ಆನಂದಪಡುತ್ತಿದ್ದರು. ಅವನಿಗೆ ಇಷ್ಟವಾಗಿರುವ ರುಚಿಕರವಾದ ತಿಂಡಿಗಳನ್ನೂ ಊಟವನ್ನೂ ಕೊಡುತ್ತಾ ಬೆಳೆಸುತ್ತಿದ್ದರು. ಈರೀತಿ ಮಹಾಪ್ರಭುವಾದ ಕುಮಾರನು ಅಭಿವೃದ್ಧಿಯನ್ನು ಹೊಂದಿದನು.

೩೭. ಎಲೈ ನಾರದನೆ, ಒಂದಾನೊಂದುದಿನ ಕೃತ್ತಿಕಾಸೂನುವಾದ ಆ ಬಾಲಕನು ದೇವತೆಗಳ ಸಭೆಗೆ ಹೋಗಿ ತನ್ನ ಚರಿತ್ರೆಯನ್ನು ಪ್ರಕಟಿಸಿಕೊಂಡನು.

೩೮. ಸಭೆಯಲ್ಲಿ ದೇವತೆಗಳೆಲ್ಲರೂ ವಿಷ್ಣುವೂ ನೋಡುತ್ತಿರಲು ಆ ಬಾಲಕನು ಅದ್ಭುತವಾಗಿ ತನ್ನ ಕಾಂತಿಯನ್ನು ತೋರಿಸಿದನು.

ತಂ ದೃಷ್ಟ್ವಾ ಸಕಲಾಸ್ತೇ ವೈ ಸಾಚ್ಯುತಾಸ್ಸರ್ಷಯಸ್ಸುರಾಃ ।
ವಿಸ್ಮಯಂ ಪ್ರಾಪುರತ್ಯಂತಂ ಪಪ್ರಚ್ಛುಸ್ತಂ ಚ ಬಾಲಕಂ ॥ ೩೯ ॥

ಕೋ ಭವಾನಿತಿ ತಚ್ಛ್ರುತ್ವಾ ನ ಕಿಂಚಿತ್ಸ ಜಗಾದ ಹ ।
ಸ್ವಾಲಯಂ ಸ ಜಗಾಮಾಽಶು ಗುಪ್ತಸ್ತಸ್ಥೌ ಹಿ ಪೂರ್ವವತ್ ॥ ೪೦ ॥

ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಕುಮಾರಖಂಡೇ
ಕಾರ್ತಿಕೇಯಲೀಲಾವರ್ಣನಂ ನಾಮ ತೃತೀಯೋಽಧ್ಯಾಯಃ.

---

೩೯-೪೦. ಕಾಂತಿಯುಕ್ತನಾದ ಆ ಬಾಲಕನನ್ನು ನೋಡಿ ವಿಷ್ಣುವೂ ಋಷಿಗಳೂ ದೇವತೆಗಳೂ ಅತ್ಯಂತ ಆಶ್ಚರ್ಯವನ್ನು ಹೊಂದಿದರು. ಅನಂತರ ಆ ಬಾಲಕನನ್ನು ಕುರಿತು ಎಲೈ ಬಾಲಕನೇ, ನೀನು ಯಾರು ? ಎಂದು ಪ್ರಶ್ನೆಮಾಡಲು ಕುಮಾರನು ಯಾವ ಮಾತನ್ನೂ ಆಡದೆ ಜಾಗ್ರತೆಯಾಗಿ ತನ್ನ ಮನೆಗೆ ಹೊರಟು ಹೋಗಿ ಹಿಂದಿನಂತೆ ಗುಟ್ಟಾಗಿಯೇ ಇದ್ದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿನ ರುದ್ರಸಂಹಿತೆಯ ಕುಮಾರಖಂಡದಲ್ಲಿ
ಕಾರ್ತಿಕೇಯಲೀಲಾವರ್ಣನವೆಂಬ ಮೂರನೆಯ
ಅಧ್ಯಾಯವು ಮುಗಿದುದು.



॥ ಶ್ರೀ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಕುಮಾರಖಂಡೇ

## ಚತುರ್ಥೋಽಧ್ಯಾಯಃ

॥ ನಾರದ ಉವಾಚ ॥

ದೇವದೇವ ಪ್ರಜಾನಾಥ ತತಃ ಕಿಮಭವದ್ವಿಧೇ ।
ವದೇದಾನೀಂ ಕೃಪಾತಸ್ತು ಶಿವಲೀಲಾಸಮನ್ವಿತಂ ॥ ೧ ॥

ಬ್ರಹ್ಮೋವಾಚ ॥

ಕೃತ್ತಿಕಾಭಿರ್ಗೃಹೀತೇ ವೈ ತಸ್ಮಿನ್ ಶಂಭುಸುತೇ ಮುನೇ ।
ಕಶ್ಚಿತ್ಕಾಲೋ ವ್ಯತೀಯಾಯ ಬುಬುಧೇ ನ ಹಿಮಾದ್ರಿಜಾ ॥ ೨ ॥

---

### ನಾಲ್ಕನೆಯ ಅಧ್ಯಾಯವು.

೧. ನಾರದನು ಕೇಳಿದನು :—ಎಲೈ ಲೋಕೇಶ್ವರನಾದ ಬ್ರಹ್ಮನೇ, ಅನಂತರ ಏನು ನಡೆಯಿತು ? ಶಿವಲೀಲೆಗಳಿಗೆ ಸಂಬಂಧಿಸಿರುವ ಆ ಕುಮಾರನ ವಿಷಯವನ್ನು ದಯವಿಟ್ಟು ನನಗೆ ತಿಳಿಸು ಎನ್ನಲು,

೨. ಬ್ರಹ್ಮನು ಹೇಳಿದನು :—ಎಲೈ ನಾರದನೇ, ಕೇಳು. ಕೃತ್ತಿಕೆಯರು ಸ್ಕಂದನನ್ನು ತಂದು ಸಾಕುತ್ತಿರಲು ಅನೇಕ ಕಾಲವು ಕಳೆದುಹೋಯಿತು. ಆದರೂ ಗಿರಿಜೆಗೆ ಮಾತ್ರ ಆ ವಿಷಯವು ತಿಳಿಯಲಿಲ್ಲ.

ತಸ್ಮಿನ್ನವಸರೇ ದುರ್ಗಾ ಸ್ಮೇರಾನನಸರೋರುಹಾ ।
ಉವಾಚ ಸ್ವಾಮಿನಂ ಶಂಭುಂ ದೇವದೇವೇಶ್ವರಂ ಪ್ರಭುಂ ॥ ೩ ॥

॥ ಪಾರ್ವತ್ಯುವಾಚ ॥

ದೇವದೇವ ಮಹಾದೇವ ಶೃಣು ಮೇ ವಚನಂ ಶುಭಂ ।
ಪೂರ್ವಪುಣ್ಯಾತಿಭಾರೇಣ ತ್ವಂ ಮಯಾ ಪ್ರಾಪ್ತ ಈಶ್ವರ ॥ ೪ ॥

ಕೃಪಯಾ ಯೋಗಿಷು ಶ್ರೇಷ್ಠ ವಿಹಾರೇ ತತ್ಪರೋಽಭವಃ ।
ರತಿಭಂಗಃ ಕೃತೋ ದೈವೈಸ್ತತ್ರ ಮೇ ಭವತಾ ಭವ ॥ ೫ ॥

ಭೂಮೌ ನಿಪತಿತಂ ವೀರ್ಯಂ ನೋದರೇ ಮಮ ತೇ ವಿಭೋ ।
ಕುತ್ರ ಯಾತಂ ಚ ತದ್ದೇವ ಕೇನ ದೇವೇನ ನಿಹ್ನುತಂ ॥ ೬ ॥

ಕಥಂ ಮತ್ಸ್ವಾಮಿನೋ ವೀರ್ಯಮಮೋಘಂ ತೇ ಮಹೇಶ್ವರ ।
ಮೋಘಂ ಯಾತಂ ಚ ಕಿಂ ಕಿಂ ವಾ ಶಿಶುರ್ಜಾತಶ್ಚ ಕುತ್ರಚಿತ್ ॥ ೭ ॥

---

೩-೪. ಆ ಸಮಯದಲ್ಲಿ ಗಿರಿಜೆಯು ಮಂದಹಾಸದಿಂದ ತನ್ನ ಸ್ವಾಮಿಯಾದ ಈಶ್ವರನನ್ನು ಕುರಿತು ಪ್ರಶ್ನೆಮಾಡುವಳು: ಓ ಪ್ರಭುವೇ, ನೀನು ದೇವದೇವೇಶ್ವರನು. ಪೂರ್ವಪುಣ್ಯಾತಿಶಯದಿಂದ ನೀನು ನನಗೆ ಪತಿಯಾಗಿರುವೆ. ಯೋಗಿವರ್ಯನಾಗಿದ್ದರೂ ನೀನು ನನ್ನಲ್ಲಿ ದಯವಿಟ್ಟು ಭೋಗವಿಹಾರದಲ್ಲಿ ತತ್ಪರನಾಗಿರುವೆ.

೫-೭. ಎಲೈ ಭವನೇ, ದೇವತೆಗಳು ನನ್ನ ರತಿಕ್ರೀಡೆಯ ಸಮಯದಲ್ಲಿ ಬಂದು ಅದಕ್ಕೆ ಭಗವನ್ನುಂಟುಮಾಡಿದರು. ಆಗ ನಿನ್ನ ವೀರ್ಯವು ಭೂಮಿಯ ಮೇಲೆ ಬಿದ್ದಿತು. ಅದು ನನ್ನ ಉದರವನ್ನು ಪ್ರವೇಶಮಾಡಲಿಲ್ಲ. ಭೂಮಿಯಮೇಲೆ ಬಿದ್ದ ಆ ವೀರ್ಯವು ಎಲ್ಲಿ ಹೋಯಿತು? ಯಾವ ದೇವತೆಯು ಅಪಹರಿಸಿದನು? ನನ್ನ ಸ್ವಾಮಿಯ ವೀರ್ಯವು ಅಮೋಘವಾದುದು. ಅಂತಹುದು ಈಗ ನಿಷ್ಫಲವಾದಂತೆ ಕಾಣುವುದು ಅದು ಹೇಗೆ? ಅಥವಾ ಅದಕ್ಕೆ ಪ್ರಯೋಜನವಾಗಿ ಎಲ್ಲಾದರೂ ಮಗುವಾಗಿರುವುದೇ ಹೇಗೆ ಎಂದಳು.

॥ ಬ್ರಹ್ಮೋವಾಚ ॥

ಪಾರ್ವತೀವಚನಂ ಶ್ರುತ್ವಾ ಪ್ರಹಸ್ಯ ಜಗದೀಶ್ವರಃ ।
ಉವಾಚ ದೇವಾನಾಹೂಯ ಮುನೀಂಶ್ಚಾಪಿ ಮುನೀಶ್ವರ ॥ ೮ ॥

॥ ಮಹೇಶ್ವರ ಉವಾಚ ॥

ದೇವಾಃ ಶೃಣುತ ಮದ್ವಾಕ್ಯಂ ಪಾರ್ವತೀವಚನಂ ಶ್ರುತಂ ।
ಅಮೋಘಂ ಕುತ್ರ ಮೇ ವೀರ್ಯಂ ಯಾತಂ ಕೇನ ಚ ನಿಹ್ನುತಂ ॥ ೯ ॥

ಸಭಯಂ ನಾಪ ತಚ್ಛಿಪ್ರಂ ಸ ಚೇದ್ದಂಡಂ ನ ಚಾರ್ಹತಿ ।
ಶಕ್ತೌ ರಾಜಾ ನ ಶಾಸ್ತಾ ಯಃ ಪ್ರಜಾಬಾಧ್ಯಶ್ಚ ಭಕ್ಷಕಃ ॥ ೧೦ ॥

ಶಂಭೋಸ್ತದ್ವಚನಂ ಶ್ರುತ್ವಾ ಸಮಾಲೋಚ್ಯ ಪರಸ್ಪರಂ ।
ಊಚಸ್ಸರ್ವೇ ಕ್ರಮೇಣೈವ ತ್ರಸ್ತಸ್ತು ಪರತಃ ಪ್ರಭೋಃ ॥ ೧೧ ॥

---

೮. ಬ್ರಹ್ಮನು ಹೇಳಿದನು ;—ಎಲೈ ನಾರದನೇ, ಪಾರ್ವತಿಯು ವಚನವನ್ನು ಕೇಳಿ ಜಗದೀಶ್ವರನು ನಕ್ಕು, ದೇವತೆಗಳನ್ನೂ ಋಷಿಗಳನ್ನು ಕರೆಸಿ ಅವರನ್ನು ಕುರಿತು,

೯. ಶಿವನು ಹೇಳಿದನು ;—ಎಲೈ ದೇವತೆಗಳಿರಾ, ನನ್ನ ಮಾತನ್ನು ಕೇಳಿರಿ. ಪಾರ್ವತಿಯು ಈಗ ಹೇಳಿದ ಮಾತನ್ನು ಕೇಳಿದಿರಷ್ಟೆ ? ಅಂತೆಯೇ ನನ್ನ ಅಮೋಘವಾದ ವೀರ್ಯವು ಎಲ್ಲಿ ಹೋಯಿತು ? ಯಾರು ಅಪಹರಿಸಿದರು ?

೧೦. ಯಾರು ಜಾಗ್ರತೆಯಾಗಿ ಭಯದಿಂದ ಹೇಳುವರೋ, ಅವರಿಗೆ ಶಿಕ್ಷೆ ಯಾಗಲಾರದು. ಶಕ್ತಿವಂತನಾಗಿದ್ದರೂ ರಾಜನಾದವನು ಪ್ರಜೆಗಳನ್ನು ಕಾಪಾಡ ದಿದ್ದರೆ ಅವನು ಪ್ರಜೆಗಳನ್ನು ಹಿಂಸುಸವನು, ಅವನು ಪ್ರಜಾಭಕ್ಷಕನು ಎಂದರೆ ತೊಂದರೆಕೊಡುವವನು ಎಂದೆನಿಸುವನು.

೧೧. ಶಿವನಾಡಿದ ಮಾತನ್ನು ಕೇಳಿ ದೇವತೆಗಳೆಲ್ಲರೂ ಹೆದರಿ ನಡುಗುತ್ತಾ ಪರಸ್ಪರವಾಗಿ ಆಲೋಚಿಸಿ ಒಬ್ಬೊಬ್ಬರಾಗಿ ಹೀಗೆ ಹೇಳಿದರು.

॥ ವಿಷ್ಣುರುವಾಚ ॥

ತೇ ಮಿಥ್ಯಾವಾದಿನಸ್ಸಂತು ಭಾರತೇ ಗುರುದಾರಿಕಾಃ ।
ಗುರುನಿಂದಾರತಾಶ್ಯಶ್ವತ್ತ್ವದ್ವೀರ್ಯಂ ಯೈಶ್ಚ ನಿಹ್ನುತಂ ॥ ೧೨ ॥

॥ ಬ್ರಹ್ಮೋವಾಚ ॥

ತ್ವದ್ವೀರ್ಯಂ ನಿಹ್ನುತಂ ಯೇನ ಪುಣ್ಯಕ್ಷೇತ್ರೇ ಚ ಭಾರತೇ ।
ಸ ನಾನ್ವಿತೋ ಭವೇತ್ತತ್ರ ಸೇವನೇ ಪೂಜನೇ ತವ ॥ ೧೩ ॥

॥ ಲೋಕಪಾಲಾ ಊಚುಃ ॥

ತ್ವದ್ವೀರ್ಯಂ ನಿಹ್ನುತಂ ಯೇನ ಪಾಪಿನಾ ಪತಿತಭ್ರಮಾತ್ ।
ಭಾಜನಂ ತಸ್ಯ ಸೋಪ್ಯುಲ್ಲತ್ಯಂ ತತ್ತಾಪಂ ಕರ್ಮ ಸಂತತಂ ॥ ೧೪ ॥

॥ ದೇವಾ ಊಚುಃ ॥

ಕೃತ್ವಾ ಪ್ರತಿಜ್ಞಾಂ ಯೋ ಮೂಢೋ ನಾಪಾದಯತಿ ಪೂರ್ಣತಾಂ ।
ಭಾಜನಂ ತಸ್ಯ ಪಾಪಸ್ಯ ತ್ವದ್ವೀರ್ಯಂ ಯೇನ ನಿಹ್ನುತಂ ॥ ೧೫ ॥

---

೧೨. ವಿಷ್ಣುವು ಹೇಳಿದನು ;—ಯಾರು ನಿನ್ನ ವೀರ್ಯವನ್ನಪಹರಿಸಿರುವರೋ ಅವರು ಭಾರತಭೂಮಿಯಲ್ಲಿ ಗುರುನಿಂದಾಪರರಾಗಿಯೂ, ಗುರುಹಂತೃಗಳಾಗಿಯೂ ಸುಳ್ಳು ಹೇಳುವವರಾಗಿಯೂ ಆಗಲಿ.

೧೩. ಬ್ರಹ್ಮನು ಹೇಳಿದನು :—ಪುಣ್ಯಭೂಮಿಯಾದ ಭಾರತದಲ್ಲಿ ಯಾರು ನಿನ್ನ ವೀರ್ಯವನ್ನು ಅಪಹರಿಸಿರುವರೋ ಅವರು ನಿನ್ನ ಸೇವೆಗೂ ಪೂಜೆಗೂ ಯೋಗ್ಯನಾಗದಿರಲಿ.

೧೪. ಲೋಕಪಾಲರು ಹೇಳಿದರು ;—ಯಾವ ಪಾಪಿಯು ಭೂಮಿಯಮೇಲೆ ಬಿದ್ದಿತೆಂಬ ಭ್ರಮೆಯಿಂದ ವೀರ್ಯವನ್ನು ಅಪಹರಿಸಿದನೋ ಅವನು ಯಾವಾಗಲೂ ಅತ್ಯಂತ ತಾಪವನ್ನು ಹೊಂದುವನು.

೧೫. ದೇವತೆಗಳು ಹೇಳಿದರು :—ಯಾವ ಮೂಢನು ಪ್ರತಿಜ್ಞೆಯನ್ನು ಮಾಡಿ ಪೂರ್ಣಮಾಡುವುದಿಲ್ಲವೋ ಅಂತಹವನ ಪಾಪವನ್ನು ನಿನ್ನ ವೀರ್ಯವನ್ನಪಹರಿಸಿದವನು ಹೊಂದುವನು.

॥ ದೇವಪತ್ನ್ಯ ಊಚುಃ ॥

ಯಾ ನಿಂದತಿ ಸ್ವಭರ್ತಾರಂ ಪರಂ ಗಚ್ಛತಿ ಪೂರುಷಂ ।
ಮಾತೃಬಂಧುವಿಹೀನಾ ಚ ತ್ವದ್ವೀರ್ಯಂ ನಿಹ್ನುತಂ ಯಥಾ ॥ ೧೬ ॥

॥ ಬ್ರಹ್ಮೋವಾಚ ॥

ದೇವಾನಾಂ ವಚನಂ ಶ್ರುತ್ವಾ ದೇವದೇವೇಶ್ವರೋ ಹರಃ ।
ಕರ್ಮಣಾಂ ಸಾಕ್ಷಿಣಶ್ಚಾಹ ಧರ್ಮಾದೀನ್ಸಭಯಂ ವಚಃ ॥ ೧೭ ॥

ಶ್ರೀ ಶಿವ ಉವಾಚ ॥

ದೇವೈರ್ನ ನಿಹ್ನುತಂ ಕೇನ ತದ್ವೀರ್ಯಂ ನಿಹ್ನುತಂ ಧ್ರುವಂ ।
ತದಮೋಘಂ ಭಗವತೋ ಮಹೇಶಸ್ಯ ಮಮ ಪ್ರಭೋಃ ॥ ೧೮ ॥

ಯೂಯಂ ಚ ಸಾಕ್ಷಿಣೋ ವಿಶ್ವೇ ಸತತಂ ಸರ್ವಕರ್ಮಣಾಂ ।
ಯುಷ್ಮಾಕಂ ನಿಹ್ನುತಂ ಕಿಂ ವಾ ಕಿಂ ಜ್ಞಾತಂ ವಕ್ತುಮರ್ಹಥ ॥ ೧೯ ॥

---

೧೬. ದೇವತಾಸ್ತ್ರೀಯರು ಹೇಳಿದರು ;—ಯಾವ ಸ್ತ್ರೀಯರು ತಮ್ಮ ಪತಿಯನ್ನು ನಿಂದಿಸಿ ಪರಪುರುಷನನ್ನು ಇಚ್ಛಿಸುವರೋ ಮತ್ತು ತಾಯಿ ಮೊದಲಾದ ಬಂಧುಗಳನ್ನು ತ್ಯಜಿಸುವರೋ ಅಂತವರಿಗೆ ಬರುವ ಪಾಪವು ನಿನ್ನ ವೀರ್ಯವನ್ನಪಹರಿಸಿದವನಿಗೆ ಬರುವುದು.

೧೭-೧೮. ಶಿವನು ಹೇಳಿದನು :—ದೇವತೆಗಳ ಮಾತನ್ನು ಕೇಳಿ ದೇವದೇವೇಶ್ವರನಾಧ ಹರನು ಕರ್ಮಗಳಿಗೆ ಸಾಕ್ಷಿಭೂತರಾದ ಧರ್ಮಾದಿಗಳನ್ನು ಕುರಿತು, ದೇವತೆಗಳು ವೀರ್ಯವನ್ನಪಹರಿಸಿದವರಲ್ಲ. ಅಂತೂ ಯಾರಾದರೂ ಅಪಹರಿಸಿರುವುದು ದಿಟವಾದುದು. ಪ್ರಭುವಾದ ನನ್ನ ವೀರ್ಯವು ಅಮೋಘವಾದುದು.

೧೯. ಎಲೈ ವಿಶ್ವೇದೇವತೆಗಳೇ ಎಲ್ಲಾ ಕೆಲಸಗಳಿಗೂ ನೀವು ಸಾಕ್ಷೀಭೂತರು. ನೀವೇನಾದರೂ ಅಪಹರಿಸಿರುವಿರಾ ? ಅಥವಾ ನಿಮಗೆ ತಿಳಿದಿರುವ ವಿಷಯವೇನು ? ಇದೆಲ್ಲವನ್ನೂ ಹೇಳಿರಿ ಎಂದನು.

॥ ಬ್ರಹ್ಮೋವಾಚ ॥
ಈಶ್ವರಸ್ಯ ವಚಃ ಶ್ರುತ್ವಾ ಸಭಾಯಾಂ ಕಂಪಿತಾಶ್ಚ ತೇ ।
ಪರಸ್ಪರಂ ಸಮಾಲೋಕ್ಯ ಕ್ರಮೇಣೋಚುಃ ಪುರಃ ಪ್ರಭೋಃ ॥ ೨೦ ॥

॥ ಬ್ರಹ್ಮೋವಾಚ ॥
ರತೇ ತು ತಿಷ್ಠತೋ ವೀರ್ಯಂ ಪಪಾತ ವಸುಧಾತಲೇ ।
ಮಯಾ ಜ್ಞಾತಮಮೋಘಂ ತಚ್ಛಂಕರಸ್ಯ ಪ್ರಕೋಪತಃ ॥ ೨೧ ॥

॥ ಕ್ಷಿತಿರುವಾಚ ॥
ವೀರ್ಯಂ ಸೋಢುಮಶಕ್ತ್ಯಾಹಂ ತದ್ವಹ್ನೌ ನ್ಯಕ್ಷಿಪಂ ಪುರಾ ।
ಅತೋಽತ್ರ ದುರ್ವಹಂ ಬ್ರಹ್ಮನ್ನಬಲಾಂ ಕ್ಷಂತುಮರ್ಹಸಿ ॥ ೨೨ ॥

॥ ವಹ್ನಿರುವಾಚ ॥
ವೀರ್ಯಂ ಸೋಢುಮಶಕ್ತೋಽಹಂ ತವ ಶಂಕರ ಪರ್ವತೇ ।
ಕೈಲಾಸೇ ನ್ಯಕ್ಷಿಪಂ ಸದ್ಯಃ ಕಪೋತಾತ್ಮಾ ಸುದುಸ್ಸಹಂ ॥ ೨೩ ॥

---

೨೦. ಬ್ರಹ್ಮನು ಹೇಳಿದನು :—ಈಶ್ವರನ ಮಾತನ್ನು ಕೇಳಿ ಆ ಸಭೆಯಲ್ಲಿ ನೆರೆದಿರುವ ದೇವತೆಗಳೆಲ್ಲರೂ ನಡುಗಿದರು. ಪರಸ್ಪರವಾಗಿ ಆಲೋಚಿಸಿ ಶಿವನ ಮುಂದೆ ಕ್ರಮವಾಗಿ ಹೇಳಿಕೊಂಡರು.

೨೧. ನೀವಿಬ್ಬರೂ ರತಿಪ್ರವೃತ್ತರಾಗಲು ನಿನ್ನ ವೀರ್ಯವು ಭೂಮಿಯ ಮೇಲೆ ಬಿದ್ದಿತು. ಆಗ ಈ ವೀರ್ಯವು ಅಮೋಘವಾದುದೆಂದು ನನಗೆ ತಿಳಿಯಿತು.

೨೨. ಭೂಮಿಯು ಹೇಳುವಳು.—ನನಗೆ ನಿನ್ನ ವೀರ್ಯವನ್ನು ತಡೆಯಲಾಗ ಲಿಲ್ಲ. ಅದಕ್ಕೋಸ್ಕರ ನಾನು ನಿನ್ನ ವೀರ್ಯವನ್ನು ಅಗ್ನಿಯಲ್ಲಿ ಹಾಕಿದೆನು. ಎಲೈ ಸ್ವಾಮಿಯೇ, ನಾನು ಅಬಲೆಯು. ನನ್ನನ್ನು ಕ್ಷಮಿಸಬೇಕು ಎಂದಳು.

೨೩. ಅಗ್ನಿಯು ಹೇಳುವನು ;—ನಾನು ನಿನ್ನ ವೀರ್ಯವನ್ನು ಧರಿಸಲು ಅಶಕ್ತನಾದೆನು. ಆದುದರಿಂದ ನಾನು ಪರ್ವತದಲ್ಲಿ ಆ ಅಸಾಧಾರಣವಾದ ವೀರ್ಯ ವನ್ನು ಬಿಟ್ಟುಬಿಟ್ಟೆನು. ನಾನು ಪಾರಿವಾಳದ ರೂಪವನ್ನು ಧರಿಸಿ ನಿನ್ನ ವೀರ್ಯವನ್ನು ಧರಿಸಿದ್ದೆನು.

॥ ಗಿರಿರುವಾಚ ॥
ವೀರ್ಯಂ ಸೋಢುಮಶಕ್ತೋಽಹಂ ತವ ಶಂಕರ ಲೋಕಪ ।
ಗಂಗಾಯಾಂ ಪ್ರಾಕ್ಷಿಪಂ ಸದ್ಯೋ ದುಸ್ಸಹಂ ಪರಮೇಶ್ವರ ॥ ೨೪ ॥

॥ ಗಂಗೋವಾಚ ॥
ವೀರ್ಯಂ ಸೋಢುಮಶಕ್ತಾಹಂ ತವ ಶಂಕರ ಲೋಕಪ ।
ವ್ಯಾಕುಲಾತಿ ಪ್ರಭೋ ನಾಥ ನ್ಯಕ್ಷಿಪಂ ಶರಕಾನನೇ ॥ ೨೫ ॥

॥ ವಾಯುರುವಾಚ ॥
ಶರೇಷು ಪತಿತಂ ವೀರ್ಯಂ ಸದ್ಯೋ ಬಾಲೋ ಬಭೂವ ಹ ।
ಅತೀವಸುದರಶ್ಶಂಭೋ ಸ್ವರ್ನದ್ಯಾಃ ಪಾವನೇ ತಟೇ ॥ ೨೬ ॥

॥ ಸೂರ್ಯ ಉವಾಚ ॥
ರುದಂತಂ ಬಾಲಕಂ ದೃಷ್ಟ್ವಾಗಮಸ್ತಾಚಲಂ ಪ್ರಭೋ ।
ಪ್ರೇರಿತಃ ಕಾಲಚಕ್ರೇಣ ನಿಶಾಯಾಂ ಸ್ಥಾತುಮಕ್ಷಮಃ ॥ ೨೭ ॥

---

೨೪. ಪರ್ವತನು ಹೇಳಿದನು.—ನಾನು ನಿನ್ನ ವೀರ್ಯವನ್ನು ತಡೆಯಲು ಅಶಕ್ತನಾದೆನು. ಆದುದರಿಂದ ಲೋಕಪಾಲಕನಾದ ಶಂಕರನೇ, ನಾನು ಆ ವೀರ್ಯವನ್ನು ಗಂಗಾನದಿಯಲ್ಲಿ ಬಿಟ್ಟುಬಿಟ್ಟೆನು.

೨೫. ಗಂಗೆಯು ಹೇಳಿದಳು.—ಎಲೈ ಪ್ರಭುವೇ, ಲೋಕಪಾಲಕನಾದ ನಿನ್ನ ವೀರ್ಯವನ್ನು ತಡೆಯಲು ಅಸಮರ್ಥಳಾಗಿ ದುಃಖಗೊಂಡು ಪರ್ವತಪ್ರಾಂತದ ಜೊಂಡಿನ ಕಾಡಿನಲ್ಲಿ ತಳ್ಳಿಬಿಟ್ಟೆನು.

೨೬. ವಾಯುವು ಹೇಳಿದನು.—ಅನಂತರ ನಿನ್ನ ವೀರ್ಯವು ಆ ಜೊಂಡಿನಲ್ಲಿ ಬೀಳಲು ಅದರಿಂದ ಒಬ್ಬ ಅತಿ ಸುಂದರನಾದ ಬಾಲಕನು ಗಂಗಾನದಿಯ ಪವಿತ್ರವಾದ ದಡದಲ್ಲಿ ಹುಟ್ಟಿದನು.

೨೭. ಸೂರ್ಯನು ಹೇಳಿದನು.—ಎಲೈ ಪ್ರಭುವೇ, ಆ ಮಗುವು ಅಳುತ್ತಿರುವುದನ್ನು ನೋಡಿ ಕಾಲನಿಯಮದಂತೆಯೂ, ರಾತ್ರಿಯಲ್ಲಿರಲು ಅಸಮರ್ಥನಾದುದರಿಂದಲೂ ಅಸ್ತಾಚಲವನ್ನು ಕುರಿತು ಹೊರಟುಹೋದೆನು.

॥ ಚಂದ್ರ ಉವಾಚ ॥
ರುದಂತಂ ಬಾಲಕಂ ಪ್ರಾಪ್ಯ ಗೃಹೀತ್ವಾ ಕೃತ್ತಿಕಾಗಣಃ ।
ಜಗಾಮ ಸ್ವಾಲಯಂ ಶಂಭೋ ಗಚ್ಛನ್ಬದರಿಕಾಶ್ರಮಂ ॥ ೨೮ ॥

॥ ಜಲಮುವಾಚ ॥
ಅಮುಂ ರುದಂತಮಾನೀಯ ಸ್ತನ್ಯಪಾನೇನ ತಾಃ ಪ್ರಭೋ ।
ವರ್ಧಯಾಮಾಸುರೀಶಸ್ಯ ಸುತಂ ತವ ರವಿಪ್ರಭಂ ॥ ೨೯ ॥

॥ ಸಂಧ್ಯೋವಾಚ ॥
ಅಧುನಾ ಕೃತ್ತಿಕಾನಾಂ ಚ ವಸಂ ತಂ ಪೋಷ್ಯ ಪುತ್ರಕಂ ।
ತನ್ನಾಮ ಚಕ್ರುಸ್ತಾಃ ಪ್ರೇಮ್ಣಾ ಕಾರ್ತಿಕೇಶ್ಚೇತಿ ಕೌತುಕಾತ್ ॥ ೩೦ ॥

॥ ರಾತ್ರಿರುವಾಚ ॥
ನ ಚಕ್ರುರ್ಬಾಲಕಂ ತಾಶ್ಚ ಲೋಚನಾನಾಮಗೋಚರಂ ।
ಪ್ರಾಣೇಭ್ಯೋಽಪಿ ಪ್ರೀತಿಪಾತ್ರಂ ಯಃ ಪೋಷ್ಟಾ ತಸ್ಯ ಪುತ್ರಕಂ ॥ ೩೧ ॥

---

೨೮. ಚಂದ್ರನು ಹೇಳಿದನು.—ಎಲೈ ಶಂಕರನೇ, ಕೃತ್ತಿಕೆಯರು ಬದರಿಕಾಶ್ರಮಕ್ಕೆ ಹೋಗುತ್ತಿರುವಾಗ ಈ ಮಗುವು ಅಳುತ್ತಿರುವುದನ್ನು ನೋಡಿ ಅದನ್ನೆತ್ತಿಕೊಂಡು ತಮ್ಮ ಮನೆಗೆ ಹೋದರು.

೨೯. ಜಲವು ಹೇಳಿತು.—ಎಲೈ ಪ್ರಭುವೇ, ಅಳುತ್ತಿರುವ ಆ ಬಾಲಕನಿಗೆ ಆ ಕೃತ್ತಿಕೆಯರು ಸ್ತನ್ಯಪಾನಮಾಡಿಸಿದರು. ಸೂರ್ಯನಂತೆ ತೇಜೋವಂತನಾದ ಆ ನಿನ್ನ ಮಗನನ್ನು ಪೋಷಿಸಿದರು.

೩೦. ಸಂಧ್ಯೆಯು ಹೇಳಿದಳು.—ಈಗ ಕೃತ್ತಿಕೆಯರು ಆ ಮಗುವನ್ನು ಪೋಷಿಸುತ್ತಾ ಆತನಿಗೆ ಕಾರ್ತಿಕೇಯನೆಂದು ಹೆಸರಿಟ್ಟು ಪ್ರೇಮದಿಂದ ಸಲಹುತ್ತಿರುವರು.

೩೧. ರಾತ್ರಿಯು ಹೇಳಿದಳು.—ಆ ಬಾಲಕನು ಯಾವಾಗಲೂ ತಮ್ಮ ಕಣ್ಮರೆಯಾಗದಂತೆ ಕೃತ್ತಕೆಯರು ನೋಡಿಕೊಳ್ಳುವರು. ಲೋಕಪೋಷಕನಾದ ನಿನ್ನ ಮಗನನ್ನು ಅವರು ತಮ್ಮ ಪ್ರಾಣಕ್ಕಿಂತಲೂ ಅತಿಶಯವಾಗಿ ಪ್ರೀತಿಸುತ್ತಿರುವರು.

॥ ದಿನಮುವಾಚ ॥

ಯಾನಿ ಯಾನಿ ಚ ವಸ್ತ್ರಾಣಿ ಭೂಷಣಾನಿ ವರಾಣಿ ಚ ।
ಪ್ರಶಂಸಿತಾನಿ ಸ್ವಾದೂನಿ ಭೋಜಯಾಮಾಸುರೇವ ತಂ ॥ ೩೨ ॥

॥ ಬ್ರಹ್ಮೋವಾಚ ॥

ತೇಷಾಂ ತದ್ವಚನಂ ಶ್ರುತ್ವಾ ಸಂತುಷ್ಟಃ ಪುರಸೂದನಃ ।
ಮುದಂ ಪ್ರಾಪ್ಯ ದದೌ ಪ್ರೀತ್ಯಾ ವಿಪ್ರೇಭ್ಯೋ ಬಹುದಕ್ಷಿಣಾಂ ॥ ೩೩ ॥

ಪುತ್ರಸ್ಯ ವಾರ್ತಾಂ ಸಂಪ್ರಾಪ್ಯ ಪಾರ್ವತೀ ಹೃಷ್ಟಮಾನಸಾ ।
ಕೋಟಿರತ್ನಾನಿ ವಿಪ್ರೇಭ್ಯೋ ದದೌ ಬಹುಧನಾನಿ ಚ ॥ ೩೪ ॥

ಲಕ್ಷ್ಮೀ ಸರಸ್ವತೀ ಮೇನಾ ಸಾವಿತ್ರೀ ಸರ್ವಯೋಷಿತಃ ।
ವಿಷ್ಣುಸ್ಸರ್ವೇ ಚ ದೇವಾಶ್ಚ ಬ್ರಾಹ್ಮಣೇಭ್ಯೋ ದದುರ್ಧನಂ ॥ ೩೫ ॥

ಪ್ರೇರಿತಸ್ಸ ಪ್ರಭುರ್ದೇವೈರ್ಮುನಿಭಿಃ ಪರ್ವತೈರಥ ।
ದೂತಾನ್ ಪ್ರಸ್ಥಾಪಯಾಮಾಸ ಸ್ವಪುತ್ರೋ ಯತ್ರ ತಾನ್ ಗಣಾನ್ ॥ ೩೬ ॥

---

೩೨. ದಿನವು ಹೇಳಿತು.—ಶ್ರೇಷ್ಠವಾದ ವಸ್ತ್ರಗಳನ್ನುಡಿಸಿ ಒಡವೆಗಳಿಂದಲಂಕರಿಸುವರು ರುಚಿಕರವಾದ ಅನ್ನವನ್ನಿಕ್ಕಿ ಊಟಮಾಡಿಸುವರು.

೩೩. ಬ್ರಹ್ಮನು ಹೇಳಿದನು ;—ದೇವತೆಗಳೆಲ್ಲರೂ ಆಡಿದ ಈ ಮಾತುಗಳೆಲ್ಲವನ್ನೂ ಕೇಳಿ ಶತ್ರುನಾಶಕನಾದ ಈಶ್ವರನು ಸಂತೋಷಗೊಂಡು ಬ್ರಾಹ್ಮಣರಿಗೆ ಅನೇಕ ದಕ್ಷಿಣೆಗಳನ್ನು ಕೊಟ್ಟನು.

೩೪. ಮಗನ ಸಮಾಚಾರವನ್ನು ಕೇಳಿದಾಕ್ಷಣ ಗಿರಿಜೆಯು ಬಲು ಆನಂದಪಟ್ಟಳು. ಬ್ರಾಹ್ಮಣರಿಗೆ ಅನೇಕ ಧನಗಳನ್ನೂ, ಕೋಟಿ ಗಟ್ಟಲೆ ರತ್ನಗಳನ್ನೂ ದಾನಮಾಡಿದಳು.

೩೫. ಲಕ್ಷ್ಮಿಯೂ ಸರಸ್ವತಿಯೂ, ಮೇನಕೆಯೂ, ಸಾವಿತ್ರಿ ಮೊದಲಾದ ಎಲ್ಲಾ ದೇವತಾಸ್ತ್ರೀಯರೂ, ವಿಷ್ಣುವೇ ಮೊದಲಾದ ದೇವತೆಗಳೆಲ್ಲರೂ ಬ್ರಾಹ್ಮಣರಿಗೆ ದ್ರವ್ಯವನ್ನು ದಾನಮಾಡಿದರು.

೩೬. ಅನಂತರ ಪ್ರಭುವಾದ ಶಿವನನ್ನು ದೇವತೆಗಳೂ ಮುನಿಗಳೂ ಪರ್ವತಗಳೂ ಪ್ರಾರ್ಥಿಸಲು, ತನ್ನ ಪುತ್ರನನ್ನು ಹುಡುಕಿತರಲು ದೂತರನ್ನೂ ಗಣಗಳನ್ನೂ ಕಳುಹಿಸಿದನು.

ವೀರಭದ್ರಂ ವಿಶಾಲಾಕ್ಷಂ ಶಂಕುಕರ್ಣಂ ಕರಾಕ್ರಮಂ ।
ನಂದೀಶ್ವರಂ ಮಹಾಕಾಲಂ ವಜ್ರದಂಷ್ಟ್ರಂ ಮಹೋನ್ಮದಂ ॥ ೩೭ ॥

ಗೋಕರ್ಣಾಸ್ಯಂ ದಧಿಮುಖಂ ಜ್ವಲದಗ್ನಿಶಿಖೋಪಮಂ ।
ಲಕ್ಷಂ ಚ ಕ್ಷೇತ್ರಪಾಲಾನಾಂ ಭೂತಾನಾಂ ಚ ತ್ರಿಲಕ್ಷಕಂ ॥ ೩೮ ॥

ರುದ್ರಾಂಶ್ಚ ಭೈರವಾಂಶ್ಚೈವ ಶಿವತುಲ್ಯಪರಾಕ್ರಮಾನ್ ।
ಅನ್ಯಾಂಶ್ಚ ವಿಕೃತಾಕಾರಾನಸಂಖ್ಯಾನಪಿ ನಾರದ ॥ ೩೯ ॥

ತೇ ಸರ್ವೇ ಶಿವದೂತಾಶ್ಚ ನಾನಾಶಸ್ತ್ರಾಸ್ತ್ರಪಾಣಯಃ ।
ಕೃತ್ತಿಕಾನಾಂ ಚ ಭವನಂ ವೇಷ್ಟಯಾಮಾಸುರುದ್ಧತಾಃ ॥ ೪೦ ॥

ದೃಷ್ಟ್ವಾ ತಾನ್ ಕೃತ್ತಿಕಾಸ್ಸರ್ವಾ ಭಯವಿಹ್ವಲಮಾನಸಾಃ ।
ಕಾರ್ತಿಕಂ ಕಥಯಾಮಾಸುರ್ಜ್ವಲಂತಂ ಬ್ರಹ್ಮತೇಜಸಾ ॥ ೪೧ ॥

॥ ಕೃತ್ತಿಕಾ ಊಚುಃ ॥

ವತ್ಸ ಸೈನ್ಯಾನ್ಯಸಂಖ್ಯಾನಿ ವೇಷ್ಟಯಾಮಾಸುರಾಲಯಂ ।
ಕಿಂ ಕರ್ತವ್ಯಂ ಕ್ವ ಗಂತವ್ಯಂ ಮಹಾಭಯಮುಪಸ್ಥಿತಂ ॥ ೪೨ ॥

---

೩೭-೩೯. ವೀರಭದ್ರ, ವಿಶಾಲಾಕ್ಷ, ಶಂಕುಕರ್ಣ, ಕರಾಕ್ರಮ, ನಂದೀಶ್ವರ, ಮಹಾಕಾಲ, ವಜ್ರದಂಷ್ಟ್ರ, ಮಹೋನ್ಮದ, ಗೋಕರ್ಣಾಸ್ಯ, ದಧಿಮುಖ, ಇವರನ್ನೂ ಉರಿಯುತ್ತಿರುವ ಅಗ್ನಿಯಂತೆ ಭಯಂಕರರಾದವರನ್ನೂ, ಲಕ್ಷ ಕ್ಷೇತ್ರಪಾಲಕರನ್ನೂ, ಮೂರು ಲಕ್ಷ ಭೂತಗಳನ್ನೂ ಶಿವನಿಗೆ ಸಮಾನವಾದ ಪರಾಕ್ರಮವುಳ್ಳ ರುದ್ರರನ್ನೂ ಭೈರವರನ್ನೂ ಅನೇಕ ವಿಕಾರಸ್ವರೂಪವುಳ್ಳ ಗಣಗಳನ್ನೂ ಕಳುಹಿಸಿದನು.

೪೦. ಆ ಶಿವದೂತರೆಲ್ಲರೂ।ನಾನಾಶಸ್ತ್ರಾಸ್ತ್ರಗಳನ್ನು ಹಿಡಿದು ಕೃತ್ತಿಕೆಯರ ಮನೆಯನ್ನು ಮುತ್ತಿದರು.

೪೧. ಅವರೆಲ್ಲರೂ ಬಂದುದನ್ನು ನೋಡಿ ಕೃತ್ತಿಕೆಯರು ಭಯದಿಂದ ತತ್ತಳಿಸುತ್ತಾ ಬ್ರಹ್ಮತೇಜಸ್ಸಿನಿಂದ ಪ್ರಕಾಶಿಸುತ್ತಿರುವ ಕಾರ್ತಿಕನನ್ನು ಕುರಿತು,

೪೨. ಎಲೈ ಮಗುವೇ, ಅನೇಕ ಸೈನ್ಯಗಳು ಬಂದು ನಮ್ಮ ಮನೆಯನ್ನು ಮುತ್ತಿರುವರು. ಈಗ ನಾವೇನು ಮಾಡೋಣ ? ಎಲ್ಲಿಗೆ ಹೋಗೋಣ? ಮಹಾಭಯವು ಒದಗಿರುವುದಲ್ಲಾ ಎಂದು ಪರಿತಪಿಸಿದರು.

॥ ಕಾರ್ತಿಕೇಯ ಉವಾಚ ॥

ಭಯಂ ತ್ಯಜತ ಕಲ್ಯಾಣ್ಯೋ ಭಯಂ ಕಿಂ ವಾ ಮಯಿ ಸ್ಥಿತೇ ।
ದುರ್ನಿವಾರ್ಯೋಽಸ್ಮಿ ಬಾಲಶ್ಚ ಮಾತರಃ ಕೇನ ವಾರ್ಯತೇ ॥ ೪೩ ॥

॥ ಬ್ರಹ್ಮೋವಾಚ ॥

ಏತಸ್ಮಿನ್ನಂತರೇ ತತ್ರ ಸೈನ್ಯೇಂದ್ರೋ ನಂದಿಕೇಶ್ವರಃ ।
ಪುರತಃ ಕಾರ್ತಿಕೇಯಸ್ಯೋಪವಿಷ್ಟಸ್ಸಮುವಾಚ ಹ ॥ ೪೪ ॥

॥ ನಂದೀಶ್ವರ ಉವಾಚ ॥

ಭ್ರಾತಃ ಪ್ರವೃತ್ತಿಂ ಶೃಣು ಮೇ ಮಾತರಶ್ಚ ಶುಭಾವಹಾಂ ।
ಪ್ರೇರಿತೋಽಹಂ ಮಹೇಶೇನ ಸಂಹರ್ತ್ರಾ ಶಂಕರೇಣ ಚ ॥ ೪೫ ॥

ಕೈಲಾಸೇ ಸರ್ವದೇವಾಶ್ಚ ಬ್ರಹ್ಮವಿಷ್ಣುಶಿವಾದಯಃ ।
ಸಭಾಯಾಂ ಸಂಸ್ಥಿತಾಸ್ತಾತ ಮಹತ್ಯುತ್ಸವಮಂಗಲೇ ॥ ೪೬ ॥

ತದಾ ಶಿವಾ ಸಭಾಯಾಂ ವೈ ಶಂಕರಂ ಸರ್ವಶಂಕರಂ ।
ಸಂಬೋಧ್ಯ ಕಥಯಾಮಾಸ ತವಾನ್ವೇಷಣಹೇತುಕಂ ॥ ೪೭ ॥

---

೪೩. ಕಾರ್ತಿಕೇಯನು ಹೇಳಿದನು ;—ಎಲೌ ಮಂಗಳೆಯರೇ, ಭಯಪಡಬೇಡಿ. ನಾನಿರುವಾಗ ನಿಮಗೆ ಭಯವೇನು? ನಾನು ಬಾಲಕನಾದರೂ ನನ್ನ ಮುಂದೆ ಯಾರೂ ನಿಲ್ಲಲಾರರು. ನನ್ನನ್ನು ತಡೆಯುವರಾರು ? ಎಂದನು.

೪೪. ಬ್ರಹ್ಮನು ಹೇಳಿದನು.—ಅನಂತರದಲ್ಲಿ ಸೈನ್ಯಾಧಿಪತಿಯಾದ ನಂದಿಕೇಶ್ವರನು ಕಾರ್ತಿಕೇಯನ ಮುಂಭಾಗದಲ್ಲಿ ಕುಳಿತು ಅವನನ್ನು ಕುರಿತು,

೪೫. ನಂದೀಶ್ವರನು ಹೇಳುವನು.—ಓ ತಮ್ಮನೇ, ಎಲೌ ಮಾತೆಯರೇ, ನಾನು ಬಂದಿರುವ ವಿಷಯವನ್ನು ಕೇಳಿರಿ. ನಾನು ಲೋಕಸಂಹಾರಕಾರಣನಾದ ಶಂಕರನ ಅಪ್ಪಣೆಯಿಂದ ಬಂದಿರುವೆನು.

೪೬-೪೭. ಒಂದುದಿನ ಕೈಲಾಸಪರ್ವತದಲ್ಲಿ ದೇವತೆಗಳ ಸಭೆಯು ಸೇರಿತು. ಆಗ ಬ್ರಹ್ಮ, ವಿಷ್ಣು, ಶಿವಾದಿಗಳೇ ಮೊದಲಾದ ದೇವತೆಗಳೆಲ್ಲರೂ ಆ ಸಭೆಗೆ ಬಂದಿದ್ದರು. ಯಾವುದೋ ಒಂದು ಉತ್ಸವಕ್ಕೋಸ್ಕರ ಸಭೆಯು ಸೇರಿದ್ದಿತು. ಆ ಸಮಯದಲ್ಲಿ ಪಾರ್ವತಿಯು ಸರ್ವರಿಗೂ ಮಂಗಳಕರನಾದ ಶಂಕರನನ್ನು ಸಂಬೋಧಿಸಿ ನಿನ್ನನ್ನು ಹುಡುಕಿಸಬೇಕೆಂದು ಅವನನ್ನು ಕೇಳಿದಳು.

ಪಪ್ರಚ್ಛ ತಾನ್ ಶಿವೋ ದೇವಾನ್ ಕ್ರಮಾತ್ತ್ವತ್ಪ್ರಾಪ್ತಿಹೇತವೇ ।
ಪ್ರತ್ಯುತ್ತರಂ ದದುಸ್ತೇ ತು ಪ್ರತ್ಯೇಕಂ ಚ ಯಥೋಚಿತಂ ॥ ೪೮ ॥

ತ್ವಾಮತ್ರ ಕೃತ್ತಿಕಾಸ್ಥಾನೇ ಕಥಯಾಮಾಸುರೀಶ್ವರಂ ।
ಸರ್ವೇ ಧರ್ಮಾದಯೋ ಧರ್ಮಾಧರ್ಮಸ್ಯ ಕರ್ಮಸಾಕ್ಷಿಣಃ ॥ ೪೯ ॥

ಪ್ರಬಭೂವ ರಹಃಕ್ರೀಡಾ ಪಾರ್ವತೀಶಿವಯೋಃ ಪುರಾ ।
ದೃಷ್ಟಸ್ಯ ತು ಸುರೈಶ್ಶಂಭೋರ್ವೀರ್ಯಂ ಭೂಮೌ ಪಪಾತ ಹ ॥ ೫೦ ॥

ಭೂಮಿಸ್ತದಕ್ಷಿಪದ್ವಹ್ನೌ ವಹ್ನಿಶ್ಚಾದ್ರೌ ಸ ಭೂಧರಃ ।
ಗಂಗಾಯಾಂ ಸೋಽಕ್ಷಿಪದ್ವೇಗಾತ್ತರಂಗೈಶ್ಶರಕಾನನೇ ॥ ೫೧ ॥

ತತ್ರ ಬಾಲೋಽಭವತ್ತ್ವಂ ಹಿ ದೇವಕಾರ್ಯಕೃತಿಃ ಪ್ರಭುಃ ।
ತತ್ರ ಲಬ್ಧಃ ಕೃತ್ತಿಕಾಭಿಸ್ತ್ವಂ ಭೂಮಿಂ ಗಚ್ಛ ಸಾಂಪ್ರತಂ ॥ ೫೨ ॥

---

೪೮. ಅನಂತರ ಶಿವನು ನಿನ್ನನ್ನು ಹುಡುಕಿ ತರುವ ವಿಷಯವಾಗಿ ದೇವತೆಗಳೆಲ್ಲರನ್ನೂ ಕೇಳಿದನು. ದೇವತೆಗಳೆಲ್ಲರೂ ಕ್ರಮವಾಗಿ ತನುತಮಗೆ ತೋರಿದಂತೆ ಉತ್ತರವಿತ್ತರು.

೪೯. ಧರ್ಮಾಧರ್ಮಕರ್ಮಗಳಿಗೆ ಸಾಕ್ಷೀಭೂತರಾದ ಧರ್ಮಾದಿಗಳೂ ಮತ್ತು ದೇವತೆಗಳೂ ನೀನು ಕೃತ್ತಿಕೆಯರಲ್ಲಿರುವನೆಂದು ತಿಳಿಸಿದರು.

೫೦. ಪೂರ್ವದಲ್ಲಿ ಪಾರ್ವತೀಪರಮೇಶ್ವರರು ರತಿವಿಲಾಸದಲ್ಲಿ ಪ್ರವೃತ್ತರಾಗಿದ್ದರಷ್ಟೆ. ಅದನ್ನು ದೇವತೆಗಳು ನೋಡಿದುದರಿಂದ ಆಗ ಶಿವನ ವೀರ್ಯವು ಭೂಮಿಯ ಮೇಲೆ ಬಿದ್ದಿತು.

೫೧-೫೨. ಭೂಮಿಯು ಆ ವೀರ್ಯವನ್ನು ಧರಿಸಲಾರದೆ ಅಗ್ನಿಯಲ್ಲಿ ಹಾಕಿದಳು. ಅಗ್ನಿಯು ಅದನ್ನು ಪರ್ವತಕ್ಕೆರಿಸಿದನು. ಆ ಪರ್ವತವು ಅದನ್ನು ಗಂಗಾನದಿಯಲ್ಲಿ ಹಾಕಿದನು. ಗಂಗೆಯು ಆ ವೀರ್ಯವನ್ನು ಪರ್ವತಪ್ರಾಂತದ ಜೊಂಡಿನ ಕಾಡಿನಲ್ಲಿ ತಳ್ಳಿದಳು. ಅಲ್ಲಿ ದೇವಕಾರ್ಯಕರ್ತೃವಾದ ನೀನು ಹುಟ್ಟಿದೆ. ಅನಂತರ ನಿನ್ನನ್ನು ಕೃತ್ತಿಕೆಯರು ಸಾಕಿದರು. ಆದುದರಿಂದ ನೀನೀಗ ಭೂಲೋಕಕ್ಕೆ ನಡೆ.

ತವಾಭಿಷೇಕಂ ಶಂಭುಸ್ತು ಕರಿಷ್ಯತಿ ಸುರೈಸ್ಸಹ ।
ಲಪ್ಸ್ಯಸೇ ಸರ್ವಶಸ್ತ್ರಾಣಿ ತಾರಕಾಖ್ಯಂ ಹನಿಷ್ಯಸಿ ॥ ೫೩ ॥

ಪುತ್ರಸ್ತ್ವಂ ವಿಶ್ವಸಂಹರ್ತುಸ್ತ್ವಾಂ ಪ್ರಾಪ್ತುಂ ಚಾಕ್ಷಮಾ ಇಮಾಃ ।
ನಾಗ್ನಿಂ ಗೋಪ್ತುಂ ಯಥಾ ಶಕ್ತಶ್ಶುಷ್ಕವೃಕ್ಷಸ್ಸ್ವಕೋಟರೇ ॥ ೫೪ ॥

ದೀಪ್ತವಾಂಸ್ತ್ವಂ ಚ ವಿಶ್ವೇಷು ನಾಸಾಂ ಗೇಹೇಷು ಶೋಭಸೇ ।
ಯಥಾ ಪತನ್ಮಹಾಕೂಪೇ ದ್ವಿಜರಾಜೋ ನ ರಾಜತೇ ॥ ೫೫ ॥

ಕರೋಷಿ ಚ ಯಥಾಽಽಲೋಕಂ ನಾಚ್ಛನ್ನೋಽಸ್ಮಾಸು ತೇಜಸಾ ।
ಯಥಾ ಸೂರ್ಯಃ ಕಲಾಚ್ಛನ್ನೋ ನ ಭವೇನ್ಮಾನವಸ್ಯ ಚ ॥ ೫೬ ॥

ವಿಷ್ಣುಸ್ತ್ವಂ ಜಗತಾಂ ವ್ಯಾಪೀ ನಾನ್ಯೋ ಜಾತೋಽಸಿ ಶಾಂಭವ ।
ಯಥಾ ನ ಕೇಷಾಂ ವ್ಯಾಪ್ಯಂ ಚ ತತ್ಸರ್ವಂ ವ್ಯಾಪಕಂ ನಭಃ ॥ ೫೭ ॥

---

೫೩. ಈಗ ಈಶ್ವರನು ನಿನಗೆ ದೇವತೆಗಳ ಸೈನ್ಯಾಧಿಪತಿಯಾಗಿ ಪಟ್ಟಗಟ್ಟುವನು. ಎಲ್ಲಾ ಶಸ್ತ್ರಾಸ್ತ್ರಗಳನ್ನೂ ಪಡೆಯುವೆ. ತಾರಕಾಸುರನನ್ನು ಕೊಲ್ಲುವೆ.

೫೪. ನೀನು ಲೋಕಸಂಹಾರಕನಾದ ಶಿವನ ಮಗನು. ನಿನ್ನನ್ನು ಈ ಕೃತ್ತಿಕೆಯರು ಪಡೆಯಲಾರರು. ಒಣಗಿದಮರವು ತನ್ನ ಪೊಟರೆಯಲ್ಲಿರುವ ಅಗ್ನಿಯನ್ನು ಯಾವ ರೀತಿ ಗೋಪ್ಯವಾಗಿಡಲು ಸಮರ್ಥವಾಗಲಾರದೋ ಅದರಂತೆ ನಿನ್ನನ್ನು ಗೋಪ್ಯವಾಗಿಡಲು ಆಗುವುದಿಲ್ಲ.

೫೫. ಎಲೈ ಕುಮಾರನೇ, ನೀನು ಪ್ರಪಂಚದಲ್ಲಿ ತೇಜಶ್ಶಾಲಿಯು. ಇಂತಹ ನೀನು ಈ ಮನೆಯಲ್ಲಿ ಪ್ರಕಾಶಿಸಲು ಯೋಗ್ಯನಲ್ಲ. ಆಕಾಶದಲ್ಲಿ ರಾರಾಜಿಸುವ ಚಂದ್ರನು ಒಂದು ಹಳ್ಳದಲ್ಲಿ ಬಿದ್ದರೆ ಹೇಗೆ ಪ್ರಕಾಶಿಸಲಾರನೋ ಹಾಗೆ ವಿಶ್ವತೇಜಸ್ವಿಯಾದ ನೀನು ಇಂತಹ ಮನೆಯಲ್ಲಿ ಇದ್ದರೆ ಶೋಭಿಸುವುದಿಲ್ಲ.

೫೬. ಕಲಾಪ್ರಚ್ಛನ್ನನಾದ ಸೂರ್ಯನು ಹೇಗೆ ಮಾನವರಿಗೆ ತನ್ನ ಬೆಳಕನ್ನು ತೋರಿಸುವುದಿಲ್ಲವೋ ಅಂತೆಯೇ ನೀನು ನಿನ್ನ ಸ್ವರೂಪವನ್ನು ಮುಚ್ಚಿಕೊಂಡು ನಿನ್ನ ತೇಜಸ್ಸನ್ನು ನಮಗೆ ಪ್ರಕಾಶಪಡಿಸಿಲ್ಲ.

೫೭. ಜಗದ್ವ್ಯಾಪಿಯಾದ ವಿಷ್ಣುವೇ ನೀನು. ಎಲೈ ಶಿವಕುಮಾರನೇ, ಹೇಗೆ ಅಂತರಿಕ್ಷವು ಪ್ರಪಂಚವನ್ನೇ ವ್ಯಾಪಿಸಿಕೊಂಡಿದ್ದರೂ ತನಗೆ ಬೇರೆಯವರ ಆಶ್ರಯವು ಬೇಕಾಗಿಲ್ಲವೋ ಅದರಂತೆ ನಿನಗೆ ಇತರರ ಅವಲಂಬನೆಯು ಬೇಕಾಗಿಲ್ಲ.

ಯೋಗೀಂದ್ರೋ ನಾಸುಲಿಪ್ತಶ್ಚ ಭಾಗೀ ಚೇತ್ಪರಿಪೋಷಣೇ ।
ನೈವ ಲಿಪ್ತೋ ಯಥಾತ್ಮಾ ಚ ಕರ್ಮಯೋಗೇಷು ಜೀವಿನಾಂ ॥ ೫೮ ॥

ವಿಶ್ವಾರಂಭಸ್ತ್ವಮಿಾಶಶ್ಚ ನಾಸು ತೇ ಸಂಭವೇತ್ ಸ್ಥಿತಿಃ ।
ಗುಣಾನಾಂ ತೇಜಸಾಂ ರಾಶಿರ್ಯಥಾತ್ಮಾನಂ ಚ ಯೋಗಿನಃ ॥ ೫೯ ॥

ಭ್ರಾತರ್ಯೇ ತ್ವಾಂ ವಿಜಾನಂತಿ ತೇ ನರಾ ಹತಬುದ್ಧಯಃ ।
ನಾದ್ರಿಯಂತೇ ಯಥಾ ಭೇಕಾಸ್ತ್ವೇಕವಾಸಾಶ್ಚ ಪಂಕಜಾನ್ ॥ ೬೦ ॥

॥ ಕಾರ್ತಿಕೇಯ ಉವಾಚ ॥

ಭ್ರಾತಸ್ಸರ್ವಂ ವಿಜಾನಾಸಿ ಜ್ಞಾನಂ ತ್ರೈಕಾಲಿಕಂ ಚ ಯತ್ ।
ಜ್ಞಾತೀ ತ್ವಂ ಕಾ ಪ್ರಶಂಸಾ ತೇ ಯತೋ ಮೃತ್ಯುಂಜಯಾಶ್ರಿತಃ ॥ ೬೧ ॥

---

೫೮. ಜೀವಾತ್ಮರುಗಳ ಕರ್ಮಫಲಗಳಿಗೆ ಪರಮಾತ್ಮನು ಹೇಗೆ ಭಾಗಿಯಾಗುವುದಿಲ್ಲವೋ ಹಾಗೆ ಇತರರನ್ನು ಸಲಹುವ ಕಾರ್ಯದಲ್ಲಿ ತತ್ಪರನಾದ ಯೋಗಿವರ್ಯನು ಅದರ ಫಲಕ್ಕೆ ಭಾಗಿಯಾಗುವುದಿಲ್ಲ.

೫೯. ಯೋಗಿಗಳು ಸತ್ವರಜಸ್ತಮೋಗುಣಗಳಿಂದ ಕೂಡಿದವರಾಗಿಯೂ, ತೇಜಸ್ವಿಗಳಾಗಿಯೂ ಇದ್ದರೂ ಸಹ ಹೇಗೆ ಗುಣ, ತೇಜಸ್ಸುಗಳ ಸಂಬಂಧವಿಲ್ಲದೆ ಬೇರೆಯಾಗಿರುವರೋ ಹಾಗೆ ನೀನು ಜಗತ್ಕರ್ತೃವಾದರೂ ಜಗತ್ತಿನಲ್ಲಿ ಅಡಗದೆ ಬೇರೆಯಾಗಿರುವೆ.

೬೦. ಎಲೈ ಸೋದರನೇ, ಒಂಸೇ ಕಮಲಸರೋವರದಲ್ಲಿ ವಾಸಮಾಡುತ್ತಿರುವ ಕಪ್ಪೆಗಳು ಕಮಲದೊಡನೆ ಇದ್ದುಕೊಂಡು ಕಮಲವನ್ನು ಹೇಗೆ ತಿಳಿಯಲಾರವೋ ಹಾಗೆ ನಿನ್ನೊಡನೆ ಇದ್ದರೂ ಕೂಡ ಮಂದಬುದ್ಧಿಯುಳ್ಳವರು ನಿನ್ನನ್ನು ತಿಳಿಯಲಾರರು.

೬೧-೬೨. ಕಾರ್ತಿಕೆಯನು ಹೇಳಿದನು :—ಎಲೈ ಸೋದರನೇ, ನೀನು ಸರ್ವಜ್ಞನು. ಭೂತ, ಭವಿಷ್ಯದ್ವರ್ತಮಾನಕಾಲ ಜ್ಞಾನಿಯು. ಮೃತ್ಯುಂಜಯನಾದ ಶಿವನನ್ನು ಆಶ್ರಯಿಸಿರುವೆಯಾದುದರಿಂದ ಹೆಚ್ಚಿಗೆ ಪ್ರಶಂಸೆಮಾಡಬೇಕಾದು

ಕರ್ಮಣಾಂ ಜನ್ಮ ಯೇಷಾಂ ವಾ ಯಾಸು ಯಾಸು ಚ ಯೋನಿಷು ।
ತಾಸು ತೇ ನಿರ್ವೃತಿಂ ಭ್ರಾತಃ ಪ್ರಾಪ್ನುವಂತೀಹ ಸಾಂಪ್ರತಂ ॥ ೬೨ ॥

ಕೃತ್ತಿಕಾ ಜ್ಞಾನವತ್ಯಶ್ಚ ಯೋಗಿನ್ಯಃ ಪ್ರಕೃತೇಃ ಕಲಾಃ ।
ಸ್ತನ್ಯೈನಾಸಾಂ ವರ್ಧಿತೋಽಹಮುಪಕಾರೇಣ ಸಂತತಂ ॥ ೬೩ ॥

ಆಸಾಮಹಂ ಪೋಷ್ಯಪುತ್ರೋ ಮದಂಶಾ ಯೋಷಿತಸ್ತ್ವಿಮಾಃ ।
ತಸ್ಯಾಶ್ಚ ಪ್ರಕೃತೇರಂಶಾಸ್ತತಸ್ತತ್ಸ್ವಾಮಿವೀರ್ಯಜಃ ॥ ೬೪ ॥

ನ ಮದ್ಭಂಗೋ ಹ ಶೈಲೇಂದ್ರಕನ್ಯಾಯಾ ನಂದಿಕೇಶ್ವರ ।
ಸಾ ಚ ಮೇ ಧರ್ಮತೋ ಮಾತಾ ಯಥೇಮಾಸ್ಸರ್ವಸಮ್ಮತಾಃ ॥ ೬೫ ॥

ಶಂಭುನಾ ಪ್ರೇಷಿತಸ್ತ್ವಂ ಚ ಶಂಭೋಃ ಪುತ್ರಸಮೋ ಮಹಾನ್ ।
ಆಗಚ್ಛಾಮಿ ತ್ವಯಾ ಸಾರ್ಧಂ ದ್ರಕ್ಷ್ಯಾಮಿ ದೇವತಾಕುಲಂ ॥ ೬೬ ॥

---

ದಿಲ್ಲ. ಕರ್ಮಕ್ಕೆ ಅನುಸಾರವಾಗಿ ಯಾವ ಯಾವ ಯೋನಿಗಳಲ್ಲಿ ಯಾವ ಯಾವ ಪ್ರಾಣಿಗಳು ಹುಟ್ಟುವುವೋ ಅವು ಆಯಾ ಯೋನಿಗಳಲ್ಲಿಯೇ ನಾಶವನ್ನು ಹೊಂದುವವು

೬೩-೬೪. ಕೃತ್ತಿಕೆಯರೆಲ್ಲರೂ ಜ್ಞಾನಿಗಳು. ಅವರೆಲ್ಲರೂ ಪ್ರಕೃತಿಯ ಅಂಶದಿಂದ ಹುಟ್ಟಿದವರು. ಅವರು ನನಗೆ ಸ್ತನ್ಯಪಾನಮಾಡಿಸಿ ಬೆಳೆಸಿದರು. ಇವರ ಸಂತತವಾದ ಉಪಕಾರದಿಂದ ನಾನವರ ಪೋಷ್ಯಪುತ್ರನು. ಈ ಕೃತ್ತಿಕೆಯರೆಲ್ಲರೂ ನನ್ನ ಅಂಶದವರು. ನಾನು ಶಿವನ ವೀರ್ಯದಿಂದ ಹುಟ್ಟಿದವನು.

೬೫. ಎಲೈ ನಂದಿಕೇಶ್ವರನೇ, ಪರ್ವತಪುತ್ರಿಯಾದ ಪಾರ್ವತಿಯು ನನ್ನನ್ನು ಬಿಟ್ಟಿದ್ದರೂ ನ್ಯಾಯವಾಗಿ ಪಾರ್ವತಿಯೇ ನನ್ನ ತಾಯಿಯು. ಈ ಕೃತ್ತಿಕೆಯರೆಲ್ಲರೂ ಲೋಕರೀತಿಯಾಗಿ ನನ್ನ ಮಾತೆಯರು.

೬೬. ನೀನು ಶಂಭುವಿಗೆ ಪುತ್ರನಂತಿರುವೆ. ಶಂಭುವೇ ನಿನ್ನನ್ನು ಕಳುಹಿಸಿರುವನು. ನಾನು ನಿನ್ನೊಡನೆ ಬಂದು ದೇವತೆಗಳೆಲ್ಲರನ್ನೂ ನೋಡುವೆನು.

ಇತ್ಯೇವಮುಕ್ತ್ವಾ ತಂ ಶೀಘ್ರಂ ಸಂಬೋಧ್ಯ ಕೃತ್ತಿಕಾಗಣಂ ।
ಕಾರ್ತಿಕೇಯಃ ಪ್ರತಸ್ಥೇ ಹಿ ಸಾರ್ಧಂ ಶಂಕರಪಾರ್ಷದೈಃ ॥ ೬೭ ॥

ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಕುಮಾರಖಂಡೇ
ಕಾರ್ತಿಕೇಯಾನ್ವೇಷಣನಂದಿಸಂವಾದವರ್ಣನಂ ನಾಮ
ಚತುರ್ಥೋಽಧ್ಯಾಯಃ



---

೬೭. ಈ ರೀತಿಯಾಗಿ ಹೇಳಿ ಕಾರ್ತಿಕೇಯನು ಕೃತ್ತಿಕೆಯರನ್ನು ಬೀಳ್ಕೊಂಡು ಶಿವಗಣಗಳೊಂದಿಗೆ ಹೊರಟನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ರುದ್ರಸಂಹಿತೆಯಲ್ಲಿನ ಕುಮಾರಖಂಡದಲ್ಲಿ
ಕಾರ್ತಿಕೇಯಾನ್ವೇಷಣ ನಂದಿಸಂವಾದ ವರ್ಣನವೆಂಬ ನಾಲ್ಕನೇ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿ ವ ಮ ಹಾ ಪು ರಾ ಣೇ

## ರುದ್ರಸಂಹಿತಾಯಾಂ ಕುಮಾರಖಂಡೇ

## ಪಂಚಮೋಽಧ್ಯಾಯಃ

॥ ಬ್ರಹ್ಮೋವಾಚ ॥

ಏತಸ್ಮಿನ್ನಂತರೇ ತತ್ರ ದದರ್ಶ ರಥಮುತ್ತಮಂ ।
ಅದ್ಭುತಂ ಶೋಭಿತಂ ಶಶ್ವದ್ವಿಶ್ವಕರ್ಮವಿನಿರ್ಮಿತಂ ॥ ೧ ॥

ಶತಚಕ್ರಂ ಸುವಿಸ್ತೀರ್ಣಂ ಮನೋಯಾಯಿ ಮನೋಹರಂ ।
ಪ್ರಸ್ಥಾಪಿತಂ ಚ ಪಾರ್ವತ್ಯಾ ವೇಷ್ಟಿತಂ ಪಾರ್ಷದೈರ್ವರೈಃ ॥ ೨ ॥

---

### ಐದನೆಯ ಅಧ್ಯಾಯವು.

೧-೨. ಬ್ರಹ್ಮನು ಹೇಳಿದನು :—ಇಷ್ಟರಲ್ಲಿ ಕಾರ್ತಿಕೇಯನು ತನ್ನೆದುರಿಗೆ ಒಂದು ರಥವು ನಿಂತಿರುವುದನ್ನು ನೋಡಿದನು. ಆ ರಥವು ವಿಶ್ವಕರ್ಮನಿಂದ ನಿರ್ಮಿಸಲ್ಪಟ್ಟು, ಅದ್ಭುತವಾಗಿ ಕಾಣಿಸುತ್ತಿತ್ತು. ನೂರು ಚಕ್ರಗಳಿದ್ದು ವಿಸ್ತಾರವಾಗಿದ್ದಿತು. ಮನೋವೇಗದಂತೆ ವೇಗವಾಗಿಯೂ, ಮನೋಹರವಾಗಿಯೂ ಇದ್ದಿತು. ಅದರಲ್ಲಿ ಪಾರ್ವತಿಯೂ ಶಿವಗಣಗಳೆಲ್ಲವೂ ಇದ್ದವು.

ಸಮಾರೋಹತ್ತತೋಽನಂತೋ ಹೃದಯೇನ ವಿದೂಯತಾ ।
ಕಾರ್ತಿಕೇಃ ಪರಮಜ್ಞಾನೀ ಪರಮೇಶಾನವೀರ್ಯಜಃ ॥ ೩ ॥

ತದೈವ ಕೃತ್ತಿಕಾಃ ಪ್ರಾಪ್ಯ ಮುಕ್ತಕೇಶ್ಯಶ್ಚಾಽಽತುರಾಃ ।
ಉನ್ಮತ್ತಾ ಇವ ತತ್ರೈವ ವಕ್ತುಮಾರೇಭಿರೇ ವಚಃ ॥ ೪ ॥

॥ ಕೃತ್ತಿಕಾ ಊಚುಃ ॥

ವಿಹಾಯಾಸ್ಮಾನ್ ಕೃಪಾಸಿಂಧೋ ಗಚ್ಛಸಿ ತ್ವಂ ಹಿ ನಿರ್ದಯಃ ।
ನಾಯಂ ಧರ್ಮೋ ಮಾತೃವರ್ಗಾನ್ ಪಾಲಿತೋ ಯತ್ ಸುತಸ್ತ್ಯಜೇತ್ ॥

ಸ್ನೇಹೇನ ವರ್ಧಿತೋಽಸ್ಮಾಭಿಃ ಪುತ್ರೋಽಸ್ಮಾಕಂ ಚ ಧರ್ಮತಃ ।
ಕಿಂ ಕುರ್ಮಃ ಕ್ವ ಚ ಯಾಸ್ಯಾಮೋ ವಯಂ ಕಿಂ ಕರವಾಮ ಹ ॥ ೬ ॥

ಇತ್ಯುಕ್ತ್ವಾ ಕೃತ್ತಿಕಾಸ್ಸರ್ವಾಃ ಕೃತ್ವಾ ವಕ್ಷಸಿ ಕಾರ್ತಿಕಂ ।
ದ್ರುತಂ ಮೂರ್ಛಾಮವಾಪುಸ್ತಾಸ್ಸುತವಿಚ್ಛೇದಕಾರಣಾತ್ ॥ ೭ ॥

---

೩. ಪರಮಜ್ಞಾನಿಯೂ ಪರಮೇಶ್ವರನ ವೀರ್ಯದಿಂದ ಹುಟ್ಟಿದವನೂ ಆದ ಆ ಕಾರ್ತಿಕೇಯನು ಮನಸ್ಸಿನಲ್ಲಿ ದುಃಖಿಸುತ್ತಾ ಆ ರಥವನ್ನು ಹತ್ತಿದನು.

೪. ಆ ಸಮಯದಲ್ಲಿ ಕೃತ್ತಿಕೆಯರು ತಲೆಯನ್ನು ಕೆದರಿಕೊಂಡು ದುಃಖಿಸುತ್ತಿದ್ದರು. ಉನ್ಮತ್ತರಂತೆ ಅಲ್ಲಿ ನಿಂತು,

೫-೬. ಕೃತ್ತಿಕೆಯರು ಹೇಳಿದರು :—ಎಲೈ ಕೃಪಾನಿಧಿಯೇ, ನಮ್ಮನ್ನು ಬಿಟ್ಟು ನಿರ್ದಯನಾಗಿ ನೀನು ಹೊರಡುತ್ತಿರುವೆ, ಇದು ನಿನಗೆ ಧರ್ಮವಲ್ಲ. ನಾವೆಲ್ಲರೂ ನಿನಗೆ ತಾಯಿಯರಲ್ಲವೇ? ನಿನ್ನನ್ನು ಕಾಪಾಡಿದ ನಮ್ಮನ್ನು ಬಿಟ್ಟು ಹೋಗುವುದುಚಿತವೇ? ಧರ್ಮದಿಂದಲೂ ಸ್ನೇಹದಿಂದಲೂ ನಿನ್ನನ್ನು ಬೆಳೆಸಿದೆವು. ನಿನ್ನನ್ನು ಬಿಟ್ಟು ನಾವೆಲ್ಲಿ ಹೋಗೋಣ? ನಾವೇನು ಮಾಡೋಣ? ನಮಗೊಂದೂ ತೋರುವುದಿಲ್ಲ.

೭. ಈ ರೀತಿಯಾಗಿ ಹೇಳಿ ಆ ಕೃತ್ತಿಕೆಯರೆಲ್ಲರೂ ಆ ಕಾರ್ತಿಕೇಯನನ್ನು ಆಲಂಗಿಸಿ ಮಗನು ಹೊರಟುಹೋಗುವನೆಂಬ ದುಃಖದಿಂದ ಮೂರ್ಛೆಹೊಂದಿದರು.

ತಾಃ ಕುಮಾರೋ ಬೋಧಯಿತ್ವಾ ಅಧ್ಯಾತ್ಮವಚನೇನ ವೈ ।
ತಾಭಿಶ್ಚ ಪಾರ್ಷದೈಸ್ಸಾರ್ಧಮಾರುರೋಹ ರಥಂ ಮುನೇ ॥ ೮ ॥

ದೃಷ್ಟ್ವಾ ಶ್ರುತ್ವಾ ಮಂಗಲಾನಿ ಬಹೂನಿ ಸುಖದಾನಿ ವೈ ।
ಕುಮಾರಃ ಪಾರ್ಷದೈಸ್ಸಾರ್ಧಂ ಜಗಾಮ ಪಿತೃಮಂದಿರಂ ॥ ೯ ॥

ದಕ್ಷಿಣೇ ನಂದಿಯುಕ್ತಶ್ಚ ಮನೋಯಾಯಿ ರಥೇನ ಚ ।
ಕುಮಾರಃ ಪ್ರಾಪ ಕೈಲಾಸಂ ನ್ಯಗ್ರೋಧಾಕ್ಷಯಮೂಲಕೇ ॥ ೧೦ ॥

ತತ್ರ ತಸ್ಥೌ ಕೃತ್ತಿಕಾಭಿಃ ಪಾರ್ಷದಪ್ರವರೈಸ್ಸಹ ।
ಕುಮಾರಃ ಶಾಂಕರಿಃ ಪ್ರೀತೋ ನಾನಾಲೀಲಾವಿಶಾರದಃ ॥ ೧೧ ॥

ತದಾ ಸರ್ವೇ ಸುರಗಣಾ ಋಷಯಃ ಸಿದ್ಧಚಾರಣಾಃ ।
ವಿಷ್ಣುನಾ ಬ್ರಹ್ಮಣಾ ಸಾರ್ಧಂ ಸಮಾಚಖ್ಯುಸ್ತದಾಗಮಂ ॥ ೧೨ ॥

---

೮-೧೦. ಎಲೈ ನಾರದನೇ, ಹೀಗೆ ದುಃಖಿಸುತ್ತಿರುವ ಆ ಕೃತ್ತಿಕೆಯರನ್ನು ಕುಮಾರನು ವೇದಾಂತವಾಕ್ಯಗಳಿಂದ ಸಮಾಧಾನಪಡಿಸಿ ಶಿವಗಣಗಳೊಡನೆ ರಥವನ್ನು ಹತ್ತಿದನು. ಮನೋವೇಗವುಳ್ಳ ಆ ರಥದಲ್ಲಿ ಕುಮಾರನ ಎಡಭಾಗದಲ್ಲಿ ನಂದಿಯು ಕುಳಿತಿದ್ದನು. ಅನೇಕ ವಿಧವಾಗಿಯೂ, ಮನೋಹರವಾಗಿಯೂ ಇರುವ ಮಂಗಳ ಸ್ತೋತ್ರಗಳಿಂದ ಸ್ತುತಿಸಲ್ಪಡುತ್ತಿರಲು ಕೈಲಾಸಪರ್ವತದಲ್ಲಿ ವಿಶಾಲವಾದ ಆಲದ ಮರದ ಬುಡದಲ್ಲಿರುವ ತನ್ನ ತಂದೆಯ ಸಮೀಪಕ್ಕೆ ಹೋದನು.

೧೧. ಅನಂತರ ಶಂಕರನ ಮಗನಾದ ಕುಮಾರನು ಕೃತ್ತಿಕೆಯರೊಡನೆಯೂ ಸಭಾಸದರೊಡನೆಯೂ ಶಿವನ ಮನೆಯಲ್ಲಿ ನಿಂತನು. ನಾನಾಲೀಲಾವಿಶಾರದನಾದ ಆ ಕುಮಾರನು ತಂದೆಯ ಬಳಿ ಸಂತೋಷದಿಂದಿದ್ದನು.

೧೨. ಅನಂತರ ದೇವತೆಗಳೂ ಋಷಿಗಳೂ, ಸಿದ್ಧರೂ, ಚಾರಣರೂ, ವಿಷ್ಣು, ಬ್ರಹ್ಮ ಮೊದಲಾದವರೂ ಕುಮಾರನು ಬಂದುದ್ದನ್ನು ನೋಡಿ ಶಿವನಿಗೆ ಈ ವಿಷಯವನ್ನು ತಿಳಿಸಿದರು.

ತದಾ ದೃಷ್ಟ್ವಾ ತು ಗಾಂಗೇಯಂ ಯಯೌ ಪ್ರಮುದಿತಶ್ಶಿವಃ ।
ಅನ್ಯೈಸ್ಸಮೇತೋ ಹರಿಣಾ ಬ್ರಹ್ಮಣಾ ಚ ಸುರರ್ಷಿಭಿಃ ॥ ೧೩ ॥

ಶಂಖಾಶ್ಚ ಬಹವೋ ನೇದುರ್ಭೇರೀತೂರ್ಯಾಣ್ಯನೇಕಶಃ ।
ಉತ್ಸವಸ್ಸುಮಹಾನಾಸೀದ್ದೇವಾನಾಂ ತುಷ್ಟಚೇತಸಾಂ ॥ ೧೪ ॥

ತದಾನೀಮೇವ ತಂ ಸರ್ವೇ ವೀರಭದ್ರಾದಯೋ ಗಣಾಃ ।
ಕುರ್ವಂತಃ ಸ್ವಸ್ವಯುಃ ಕೇಲಿಂ ನಾನಾತಾಲಧರಸ್ವರಾಃ ॥ ೧೫ ॥

ಸ್ತಾವಕಾಸ್ತೂಯಮಾನಾಶ್ಚ ಚಕ್ರುಸ್ತೇ ಗುಣಕೀರ್ತನಂ ।
ಜಯಶಬ್ದಂ ನಮಶ್ಶಬ್ದಂ ಕುರ್ವಾಣಾಃ ಪ್ರೀತಮಾನಸಾಃ ॥ ೧೬ ॥

ದ್ರಷ್ಟುಂ ಯಯುಸ್ತಂ ಶರಜಂ ಶಿವಾತ್ಮಜಮನುತ್ತಮಂ ॥ ೧೭ ॥

ಪಾರ್ವತೀ ಮಂಗಲಂ ಚಕ್ರೇ ರಾಜಮಾರ್ಗಂ ಮನೋಹರಂ ।
ಪದ್ಮರಾಗಾದಿಮಣಿಭಿಸ್ಸಂಸ್ಕೃತಂ ಪರಿತಃ ಪುರಂ ॥ ೧೮ ॥

---

೧೩. ಶಿವನು ವಿಷ್ಣು ಬ್ರಹ್ಮ ಮುಂತಾದ ದೇವತೆಗಳೊಡನೆ ಅಲ್ಲಿಗೆ ಬಂದ ಗಂಗಾಪುತ್ರನಾದ ಕುಮಾರನನ್ನು ನೋಡಿ ಸಂತೋಷಗೊಂಡನು.

೧೪. ಆ ಸಮಯದಲ್ಲಿ ಅನೇಕ ಶಂಖಗಳನ್ನು ಊದಿದರು. ಭೇರಿಯೇ ಮೊದಲಾದ ಅನೇಕ ಮಂಗಳವಾದ್ಯಗಳು ಮೊಳಗಿದವು. ಸಂತೋಷಗೊಂಡ ದೇವತೆಗಳು ಮಹಾ ಉತ್ಸವವನ್ನು ಆಚರಿಸಿದರು.

೧೫-೧೭. ಅದೇ ಸಮಯದಲ್ಲಿ ವೀರಭದ್ರನೇ ಮೊದಲಾದ ಶಿವಗಣಗಳು ಕೈಯಲ್ಲಿ ತಾಳವನ್ನು ಧರಿಸಿ ಆ ಶಿವಸುತನ ಗುಣಗಳನ್ನು ಕೀರ್ತನೆಮಾಡುತ್ತಾ ಕುಮಾರನಿಗೆ ಜಯವಾಗಲಿ, ಅವನಿಗೆ ವಂದನೆಗಳು ಎಂದು ಜಯಶಬ್ದವನ್ನೂ, ನಮಶ್ಶಬ್ದವನ್ನೂ, ಉಚ್ಚರಿಸುತ್ತಾ ಅತ್ಯಂತ ಪ್ರೀತಿಯಿಂದ ಕಾರ್ತಿಕೇಯನನ್ನು ನೋಡಲು ಬಂದರು.

೧೮-೧೯. ಪಾರ್ವತಿಯು ರಾಜಮಾರ್ಗವನ್ನು ಮನೋಹರವಾಗಿ ಅಲಂಕರಿಸಿದಳು. ಪಟ್ಟಣವೆಲ್ಲವೂ ಪದ್ಮರಾಗವೇ ಮೊದಲಾದ ರತ್ನಗಳಿಂದ ಅಲಂಕರಿಸ

ಪತಿಪುತ್ರವತೀಭಿಶ್ಚ ಸಾಧ್ವೀಭಿಃ ಸ್ತ್ರೀಭಿರನ್ವಿತಾಃ ।
ಲಕ್ಷ್ಮ್ಯಾದಿತ್ರಿಂಶದ್ದೇವೀಶ್ಚ ಪುರಃ ಕೃತ್ವಾ ಸಮಾಯಯೌ ॥ ೧೯ ॥

ರಂಭಾದ್ಯಪ್ಸರಸೋ ದಿವ್ಯಾಸ್ಸಸ್ಮಿತಾ ವೇಷಸಂಯುತಾಃ ।
ಸಂಗೀತನರ್ತನಪರಾ ಬಭೂವುಶ್ಚ ಶಿವಾಜ್ಞಯಾ ॥ ೨೦ ॥

ಯಂ ತಂ ಸಮೀಕ್ಷಯಾಮಾಸುರ್ಗಾಂಗೇಯಂ ಶಂಕರೋಪಮಂ ।
ದದೃಶುಸ್ತೇ ಮಹತ್ತೇಜೋ ವ್ಯಾಪ್ತಮಾಸೀಜ್ಜಗತ್ರಯೇ ॥ ೨೧ ॥

ತತ್ತೇಜಸಾ ವೃತಂ ಬಾಲಂ ತಪ್ತಚಾಮೀಕರಪ್ರಭಂ ।
ವವಂದಿರೇ ದ್ರುತಂ ಸರ್ವೇ ಕುಮಾರಂ ಸೂರ್ಯವರ್ಚಸಂ ॥ ೨೨ ॥

ಜಹರ್ಷುರ್ವಿನತಸ್ಕಂಧಾ ನಮಶ್ಶಬ್ದರತಾಸ್ತದಾ ।
ಪರಿವಾರ್ಯೋಪತಸ್ಥುಸ್ತೇ ವಾಮದಕ್ಷಿಣಮಾಗತಾಃ ॥ ೨೩ ॥

---

ಲ್ಪಟ್ಟಿತು. ಗಿರಿಜೆಯು ಮುತ್ತೈದೆಯರಿಂದಲೂ ಪತಿಪುತ್ರರುಳ್ಳಸುಮಂಗಲಿಯರಿಂದಲೂ ಲಕ್ಷ್ಮಿಯೇ ಮೊದಲಾದ ಮೂವತ್ತು ಜನ ಸ್ತ್ರೀಯರೊಡನೆ ಕೂಡಿಕೊಂಡು ಕುಮಾರನಿರುವ ಸ್ಥಳಕ್ಕೆ ಬಂದಳು.

೨೦. ದೇವಲೋಕದ ರಂಭೆಯೇ ಮುಂತಾದ ಅಪ್ಸರೆಯರು ನಾನಾವೇಷ ಭೂಷಿತರಾಗಿ ಶಿವನ ಅಪ್ಪಣೆಯಂತೆ ಸಂಗೀತವನ್ನು ಹಾಡುತ್ತಾ ನರ್ತನಮಾಡಿದರು.

೨೧-೨೨. ಆ ಕುಮಾರನು ಶಂಕರನಂತೆ ತ್ರಿಲೋಕತೇಜಸ್ವಿಯಾಗಿದ್ದನು. ಪುಟವಿಕ್ಕಿದ ಚಿನ್ನದಂತಿರುವ ಶರೀರಕಾಂತಿಯಿಂದಲೂ ಸೂರ್ಯನಂತೆ ಅತಿವರ್ಚಸ್ವಿಯಾಗಿಯೂ ಬೆಳಗುತ್ತಿದ್ದನು. ಇಂತಹ ಆ ಬಾಲಕನನ್ನು ಅಲ್ಲಿಗೆ ಬಂದವರೆಲ್ಲರೂ ನೋಡಿ ಸಂತೋಷದಿಂದ ನಮಸ್ಕರಿಸಿದರು.

೨೩. ಅವರೆಲ್ಲರೂ ನಮಶ್ಶಬ್ದವನ್ನು ಬಾರಿಬಾರಿಗೂ ಉಚ್ಚರಿಸುತ್ತಾ ತಲೆಯನ್ನು ಬಗ್ಗಿಸಿಕೊಂಡು ಆ ಕುಮಾರನ ಎಡಬಲಭಾಗಗಳಲ್ಲಿ ಸುತ್ತಲೂ ನಮ್ರತೆಯಿಂದ ಕುಳಿತುಕೊಂಡರು.

ಅಹಂ ವಿಷ್ಣುಶ್ಚ ಶಕ್ರಶ್ಚ ತಥಾ ದೇವಾದಯೋಽಖಿಲಾ ।
ದಂಡವತ್ಪತಿತಾ ಭೂಮೌ ಪರಿವಾರ್ಯ ಕುಮಾರಕಂ ॥ ೨೪ ॥

ಏತಸ್ಮಿನ್ನಂತರೇ ಶಂಭುರ್ಗಿರಿಜಾ ಚ ಮುದಾನ್ವಿತಾ ।
ಮಹೋತ್ಸವಂ ಸಮಾಗಮ್ಯ ದದರ್ಶ ತನಯಂ ಮುದಾ ॥ ೨೫ ॥

ಪುತ್ರಂ ನಿರೀಕ್ಷ್ಯ ಚ ತದಾ ಜಗದೇಕಬಂಧುಃ
ಪ್ರೀತ್ಯಾನ್ವಿತಃ ಪರಮಯಾ ಪರಯಾ ಭವಾನ್ಯಾ ।
ಸ್ನೇಹಾನ್ವಿತೋ ಭುಜಗಭೋಗಯುತೋ ಹಿ ಸಾಕ್ಷಾತ್
ಸರ್ವೇಶ್ವರಃ ಪರಿವೃತಃ ಪ್ರಮಥೈಃ ಪರೇಶಃ ॥ ೨೬ ॥

ಅಥ ಶಕ್ತಿಧರಃ ಸ್ಕಂದೋ ದೃಷ್ಟ್ವಾ ತೌ ಪಾರ್ವತೀಶಿವೌ ।
ಅವರುಹ್ಯ ರಥಾತ್ತೂರ್ಣಂ ಶಿರಸಾ ಪ್ರಣನಾಮ ಹ ॥ ೨೭ ॥

---

೨೪. ನಾನೂ (ಬ್ರಹ್ಮನು) ವಿಷ್ಣುವೂ, ಇಂದ್ರನೂ, ಇನ್ನೂ ಇತರ ದೇವತೆಗಳೆಲ್ಲರೂ ಸಾಷ್ಟಾಂಗಪ್ರಣಾಮವನ್ನು ಮಾಡಿ ಆ ಕುಮಾರನನ್ನು ಸುತ್ತುವರಿದು ಕುಳಿತೆವು.

೨೫. ಈ ಸಮಯಕ್ಕೆ ಸರಿಯಾಗಿ ಶಿವನೂ, ಪಾರ್ವತಿಯೂ ಅಲ್ಲಿಗೆ ಬಂದು ಅಲ್ಲಿ ನಡೆಯುತ್ತಿರುವ ಉತ್ಸವವನ್ನು ನೋಡಿ ಸಂತೋಷಗೊಂಡು ಆನಂದದಿಂದ ಕುಮಾರನನ್ನು ನೋಡಿದರು.

೨೬. ಜಗದೇಕಬಂಧುವಾದ ಪರಮೇಶ್ವರನು ಶ್ರೇಷ್ಠಳಾದ ಗಿರಿಜೆಯೊಡನೆಯೂ ಪ್ರಮಥಗಣಗಳೊಡನೆಯೂ ಅಲ್ಲಿಗೆ ಬಂದು ಅತ್ಯಾದರದಿಂದ ಮಗನನ್ನು ನೋಡಿದನು. ಆಗ ಶಿವನಿಗೆ ತನ್ನ ಪುತ್ರನಲ್ಲಿ ಅತಿಯಾದ ಸ್ನೇಹವೂ ವಿಶ್ವಾಸವೂ ಹುಟ್ಟಿತು.

೨೭. ಶಕ್ತಿಧರನಾದ ಸ್ಕಂದನು ಪಾರ್ವತೀಪರಮೇಶ್ವರರನ್ನು ನೋಡಿ ರಥದಿಂದ ಜಾಗ್ರತೆಯಾಗಿ ಇಳಿದು ತಲೆವಾಗಿ ನಮಸ್ಕರಿಸಿದನು.

ಉಪಗುಹ್ಯ ಶಿವಃ ಪ್ರೀತ್ಯಾ ಕುಮಾರಂ ಮೂರ್ಧ್ನಿ ಶಂಕರಃ ।
ಜಘ್ರೌ ಪ್ರೇಮ್ಣಾ ಪರೇಶಾನಃ ಪ್ರಸನ್ನಃ ಸ್ನೇಹಕರ್ತೃಕಃ ॥ ೨೮ ॥

ಉಪಗುಹ್ಯ ಗುಹಂ ತತ್ರ ಪಾರ್ವತೀ ಜಾತಸಂಭ್ರಮಾ ।
ಪ್ರಸ್ರುತಂ ಪಾಯಯಾಮಾಸ ಸ್ತನಂ ಸ್ನೇಹಪರಿಪ್ಲುತಾ ॥ ೨೯ ॥

ತದಾ ನೀರಾಜಿತೋ ದೇವೈಸ್ಸಕಲತ್ರೈರ್ಮುದಾನ್ವಿತೈಃ ।
ಜಯಶಬ್ದೇನ ಮಹತಾ ವ್ಯಾಪ್ತಮಾಸೀನ್ನಭಸ್ಥಲಂ ॥ ೩೦ ॥

ಋಷಯೋ ಬ್ರಹ್ಮಘೋಷೇಣ ಗೀತೇನೈವ ಚ ಗಾಯಕಾಃ ।
ವಾದ್ಯೈಶ್ಚ ಬಹವಸ್ತತ್ರೋಪತಸ್ಥುಶ್ಚ ಕುಮಾರಕಂ ॥ ೩೧ ॥

ಸ್ವಮಂಕಮಾರೋಪ್ಯ ತದಾ ಮಹೇಶಃ
ಕುಮಾರಕಂ ತಂ ಪ್ರಭಯಾ ಸಮುಜ್ಜ್ವಲಂ ।
ಬಭೌ ಭವಾನೀಪತಿರೇವ ಸಾಕ್ಷಾತ್
ಶಿವಾನ್ವಿತಃ ಪುತ್ರವತಾಂ ವರಿಷ್ಠಃ ॥ ೩೨ ॥

---

೨೮. ಶಿವನು ಕುಮಾರನ ಸಮೀಪಕ್ಕೆ ಹೋಗಿ ಪ್ರಸನ್ನನಾಗಿ ಪ್ರೀತಿಯಿಂದ ಆ ಕುಮಾರನ ಶಿರವನ್ನಾಘ್ರಾಣಿಸಿದನು.

೨೯. ಪಾರ್ವತಿಯು ಸಹ ಸಂಭ್ರಮದೊಡನೆ ಕುಮಾರನ ಹತ್ತಿರಕ್ಕೆ ಹೋಗಿ ವಾತ್ಸಲ್ಯದಿಂದ ಆ ಬಾಲಕನಿಗೆ ಸ್ತನ್ಯಪಾನಮಾಡಿಸಿದಳು.

೩೦. ಅನಂತರ ದೇವತೆಗಳೂ ಅವರ ಪತ್ನಿಯರೂ ಕುಮಾರನಿಗೆ ಆರತಿ ಯನ್ನೆತ್ತಿದರು. ಎಲ್ಲರೂ ಕುಮಾರನಿಗೆ ಜಯವಾಗಲಿ ಎಂದು ಹರಿಸಿದರು. ಆ ಜಯಶಬ್ದವು ಆಕಾಶದವರೆಗೂ ಹಬ್ಬಿತು.

೩೧. ಋಷಿಗಳು ವೇದಘೋಷವನ್ನು ಮಾಡಿದರು ಸಂಗೀತಗಾರರು ಗಾನ ಮಾಡಿದರು. ಅನೇಕ ವಾದ್ಯಗಳು ಮೊಳಗಿದವು.

೩೨. ಪುತ್ರವಂತರಲ್ಲಿ ಶ್ರೇಷ್ಠನಾದ ಮಹೇಶ್ವರನು ದಿವ್ಯತೇಜಸ್ಸಿನಿಂದ ಬೆಳಗು ತ್ತಿರುವ ತನ್ನ ಕುಮಾರನನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ಪಾರ್ವತಿಯೊಡನೆ ಪ್ರಕಾಶಿಸಿದನು.

ಕುಮಾರಃ ಸ್ವಗಣೈಸ್ಸಾರ್ಧಮಾಜಗಾಮ ಶಿವಾಲಯಂ ।
ಶಿವಾಜ್ಞಯಾ ಮಹೋತ್ಸಾಹೈಸ್ಸಹ ದೇವೈರ್ಮಹಾಸುಖೀ ॥ ೩೩ ॥

ದಂಪತೀ ತೌ ತದಾ ತತ್ರೈಕಪದ್ಯೇನ ವಿರೇಜತುಃ ।
ವಿವಂದ್ಯಮಾನಾವೃಷಿಭಿರಾವೃತೌ ಸುರಸತ್ತಮೈಃ ॥ ೩೪ ॥

ಕುಮಾರಃ ಕ್ರೀಡಯಾಮಾಸ ಶಿವೋತ್ಸಂಗೇ ಮುದಾನ್ವಿತಃ ।
ವಾಸುಕಿಂ ಶಿವಕಂಠಸ್ಥಂ ಪಾಣಿಭ್ಯಾಂ ಸಮಪೀಡಯತ್ ॥ ೩೫ ॥

ಪ್ರಹಸ್ಯ ಭಗವಾನ್ ಶಂಭುಶ್ಶಶಂಸ ಗಿರಿಜಾಂ ತದಾ ।
ನಿರೀಕ್ಷ್ಯ ಕೃಪಯಾ ದೃಷ್ಟ್ಯಾ ಕೃಪಾಲುರ್ಲೀಲಯಾಕೃತಿಂ ॥ ೩೬ ॥

ಮಂದಸ್ಮಿತೇನ ಚ ತದಾ ಭಗವಾನ್ಮಹೇಶಃ
ಪ್ರಾಪ್ತೋ ಮುದಂ ಚ ಪರಮಾಂ ಗಿರಿಜಾಸಮೇತಃ ।
ಪ್ರೇಮ್ಣಾ ಸ ಗದ್ಗದಗಿರೋ ಜಗದೇಕಬಂಧು-
ರ್ನೋವಾಚ ಕಿಂಚನ ವಿಭುರ್ಭುವನೈಕಭರ್ತಾ ॥ ೩೭ ॥

---

೩೩. ಅನಂತರ ಶಿವನಪ್ಪಣೆಯ ಮೇರೆಗೆ ಕುಮಾರನು ತನ್ನ ಗಣಗಳೊಡನೆಯೂ, ಮಹಾ ಉತ್ಸಾಹಿಗಳಾದ ದೇವತೆಗಳೊಡನೆಯೂ ಶಿವಮಂದಿರವನ್ನು ಪ್ರವೇಶಿಸಿ ಸುಖವಾಗಿದ್ದನು.

೩೪. ಋಷಿಗಳೂ, ದೇವತೆಗಳೂ ಪರಿಪರಿಯಾಗಿ ಸ್ತೋತ್ರಮಾಡುತ್ತಿರಲು ಆ ಪಾರ್ವತೀಪರಮೇಶ್ವರರು ಕುಮಾರನೊಡಗೂಡಿ ಮಹಾವೈಭವದಿಂದ ರಾರಾಜಿಸುತ್ತಿದ್ದರು.

೩೫. ಕುಮಾರನು ಶಿವನ ತೊಡೆಯಲ್ಲಿ ಕುಳಿತು ಸಂತೋಷದಿಂದ ಆಟವಾಡುತ್ತಿದ್ದನು. ಶಿವನ ಕುತ್ತಿಗೆಯಲ್ಲಿರುವ ವಾಸುಕಿಯನ್ನು ಆಟಕ್ಕೋಸ್ಕರ ತನ್ನ ಕೈಗಳಿಂದ ಕೆಣಕುತ್ತಿದ್ದನು.

೩೬-೩೭. ಕೃಪಾನಿಧಿಯಾದ ಶಂಭುವು ಮುಗುಳ್ನಗೆ ನಗುತ್ತಾ ಕುಮಾರನು ಆಟವಾಡುತ್ತಿರುವುದನ್ನು ಗಿರಿಜೆಗೆ ತೋರಿಸುತ್ತಿದ್ದನು. ಗಿರಿಜೆಯನ್ನು ಹೊಗಳಿದನು. ಆಗ ಶಂಕರನಿಗೆ ಕುಮಾರನಲ್ಲಿರುವ ವಾತ್ಸಲ್ಯದಿಂದ ಆನಂದಬಾಷ್ಪಗಳು ಮೂಡಿದವು. ಜಗದೇಕಬಂಧುವಾದ ಆ ಶಿವನು ಪ್ರೇಮದಿಂದ ಮಾತು ಗದ್ಗದವಾಗುತ್ತಿರಲು ಏನನ್ನೂ ಹೇಳಲಾರದವನಾಗಿ ಗಿರಿಜೆಯೊಡಗೂಡಿ ಆನಂದಪರವಶನಾದನು.

ಅಥ ಶಂಭುರ್ಜಗನ್ನಾಥೋ ಹೃಷ್ಟೋ ಲೌಕಿಕವೃತ್ತವಾನ್ ।
ರತ್ನಸಿಂಹಾಸನೇ ರಮ್ಯೇ ವಾಸಯಾಮಾಸ ಕಾರ್ತಿಕಂ ॥ ೩೮ ॥

ವೇದಮಂತ್ರಾಭಿಪೂತೈಶ್ಚ ಸರ್ವತೀರ್ಥೋದಪೂರ್ಣಕೈಃ ।
ಸದ್ರತ್ನಕುಂಭಶತಕೈಃ ಸ್ನಾಪಯಾಮಾಸ ತಂ ಮುದಾ ॥ ೩೯ ॥

ಸದ್ರತ್ನಸಾರರಚಿತಕಿರೀಟಮುಕುಟಾಂಗದಂ ।
ವೈಜಯಂತೀಂ ಸ್ವಮಾಲಾಂ ಚ ತಸ್ಮೈ ಚಕ್ರಂ ದದೌ ಹರಿಃ ॥ ೪೦ ॥

ಶೂಲಂ ಪಿನಾಕಂ ಪರಶುಂ ಶಕ್ತಿಂ ಪಾಶುಪತಂ ಶರಂ ।
ಸಹಾರಾಸ್ತ್ರಂ ಚ ಪರಮಾಂ ವಿದ್ಯಾಂ ತಸ್ಮೈ ದದೌ ಶಿವಃ ॥ ೪೧ ॥

ಅದಾಮಹಂ ಯಜ್ಞಸೂತ್ರಂ ವೇದಾಂಶ್ಚ ವೇದಮಾತರಂ ।
ಕಮಂಡಲುಂ ಚ ಬ್ರಹ್ಮಾಸ್ತ್ರಂ ವಿದ್ಯಾಂ ಚೈವಾರಿಮರ್ದಿನೀಂ ॥ ೪೨ ॥

---

೩೮-೩೯. ಅನಂತರ ಲೌಕಿಕ ಜ್ಞಾನವನ್ನು ತಿಳಿದ ಲೋಕಪ್ರಭುವಾದ ಶಿವನು ಸಂತೋಷದಿಂದ ಕುಮಾರನನ್ನು ರತ್ನಸಿಂಹಾಸನದಲ್ಲಿ ಕುಳ್ಳಿರಿಸಿ ಸರ್ವ ತೀರ್ಥಗಳಿಂದ ತುಂಬಿದ ರತ್ನಕಲಶಗಳಲ್ಲಿ ವೇದಮಂತ್ರಗಳಿಂದ ಅಭಿಷೇಕವನ್ನು ಮಾಡಿದನು.

೪೦. ವಿಷ್ಣುವು ರತ್ನದ ಕಿರೀಟವನ್ನೂ, ರತ್ನಖಚಿತ ಭುಜಕೀರ್ತಿಯನ್ನೂ ವೈಜಯಂತೀ ಎಂಬ ಮಾಲಿಕೆಯನ್ನೂ ಮತ್ತು ಚಕ್ರವನ್ನೂ ಕುಮಾರನಿಗೆ ಕೊಟ್ಟನು.

೪೧. ಆ ಮೇಲೆ ಶಿವನು ಶೂಲವನ್ನೂ, ಪಿನಾಕವೆಂಬ ಧನುಸ್ಸನ್ನೂ ಶಕ್ತಿಯನ್ನೂ ಪಾಶುಪತವೆಂಬ ಬಾಣವನ್ನೂ, ಅಸ್ತ್ರವನ್ನೂ, ಹಾರವನ್ನೂ ಪರಮವಿದ್ಯೆಯನ್ನೂ ಕುಮಾರನಿಗೆ ಕೊಟ್ಟನು.

೪೨. ನಾನು (ಬ್ರಹ್ಮನು) ಯಜ್ಞೋಪವೀತವನ್ನೂ, ವೇದಗಳನ್ನೂ, ಗಾಯತ್ರಿಯನ್ನೂ, ಕಮಂಡಲುವನ್ನೂ, ಬ್ರಹ್ಮಾಸ್ತ್ರವನ್ನೂ, ಶತ್ರುನಾಶಕವಾದ ವಿದ್ಯೆಯನ್ನೂ ಉಪದೇಶಿಸಿದೆನು.

ಗಜೇಂದ್ರಂ ಚೈವ ವಜ್ರಂ ಚ ದದೌ ತಸ್ಮೈ ಸುರೇಶ್ವರಃ ।
ಶ್ವೇತಚ್ಛತ್ರಂ ರತ್ನಮಾಲಾಂ ದದೌ ವಸ್ತ್ರಂ ಜಲೇಶ್ವರಃ ॥ ೪೩ ॥

ಮನೋಯಾಯಿ ರಥಂ ಸೂರ್ಯಸ್ಸನ್ನಾಹಂ ಚ ಮಹಾಚಯಂ ।
ಯಮದಂಡಂ ಯಮಶ್ಚೈವ ಸುಧಾಕುಂಭಂ ಸುಧಾನಿಧಿಃ ॥ ೪೪ ॥

ಹುತಾಶನೋ ದದೌ ಪ್ರೀತ್ಯಾ ಮಹಾಶಕ್ತಿಂ ಸ್ವಸೂನವೇ ।
ದದೌ ಸ್ವಶಸ್ತ್ರಂ ನಿರ್ಋತಿರ್ವಾಯುರ್ವಾಯವ್ಯಾಸ್ತ್ರಂ ಸಮೀರಣಃ ॥ ೪೫ ॥

ಗದಾಂ ದದೌ ಕುಬೇರಶ್ಚ ಶೂಲಮೀಶೋ ದದೌ ಮುದಾ ।
ನಾನಾಶಸ್ತ್ರಾಣ್ಯುಪಾಯಂಶ್ಚ ಸರ್ವೇ ದೇವಾ ದದುರ್ಮುದಾ ॥ ೪೬ ॥

ಕಾಮಾಸ್ತ್ರಂ ಕಾಮದೇವೋಽಥ ದದೌ ತಸ್ಮೈ ಮುದಾನ್ವಿತಃ ।
ಗದಾಂ ದದೌ ಸ್ವವಿದ್ಯಾಶ್ಚ ತಸ್ಮೈ ಚ ಪರಯಾ ಮುದಾ ॥ ೪೭ ॥

ಕ್ಷೀರೋದೋಽಮೂಲ್ಯರತ್ನಾನಿ ವಿಶಿಷ್ಟಂ ರತ್ನನೂಪುರಂ ।
ಹಿಮಾಲಯೋ ಹಿ ದಿವ್ಯಾನಿ ಭೂಷಣಾನ್ಯಂಶುಕಾನಿ ಚ ॥ ೪೮ ॥

---

೪೩-೪೪. ಇಂದ್ರನು ಕುಮಾರನಿಗೆ ಐರಾವತವನ್ನೂ, ವಜ್ರಾಯುಧವನ್ನೂ ಕೊಟ್ಟನು. ವರುಣನು ಶ್ವೇತಚ್ಛತ್ರವನ್ನೂ ರತ್ನಮಾಲಿಕೆಯನ್ನೂ, ಸೂರ್ಯನು ಮನೋವೇಗವುಳ್ಳ ತೇಜಸ್ವಿಯಾದ ರಥವನ್ನೂ, ಯಮನು ಯಮದಂಡವನ್ನೂ, ವಿಷ್ಣುವು ಅಮೃತಕಲಶವನ್ನೂ ಕೊಟ್ಟರು.

೪೫-೪೬. ಅಗ್ನಿಯು ತನ್ನ ಮಗನಾದ ಕುಮಾರನಿಗೆ ಪ್ರೀತಿಯಿಂದ ಮಹಾ ಶಕ್ತಿಯನ್ನು ಕೊಟ್ಟನು. ನಿರುರುತಿಯು ತನ್ನ ಶಸ್ತ್ರವನ್ನೂ, ವಾಯುವು ವಾಯ ವ್ಯಾಸ್ತ್ರವನ್ನೂ, ಕುಬೇರನು ಗದೆಯನ್ನೂ, ಶಿವನು ಶೂಲವನ್ನೂ ಇನ್ನೂ ಅನೇಕ ದೇವತೆಗಳು ನಾನಾಶಸ್ತ್ರಗಳನ್ನೂ ಅದರ ಉಪಾಯಗಳನ್ನೂ ಹೇಳಿಕೊಟ್ಟರು.

೪೭. ಮನ್ಮಥನು ಕುಮಾರನಿಗೆ ಕಾಮಾಸ್ತ್ರವನ್ನೂ, ಗದೆಯನ್ನೂ ತನ್ನ ವಿದ್ಯೆಯನ್ನೂ ಅತ್ಯಂತ ಪ್ರೀತಿಯಿಂದ ಹೇಳಿಕೊಟ್ಟನು.

೪೮. ಕ್ಷೀರಸಮುದ್ರವು ಕುಮಾರನಿಗೆ ಅಮೂಲ್ಯರತ್ನಗಳನ್ನೂ ರತ್ನದಿಂದ ಮಾಡಿದ ಕಾಲಂದಿಗೆಯನ್ನೂ ಕೊಟ್ಟಿತು. ಹಿಮಾಲಯವು ದಿವ್ಯವಾದ ಭೂಷಣ ಗಳನ್ನೂ, ಬಟ್ಟೆಗಳನ್ನೂ ಕೊಟ್ಟಿತು.

ಚಿತ್ರಬರ್ಹಣನಾಮಾನಂ ಸ್ವಪುತ್ರಂ ಗರುಡೋ ದದೌ ।
ಅರುಣಸ್ತಾಮ್ರಚೂಡಾಖ್ಯಂ ಬಲಿಸಂ ಚರಣಾಯುಧಂ ॥ ೪೯ ॥

ಪಾರ್ವತೀ ಸಸ್ಮಿತಾ ಹೃಷ್ಟಾ ಪರಮೈಶ್ವರ್ಯಮುತ್ತಮಂ ।
ದದೌ ತಸ್ಮೈ ಮಹಾಪ್ರೀತ್ಯಾ ಚಿರಂಜೀವಿತ್ವಮೇವ ಚ ॥ ೫೦ ॥

ಲಕ್ಷ್ಮೀಶ್ಚ ಸಂಪದಂ ದಿವ್ಯಾಂ ಮಹಾಹಾರಂ ಮನೋಹರಂ ।
ಸಾವಿತ್ರೀ ಸಿದ್ಧವಿದ್ಯಾಂ ಚ ಸಮಸ್ತಾಂ ಪ್ರದದೌ ಮುದಾ ॥ ೫೧ ॥

ಅನ್ಯಾಶ್ಚಾಪಿ ಮುನೇ ದೇವ್ಯೋ ಯಾ ಯಾಸ್ತತ್ರ ಸಮಾಗತಾಃ ।
ಸ್ವಾತ್ಮವಸ್ತು ದದುಸ್ತಸ್ಮೈ ತಥೈವ ಶಿಶುಪಾಲಿಕಾಃ ॥ ೫೨ ॥

ಮಹಾಮಹೋತ್ಸವಸ್ತತ್ರ ಬಭೂವ ಮುನಿಸತ್ತಮ ।
ಸರ್ವೇ ಪ್ರಸನ್ನತಾಂ ಯಾತಾ ವಿಶೇಷಾಚ್ಚ ಶಿವಾಶಿವೌ ॥ ೫೩ ॥

---

೪೯. ಗರುಡನು ಕುಮಾರನಿಗೆ ಚಿತ್ರಬರ್ಹಣನೆಂಬ ತನ್ನ ಮಗನನ್ನು ಅರ್ಪಿಸಿದನು. ಅರುಣನು ತಾಮ್ರಚೂಡನೆಂಬ ಹೆಸರುಳ್ಳ ಕುಕ್ಕುಟವನ್ನು ಕೊಟ್ಟನು.

೫೦. ಪಾರ್ವತಿಯು ಸಂತೋಷದಿಂದ ನಗುತ್ತಾ ತನ್ನ ಮಗನಿಗೆ ಉತ್ತಮವಾದ ಐಶ್ವರ್ಯವನ್ನು ಕೊಟ್ಟಳು. ಮಹಾಪ್ರೀತಿಯಿಂದ ಚಿರಂಜೀವಿಯಾಗಿ ಬಾಳೆಂದು ಹರಸಿದಳು.

೫೧-೫೨. ಲಕ್ಷ್ಮಿಯು ದಿವ್ಯವಾದ ಸಂಪತ್ತನ್ನೂ ಮನೋಹರವಾದ ಹಾರವನ್ನೂ, ಸಾವಿತ್ರಿಯು ಸಮಸ್ತವಾದ ಸಿದ್ಧವಿದ್ಯೆಯನ್ನೂ ಪ್ರೀತಿಯಿಂದ ಕೊಟ್ಟರು. ಎಲೈ ನಾರದನೇ, ಇನ್ನೂ ಇತರ ದೇವತಾಸ್ತ್ರೀಯರೆಲ್ಲರೂ ಮತ್ತು ಕುಮಾರನನ್ನು ಕಾಪಾಡಿದ ಕೃತ್ತಿಕೆಯರೂ ತಮತಮಗಿಷ್ಟವಾದ ವಸ್ತುಗಳನ್ನು ಕುಮಾರನಿಗೆ ಅರ್ಪಿಸಿದರು.

೫೩. ಎಲೈ ಮುನಿವರನೇ, ಅಲ್ಲಿ ದೊಡ್ಡ ಉತ್ಸವವೇ ಜರುಗಿತು. ಎಲ್ಲರೂ ಕುಮಾರನ ದರ್ಶನದಿಂದ ಸಂತೋಷಪಟ್ಟರು. ವಿಶೇಷವಾಗಿ ಪಾರ್ವತೀಪರಮೇಶ್ವರರು ಸಂತುಷ್ಟರಾದರು.

ಏತಸ್ಮಿನ್ನಂತರೇ ಕಾಲೇ ಪ್ರೋವಾಚ ಪ್ರಹಸನ್ ಮುದಾ ।
ಮುನೇ ಬ್ರಹ್ಮಾದಿಕಾನ್ ದೇವಾನ್ ರುದ್ರೋ ಭರ್ಗಃ ಪ್ರತಾಪವಾನ್ ॥

॥ ಶಿವ ಉವಾಚ ॥

ಹೇ ಹರೇ ಹೇ ವಿಧೇ ದೇವಾಸ್ಸರ್ವೇ ಶೃಣುತ ಮದ್ವಚಃ ।
ಸರ್ವಥಾಹಂ ಪ್ರಸನ್ನೋಽಸ್ಮಿ ವರಾನ್ವೃಣುತ ಇಚ್ಛಿಕಾನ್ ॥ ೫೫ ॥

॥ ಬ್ರಹ್ಮೋವಾಚ ॥

ತಚ್ಛ್ರುತ್ವಾ ವಚನಂ ಶಂಭೋರ್ಮುನೇ ವಿಷ್ಣ್ವಾದಯಸ್ಸುರಾಃ ।
ಸರ್ವೇ ಪ್ರೋಚುಃ ಪ್ರಸನ್ನಾಸ್ಯಾ ದೇವಂ ಪಶುಪತಿಂ ಪ್ರಭುಂ ॥ ೫೬ ॥

ಕುಮಾರೇಣ ಹತೋ ಹ್ಯೇಷ ತಾರಕೋ ಭವಿತಾ ಪ್ರಭೋ ।
ತದರ್ಥಮೇವ ಸಂಜಾತಮಿದಂ ಚರಿತಮುತ್ತಮಂ ॥ ೫೭ ॥

ತಸ್ಮಾದದ್ಯೈವ ಯಾಸ್ಯಾಮಸ್ತಾರಕಂ ಹಂತುಮುದ್ಯತಾಃ ।
ಆಜ್ಞಾಂ ದೇಹಿ ಕುಮಾರಾಯ ಸ ತಂ ಹಂತುಂ ಸುಖಾಯ ನಃ ॥ ೫೮ ॥

---

೫೪. ಈ ಸಮಯದಲ್ಲಿ ಪ್ರತಾಪಶಾಲಿಯಾದ ರುದ್ರನು ಸಂತೋಷದಿಂದ ಬ್ರಹ್ಮಾದಿದೇವತೆಗಳಿಗಿಂತೆಂದನು.

೫೫. ಶಿವನು ದೇವತೆಗಳನ್ನು ಕುರಿತು ಹೇಳಿದನು :—ಎಲೈ ವಿಷ್ಣುವೇ, ಬ್ರಹ್ಮನೇ, ದೇವತೆಗಳಿರಾ, ನನ್ನ ಮಾತನ್ನು ಕೇಳಿರಿ. ನಾನು ಪ್ರಸನ್ನನಾಗಿರುವೆನು. ನಿಮಗಿಷ್ಟವಾದ ವರಗಳನ್ನು ಕೇಳಿಕೊಳ್ಳಿರಿ ಎಂದನು.

೫೬-೫೮. ಬ್ರಹ್ಮನು ಹೇಳಿದನು:—ಎಲೈ ನಾರದನೇ, ಶಂಭುವಾಡಿದ ಮಾತನ್ನು ಕೇಳಿ ವಿಷ್ಣುವೇ ಮೊದಲಾದ ದೇವತೆಗಳೆಲ್ಲರೂ ಸಂತೋಷದಿಂದ ಆ ಪಶುಪತಿಯಾದ ಶಂಕರನನ್ನು ಕುರಿತು, ಎಲೈ ಪ್ರಭುವೇ, ಈ ಕುಮಾರನಿಂದ ತಾರಕಾಸುರನ ವಧೆಯಾಗಬೇಕಾಗಿರುವುದು. ಅದಕ್ಕೋಸ್ಕರವಾಗಿಯೇ ಈ ಚರಿತ್ರೆಯು ಸಂಭವಿಸಿರುವುದು. ಆದುದರಿಂದ ನೀನು ಕುಮಾರನಿಗೆ ಅನುಜ್ಞೆಯನ್ನು ನೀಡು. ನಾವು ಇಂದೇ ಹೊರಡುವೆವು. ಕುಮಾರನು ತಾರಕನನ್ನು ಕೊಂದು ನಮಗೆ ಸುಖವನ್ನುಂಟುಮಾಡಲಿ ಎಂದು ಹೇಳಿದರು.

॥ ಬ್ರಹ್ಮೋವಾಚ ॥

ತಥೇತಿ ಮುಕ್ತ್ವಾ ಸ ವಿಭುರ್ದತ್ತವಾಂಸ್ತನಯಂ ತದಾ ।
ದೇವೇಭ್ಯಸ್ತಾರಕಂ ಹಂತುಂ ಕೃಪಯಾ ಪರಿಭಾವಿತಃ ॥ ೫೯ ॥

ಶಿವಾಜ್ಞಯಾ ಸುರಾಸ್ಸರ್ವೇ ಬ್ರಹ್ಮವಿಷ್ಣುಮುಖಾಸ್ತದಾ ।
ಪುರಸ್ಕೃತ್ಯ ಗುಹಂ ಸದ್ಯೋ ನಿರ್ಜಗ್ಮುರ್ಮಿಲಿತಾ ಗಿರೇಃ ॥ ೬೦ ॥

ಬಹಿರ್ನಿಸ್ಸೃತ್ಯ ಕೈಲಾಸಾತ್ತ್ವಷ್ಟಾ ಶಾಸನತೋ ಹರೇಃ ।
ವಿರೇಚ ನಗರಂ ರಮ್ಯಮದ್ಭುತಂ ನಿಕಟೇ ಗಿರೇಃ ॥ ೬೧ ॥

ತತ್ರ ರಮ್ಯಂ ಗೃಹಂ ದಿವ್ಯಮದ್ಭುತಂ ಪರಮೋಜ್ಜ್ವಲಂ ।
ಗುಹಾರ್ಥಂ ನಿರ್ಮಮೇ ತ್ವಷ್ಟಾ ತತ್ರ ಸಿಂಹಾಸನಂ ವರಂ ॥ ೬೨ ॥

ತದಾ ಹರಿಸ್ಸುಧೀರ್ಭಕ್ತ್ಯಾ ಕಾರಯಾಮಾಸ ಮಂಗಲಂ ।
ಕಾರ್ತಿಕಸ್ಯಾಭಿಷೇಕಂ ಹಿ ಸರ್ವತೀರ್ಥಜಲೈಸ್ಸುರೈಃ ॥ ೬೩ ॥

---

೫೯. ಬ್ರಹ್ಮನು ಹೇಳಿದನು :—ಅನಂತರ ಶಿವನು ಹಾಗೆಯೇ ಆಗಲೆಂದು ಹೇಳಿ ತಾರಕನನ್ನು ಸಂಹರಿಸಲೋಸುಗ ತನ್ನ ಮಗನನ್ನು ದುಃಖಿಗಳಾದ ದೇವತೆಗಳೊಡನೆ ಕಳುಹಿಸಿಕೊಟ್ಟನು.

೬೦-೬೧. ಶಿವನ ಆಜ್ಞೆಯಂತೆ ದೇವತೆಗಳೆಲ್ಲರೂ ಗುಹನನ್ನು ಮುಂದಿಟ್ಟುಕೊಂಡು ಆ ಕ್ಷಣವೇ ಕೈಲಾಸಪರ್ವತದಿಂದ ಹೊರಟರು. ತ್ವಷ್ಟಾ ಎಂಬ ದೇವಶಿಲ್ಪಿಯು ಶಿವನ ಅಪ್ಪಣೆಯಿಂದ ಆ ಪರ್ವತದ ಸಮೀಪದಲ್ಲಿ ಒಂದು ಮನೋಹರವಾದ ನಗರವನ್ನು ನಿರ್ಮಿಸಿದನು.

೬೨. ಆ ನಗರದಲ್ಲಿ ಪ್ರಕಾಶಮಾನವಾಗಿಯೂ ಅದ್ಭುತವಾಗಿಯೂ ಮನೋಹರವಾಗಿಯೂ ಇರುವ ಒಂದು ಮನೆಯನ್ನು ಗುಹನ ವಾಸಕ್ಕೋಸ್ಕರ ನಿರ್ಮಿಸಿದನು. ಆ ಮನೆಯಲ್ಲಿ ಒಂದು ಶ್ರೇಷ್ಠವಾದ ಸಿಂಹಾಸನವನ್ನು ನಿರ್ಮಿಸಿದನು.

೬೩. ಅನಂತರ ಹರಿಯು ಭಕ್ತಿಯಿಂದ ಮಂಗಲಕಾರ್ಯವನ್ನು ಮಾಡಿಸಿ ಸರ್ವತೀರ್ಥೋದಕಗಳಿಂದ ಅವನಿಗೆ ಅಭಿಷೇಕವನ್ನು ಮಾಡಿಸಿದನು. ಬಳಿಕ ವಸ್ತ್ರಾಭರಣಾದಿಗಳಿಂದ.

ಸರ್ವಥಾ ಸಮಲಂಕೃತ್ಯ ವಾಸಯಾಮಾಸ ಸಂಗ್ರಹಂ ।
ಕಾರ್ತಿಕಸ್ಯ ವಿಧಿಂ ಪ್ರೀತ್ಯಾ ಕಾರಯಾಮಾಸ ಚೋತ್ಸವಂ ॥ ೬೪ ॥

ಬ್ರಹ್ಮಾಂಡಾಧಿಪತಿತ್ವಂ ಹಿ ದದೌ ತಸ್ಮೈ ಮುದಾ ಹರಿಃ ।
ಚಕಾರ ತಿಲಕಂ ತಸ್ಯ ಸಮಾನರ್ಚ ಸುರೈಸ್ಸಹ ॥ ೬೫ ॥

ಪ್ರಣಮ್ಯ ಕಾರ್ತಿಕಂ ಪ್ರೀತ್ಯಾ ಸರ್ವದೇವರ್ಷಿಭಿಸ್ಸಹ ।
ತುಷ್ಟಾವ ವಿವಿಧಸ್ತೋತ್ರೈಃ ಶಿವರೂಪಂ ಸನಾತನಂ ॥ ೬೬ ॥

ವರಸಿಂಹಾಸನಸ್ಥೋ ಹಿ ಶುಶುಭೇಽತೀವ ಕಾರ್ತಿಕಃ ।
ಸ್ವಾಮಿಭಾವಂ ಸಮಾಪನ್ನೋ ಬ್ರಹ್ಮಾಂಡಸ್ಯಾಪಿ ಪಾಲಕಃ ॥ ೬೭ ॥

ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಕುಮಾರಖಂಡೇ
ಕುಮಾರಾಭಿಷೇಕವರ್ಣನಂ ನಾಮ ಪಂಚಮೋಽಧ್ಯಾಯಃ

---

೬೪-೬೫ ಆ ಕುಮಾರನನ್ನು ಅಲಂಕರಿಸಿ ಆ ಪೀಠದಲ್ಲಿ ಕುಳ್ಳಿರಿಸಿ, ಮಹಾ ವಿಜೃಂಭಣೆಯಿಂದ ಉತ್ಸವಮಾಡಿಸಿ, ಬ್ರಹ್ಮಾಂಡದ ಆಧಿಪತ್ಯವನ್ನು ಕೊಟ್ಟನು. ದೇವತೆಗಳೊಡನೆ ಗುಹನನ್ನು ಪೂಜಿಸಿ ಅವನ ಹಣೆಗೆ ತಿಲಕವನ್ನಿಟ್ಟನು.

೬೬. ವಿಷ್ಣುವೂ ದೇವತೆಗಳೂ ಋಷಿಗಳೂ ಎಲ್ಲರೂ ಸೇರಿ ಅತ್ಯಾದರದಿಂದ ವಿವಿಧವಾಗಿ ಸ್ತೋತ್ರಮಾಡುತ್ತಾ ಶಿವರೂಪನೂ ಸನಾತನನೂ ಆದ ಗುಹನನ್ನು ನಮಸ್ಕರಿಸಿದರು.

೬೭. ಆ ಕಾರ್ತಿಕೇಯನೂ ಸಹ ಶ್ರೇಷ್ಠವಾದ ಸಿಂಹಾಸನದಲ್ಲಿ ಕುಳಿತು, ಬ್ರಹ್ಮಾಂಡಕ್ಕೂ ಸ್ವಾಮಿಯಾಗಿ ಅದನ್ನು ಪಾಲಿಸುತ್ತಾ ಅತ್ಯಂತವಾಗಿ ಪ್ರಕಾಶಿಸಿದನು.

ಇಲ್ಲಿಗೆ ಶ್ರೀಶಿವಮಹಾಪುರಾಣದಲ್ಲಿನ ರುದ್ರಸಂಹಿತೆಯ ಕುಮಾರಖಂಡದಲ್ಲಿ
ಕುಮಾರಾಭಿಷೇಕವರ್ಣನವೆಂಬ ಐದನೆಯ ಅಧ್ಯಾಯವು
ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಕುಮಾರಖಂಡೇ

## ಷಷ್ಠೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಅಥ ತತ್ರ ಸ ಗಾಂಗೇಯೋ ದರ್ಶಯಾಮಾಸ ಸೂತಿಕಾಂ ।
ತಾಮೇವ ಶೃಣು ಸುಪ್ರೀತ್ಯಾ ನಾರದ ತ್ವಂ ಸ್ವಭಕ್ತಿದಾಂ ॥ ೧ ॥

ದ್ವಿಜ ಏಕೋ ನಾರದಾಖ್ಯ ಆಜಗಾಮ ತದೈವ ಹಿ ।
ತತ್ರಾಧ್ವರಕರಃ ಶ್ರೀಮಾನ್ ಶರಣಾರ್ಥಂ ಗುಹಸ್ಯ ವೈ ॥ ೨ ॥

ಸ ವಿಪ್ರಃ ಪ್ರಾಪ್ಯ ನಿಕಟಂ ಕಾರ್ತಿಕಸ್ಯ ಪ್ರಸನ್ನಧೀಃ ।
ಸ್ವಾಭಿಪ್ರಾಯಂ ಸಮಾಚಖ್ಯೌ ಸುಪ್ರಣಮ್ಯ ಶುಭೈಃ ಸ್ತವೈಃ ॥ ೩ ॥

---

### ಆರನೆಯ ಅಧ್ಯಾಯವು.

೧. ಬ್ರಹ್ಮನು ಹೇಳಿದನು :—ಎಲೈ ನಾರದನೇ, ಅನಂತರ ಆ ಗುಹನು ಒಬ್ಬಾನೊಬ್ಬ ಬ್ರಾಹ್ಮಣನು ಮಾಡುತ್ತಿದ್ದ ಯಜ್ಞದಲ್ಲಿ ಯಜ್ಞಪಶುವು ತಪ್ಪಿಸಿಕೊಂಡು ಹೋಗಿರುವುದನ್ನು ತರಿಸಿ ಯಜ್ಞಪೂರ್ತಿಮಾಡಿದ ಅದ್ಭುತವಾದ ವಿಷಯವನ್ನು ಹೇಳುವೆನು. ಈ ಉಪಾಖ್ಯಾನವು ಪರಮಭಕ್ತಿಪ್ರದವಾದುದು. ಆದುದರಿಂದ ಇದನ್ನು ಪ್ರೀತಿಯಿಂದ ಕೇಳು.

೨-೩. ಹೀಗಿರಲು ಒಂದು ಸಮಯದಲ್ಲಿ ಯಜ್ಞಮಾಡುತ್ತಿರುವ ನಾರದನೆಂಬ ಒಬ್ಬ ಬ್ರಾಹ್ಮಣನು ಗುಹನ ಹತ್ತಿರಕ್ಕೆ ಬಂದು ಭಕ್ತಿಯಿಂದ ಅವನಿಗೆ ನಮ

॥ ವಿಪ್ರ ಉವಾಚ ॥

ಶೃಣು ಸ್ವಾಮಿನ್ವಚೋ ಮೇಽದ್ಯ ಕಷ್ಟಂ ಮೇ ವಿನಿವಾರಯ ।
ಸರ್ವಬ್ರಹ್ಮಾಂಡನಾಥಸ್ತ್ವಮತಸ್ತೇ ಶರಣಂ ಗತಃ ॥ ೪ ॥

ಅಜಮೇಧಾಧ್ವರಂ ಕರ್ತುಮಾರಂಭಂ ಕೃತವಾನಹಂ ।
ಸೋಽಜೋ ಗತೋ ಗೃಹಾನ್ಮೇ ಹಿ ತ್ರೋಟಯಿತ್ವಾ ಸ್ವಬಂಧನಂ ॥ ೫ ॥

ನ ಜಾನೇ ಸ ಗತಃ ಕುತ್ರಾನ್ವೇಷಣಂ ತತ್ಕೃತಂ ಬಹು ।
ನ ಪ್ರಾಪ್ತೋಽತಸ್ಸ ಬಲವಾನ್ ಭಂಗೋ ಭವತಿ ಮೇ ಕ್ರತೋಃ ॥ ೬ ॥

ತ್ವಯಿ ನಾಥೇ ಸತಿ ವಿಭೋ ಯಜ್ಞಭಂಗಃ ಕಥಂ ಭವೇತ್ ।
ವಿಚಾರ್ಯೈವಾಖಿಲೇಶಾನ ಕಾಮಂ ಪೂರ್ಣಂ ಕುರುಷ್ವ ಮೇ ॥ ೭ ॥

ತ್ವಾಂ ವಿಹಾಯ ಶರಣ್ಯಂ ಕಂ ಯಾಯಾಂ ಶಿವಸುತ ಪ್ರಭೋ ।
ಸರ್ವಬ್ರಹ್ಮಾಂಡನಾಥಂ ಹಿ ಸರ್ವಾಮರಸುಸೇವಿತಂ ॥ ೮ ॥

---

ಸ್ಮರಿಸಿ ಅನೇಕವಿಧವಾಗಿ ಸ್ತೋತ್ರಮಾಡಿ ತನಗೆ ಒದಗಿರುವ ಕಷ್ಟವನ್ನು ಆ ಕಾರ್ತಿಕೇಯನಲ್ಲಿ ಹೇಳಿಕೊಂಡು ತನ್ನನ್ನು ಕಾಪಾಡಬೇಕೆಂದು ಬೇಡಿಕೊಂಡನು.

೪-೭. ವಿಪ್ರನು ಹೇಳಿದನು:—ಎಲೈ ಸ್ವಾಮಿಯೇ, ನನ್ನ ಕಷ್ಟವನ್ನು ನಿವಾರಿಸು. ನೀನು ಸರ್ವಬ್ರಹ್ಮಾಂಡಗಳಿಗೂ ಪ್ರಭುವು. ಆದುದರಿಂದ ನಿನ್ನನ್ನು ಶರಣುಹೊಂದಿರುವೆನು. ನಾನೊಂದು ಅಜಮೇಧಯಜ್ಞವನ್ನು ಮಾಡಬೇಕೆಂದು ಪ್ರಾರಂಭಿಸಿದೆನು. ಯಜ್ಞಕ್ಕೆ ಉಪಯೋಗವಾದ ಅಜವು (ಯಜ್ಞಪಶುವಾದ ಆಡು) ಹಗ್ಗವನ್ನು ಕಿತ್ತುಕೊಂಡು ನನ್ನ ಮನೆಯಿಂದ ಹೊರಟುಹೋಗಿರುವುದು. ಅದೆಲ್ಲಿ ಹೋಗಿರುವುದೆಂಬುದೇ ನನಗೆ ತಿಳಿಯದು. ಅನೇಕಕಡೆ ಹುಡುಕಿಯಾಯಿತು. ಆದರೂ ಸಿಕ್ಕಿಲಿಲ್ಲ. ನನ್ನ ಯಜ್ಞವು ನಿಲ್ಲುವ ಸಮಯ ಬಂದಿರುವುದು. ನೀನು ನಮಗೆಲ್ಲಾ ಅಧಿಪತಿಯಾಗಿರುವಾಗ ಯಜ್ಞವು ಹೇಗೆತಾನೇ ನಿಲ್ಲುವುದು ? ಆದುದರಿಂದ ಎಲೈ ಸ್ವಾಮಿಯೇ, ನನ್ನ ವಿಷಯವೆಲ್ಲವನ್ನೂ ತಿಳಿಸಿರುವೆನು. ನನ್ನ ಯಜ್ಞವನ್ನು ಪೂರ್ಣಗೊಳಿಸಿ ನನ್ನ ಅಭೀಷ್ಟವನ್ನು ನೆರವೇರಿಸು.

೮-೧೦. ಎಲೈ ಶಿವಸುತನೇ, ನಿನ್ನನ್ನು ಬಿಟ್ಟು ಯಾರನ್ನು ತಾನೇ ಶರಣು ಹೊಂದಲಿ ? ನೀನು ಸರ್ವಬ್ರಹ್ಮಾಂಡನಾಥನು. ಎಲ್ಲಾ ದೇವತೆಗಳೂ ನಿನ್ನನ್ನು ಸೇವಿಸುವರು. ಕರುಣಾಸಾಗರನು. ದೀನಬಂಧುವು. ಭಕ್ತರಲ್ಲಿ ವಾತ್ಸಲ್ಯವನ್ನಿ

ದೀನಬಂಧುರ್ದಯಾಸಿಂದುಸ್ಸುಸೇವ್ಯೋ ಭಕ್ತವತ್ಸಲಃ ।
ಹರಿಬ್ರಹ್ಮಾದಿದೇವೈಶ್ಚ ಸುಸ್ತುತಃ ಪರಮೇಶ್ವರಃ ॥ ೯ ॥

ಪಾರ್ವತೀನಂದನಃ ಸ್ಕಂದಃ ಪರಮೇಕಃ ಪರಂತಪಃ ।
ಪರಮಾತ್ಮಾತ್ಮದಃ ಸ್ವಾಮೀ ಸತಾಂ ಚ ಶರಣಾರ್ಥಿನಾಂ ॥ ೧೦ ॥

ದೀನಾನಾಥ ಮಹೇಶ ಶಂಕರಸುತ ತ್ರೈಲೋಕ್ಯನಾಥ ಪ್ರಭೋ
ಮಾಯಾಧೀಶ ಸಮಾಗತೋಽಸ್ಮಿ ಶರಣಂ ಮಾಂ ಪಾಹಿ ವಿಪ್ರಪ್ರಿಯ ।
ತ್ವಂ ಸರ್ವಪ್ರಭುರಾನತಾಖಿಲವಿದ ಬ್ರಹ್ಮಾದಿದೇವೈಃ ಸ್ತುತ
ತ್ವಂ ಮಾಯಾಕೃತಿರಾತ್ಮಭಕ್ತಸುಖದೋ ರಕ್ಷಾಪರೋ ಮಾಯಿಕಃ ॥

ಭಕ್ತಪ್ರಾಣಗುಣಾಕರಸ್ತ್ರಿಗುಣತೋ ಭಿನ್ನೋಽಸಿ ಶಂಭುಪ್ರಿಯಃ
ಶಂಭುಃ ಶಂಭುಸುತಃ ಪ್ರಸನ್ನಸುಖದಸ್ಸಚಿತ್ಸ್ವರೂಪೋ ಮಹಾನ್ ॥
ಸರ್ವಜ್ಞಸ್ತ್ರಿಪುರಘ್ನಶಂಕರಸುತಃ ಸತ್ಪ್ರೇಮವಶ್ಯಸ್ಸದಾ ।
ಷಡ್ವಕ್ತ್ರಃ ಪ್ರಿಯಸಾಧುರಾನತಪ್ರಿಯಸ್ಸರ್ವೇಶ್ವರಶ್ಶಂಕರಃ ॥
ಸಾಧುದ್ರೋಹಕರಘ್ನ ಶಂಕರಸುತೋ ಬ್ರಹ್ಮಾಂಡನಾಥಃ ಪ್ರಭುಃ ।
ಸರ್ವೇಷಾಮಮರಾದಿಸೇವಿತಪದೋ ಮಾಂ ಪಾಹಿ ಸೇವಾಪ್ರಿಯ ॥ ೧೨ ॥

---

ಟ್ಟಿರುವವನು. ಬ್ರಹ್ಮವಿಷ್ಣುಮಹೇಶ್ವರರೇ ಮೊದಲಾದ ದೇವತೆಗಳು ನಿನ್ನನ್ನು ಸ್ತೋತ್ರಮಾಡುವರು. ಪಾರ್ವತೀನಂದನನು. ಶ್ರೇಷ್ಠನು. ಶತ್ರುಸಂಹಾರಕನು. ನೀನು ಪರಮಾತ್ಮನು. ಶರಣುಹೊಂದಿದವರಿಗೆ ಆತ್ಮಜ್ಞಾನವನ್ನು ಕೊಡುವವನು.

೧೧. ಎಲೈ ಶಿವಸುತನೇ, ನೀನು ದೀನರಾದವರನ್ನು ರಕ್ಷಿಸುವವನು. ತ್ರೈಲೋಕ್ಯಕ್ಕೂ ಪ್ರಭುವು. ಮಹೇಶನು. ನೀನು ಮಾಯೆಗೆ ಅಧಿಪತಿಯು. ಬ್ರಾಹ್ಮಣಪ್ರಿಯನಾದ ನಿನ್ನನ್ನು ಶರಣುಹೊಂದಿರುವೆನು. ನನ್ನನ್ನು ಕಾಪಾಡು. ನೀನು ಸರ್ವಪ್ರಭುವು. ಸರ್ವಜ್ಞನು. ಬ್ರಹ್ಮಾದಿದೇವತೆಗಳೂ ನಿನ್ನನ್ನು ಸ್ತೋತ್ರ ಮಾಡುವರು. ನೀನು ಮಾಯಾಕೃತಿಯು. ನಿನ್ನ ಭಕ್ತರಿಗೆ ಸುಖವನ್ನುಂಟು ಮಾಡುವವನು. ಮಾಯಾಧೀಶನಾದ ನೀನು ನನ್ನನ್ನು ಕಾಪಾಡು.

೧೨. ಎಲೈ ಕಾರ್ತಿಕೇಯನೇ, ನೀನು ಭಕ್ತರಿಗೆ ಪ್ರಾಣದಾಯಕನು. ಗುಣನಿಧಿಯು. ಸತ್ವರಜಸ್ಸುತಮಸ್ಸು ಎಂಬ ಗುಣತ್ರಯಗಳಿಗೆ ಸಿಕ್ಕದವನು. ಶಂಭುವಿಗೆ

ವೈರಿಭಯಂಕರ ಶಂಕರಜನಶರಣಸ್ಯ
ವಂದೇತವ ಪದಪದ್ಮಂ ಸುಖಕರಣಸ್ಯ ।
ವಿಜ್ಞಪ್ತಿಂ ಮಮ ಕರ್ಣೇ ಸ್ಕಂಧ ನಿಧೇಹಿ
ನಿಜಭಕ್ತಿಂ ಜನಚೇತಸಿ ಸದಾ ವಿಧೇಹಿ ॥ ೧೩ ॥

ಕರೋತಿ ಕಿಂ ತಸ್ಯ ಬಲೀ ವಿಪಕ್ಷೋ
ದಕ್ಷೋಽಪಿ ಪಕ್ಷೋಭಯಪಾರ್ಶ್ವಗುಪ್ತಃ ।
ಕಿಂ ತಕ್ಷಕೋಽಪ್ಯಾಮಿಷಭಕ್ಷಕೋ ವಾ
ತ್ವಂ ರಕ್ಷಕೋ ಯಸ್ಯ ಸದಕ್ಷಮಾನಃ ॥ ೧೪ ॥

---

ಪ್ರೀತಿಪಾತ್ರನು. ಭಕ್ತರಿಗೆ ಪ್ರಸನ್ನನಾಗಿ ಸುಖವನ್ನು ಕೊಡುತ್ತಿರುವೆ. ನೀನು ಸತ್ಸ್ವರೂಪನು, ಚಿತ್ಸ್ವರೂಪನು, ಸರ್ವಜ್ಞನು, ತ್ರಿಪುರಾಸುರನನ್ನು ಕೊಂದವನು, ಶಿವಸುತನು, ಸದ್ಭಕ್ತಿಗೆ ಒಲಿಯುವವನು, ಆರುಮುಖವುಳ್ಳವನು, ಭಕ್ತರನ್ನು ಪ್ರೀತಿಸುವವನು, ನಮಸ್ಕರಿಸಿದವರಿಗೆ ಒಲಿಯುವವನು, ಸರ್ವೇಶ್ವರನು, ಶುಭಕರನು, ಸತ್ಪುರುಷರಿಗೆ ದ್ರೋಹಮಾಡಿದವರನ್ನು ನಾಶಮಾಡುವವನು, ಬ್ರಹ್ಮಾಂಡಕ್ಕೂ ಒಡೆಯನು, ದೇವತೆಗಳೆಲ್ಲರೂ ನಿನ್ನನ್ನು ಸೇವಿಸುವರು. ಎಲೈ ಪ್ರಭುವೇ, ಸೇವಪ್ರಿಯನಾದ ನೀನು ನನ್ನನ್ನು ಕಾಪಾಡಬೇಕು.

೧೩. ಎಲೈ ಸ್ಕಂದನೇ, ವೈರಿಭಯಂಕರನಾದ ನಿನಗೆ ನಮಸ್ಕಾರವು. ಶುಭಾಪೇಕ್ಷಿಗಳಾದ ಜನರನ್ನು ರಕ್ಷಿಸುವವನು ನೀನು. ಸುಖಕ್ಕೆ ಕಾರಣವಾದ ನಿನ್ನ ಪಾದಕಮಲವನ್ನು ನಮಸ್ಕರಿಸುವೆನು. ಎಲೈ ಸ್ಕಂದನೇ, ನನ್ನ ವಿಜ್ಞಾಪನೆಯನ್ನು ಲಾಲಿಸು. ಜನಗಳಿಗೆ ನಿನ್ನಲ್ಲಿ ಭಕ್ತಿಯುಂಟಾಗುವಂತೆ ಮಾಡು.

೧೪. ನೀನು ನಮಗೆಲ್ಲಾ ರಕ್ಷಕನಾಗಿರಲು ಶತ್ರುಪಕ್ಷದವನು ಬಲಿಷ್ಠನಾಗಲಿ, ಅಥವಾ ದಕ್ಷನಾಗಿರಲಿ, ಎರಡುಪಕ್ಷದವರ ಗುಟ್ಟನ್ನು ತಿಳಿದಿರುವವನಾಗಲಿ, ಏನುತಾನೇ ಮಾಡಿಯಾನು ? ದಕ್ಷನಾದ ನೀನು ನಮಗೆ ರಕ್ಷಕನಾಗಿರುವಾಗ ಶತ್ರುಪಕ್ಷದವನು ತಕ್ಷಕನಾಗಿರಲಿ, ವಿಷಭಕ್ಷಕನಾಗಿರಲಿ ಆತನು ಏನು ಮಾಡಿಯಾನು ?

ವಿಬುಧಗುರುರಪಿ ತ್ವಾಂ ಸ್ತೋತುಮೀಶೋ ನ ಹಿ ಸ್ಯಾತ್
ಕಥಯ ಕಥಮಹಂ ಸ್ಯಾಂ ಮಂದಬುದ್ಧಿರ್ವರಾರ್ಚ್ಯಃ ।
ಶುಚಿರಶುಚಿರನಾರ್ಯೋ ಯಾದೃಶಸ್ತಾದೃಶೋ ವಾ
ಪದಕಮಲಪರಾಗಂ ಸ್ಕಂದ ತೇ ಪ್ರಾರ್ಥಯಾಮಿ ॥ ೧೫ ॥

ಹೇ ಸರ್ವೇಶ್ವರ ಭಕ್ತವತ್ಸಲ ಕೃಪಾಸಿಂಧೋ ತ್ವದೀಯೋಽಸ್ಮ್ಯಹಂ
ಭೃತ್ಯಸ್ಸ್ವಸ್ಯ ನ ಸೇವಕಸ್ಯ ಗಣಪಸ್ಯಾಗಶ್ಶತಂ ಸತ್ಪ್ರಭೋ ॥
ಭಕ್ತಿಂ ಕ್ವಾಪಿ ಕೃತಾಂ ಮನಾಗಪಿ ವಿಭೋ ಜಾನಾಸಿ ಭೃತ್ಯಾರ್ತಿಹಾ
ತ್ವತ್ತೋ ನಾಸ್ತ್ಯಪರೋಽವಿತಾ ನ ಭಗವನ್ ಮತ್ತೋ ನರಃ ಪಾಮರಃ ॥

ಕಲ್ಯಾಣಕರ್ತಾ ಕಿಲ ಕಲ್ಮಷಘ್ನಃ
ಕುಬೇರಬಂಧುಃ ಕರುಣಾರ್ದ್ರಚಿತ್ತಃ ।
ತ್ರಿಷಟ್ಕನೇತ್ರೋ ರಸವಕ್ತ್ರಶೋಭೀ
ಯಜ್ಞಂ ಪ್ರಪೂರ್ಣಂ ಕುರು ಮೇ ಗುಹ ತ್ವಂ ॥ ೧೭ ॥

---

೧೫. ಸರ್ವಜ್ಞನಾದ ಬೃಹಸ್ಪತಿಯೂ ನಿನ್ನನ್ನು ಸ್ತೋತ್ರಮಾಡಲು ಅಸಮರ್ಥನಾಗಿರುವಲ್ಲಿ ಮಂದಬುದ್ಧಿಯಾದ ನಾನು ನಿನ್ನನ್ನು ಸ್ತೋತ್ರಮಾಡಲು ಸಮರ್ಥನೆ? ಆಥವಾ ಎಲೈ ಸ್ಕಂದನೇ, ನಾನು ಶುಚಿಯಾಗಿರಲೀ ಅಶುಚಿಯಾಗಿರಲೀ ಎಂಥವನೇ ಆಗಿರಲಿ ನಿನ್ನ ಚರಣಕಮಲದ ಧೂಳಿಯನ್ನು ಪ್ರಾರ್ಥಿಸುವೆನು.

೧೬. ಎಲೈ ಸರ್ವೇಶ್ವರನೇ, ನೀನು ಭಕ್ತವತ್ಸಲನು, ಕರುಣಾನಿಧಿಯು, ನಾನು ನಿನ್ನ ಭೃತ್ಯನು. ಎಲೈ ಸತ್ಪ್ರಭುವೇ, ಎಲೈ ವ್ಯಾಪಕನೇ, ನಾನು ಸ್ವಲ್ಪವಾದರೂ ನಿನ್ನಲ್ಲಿ ಭಕ್ತಿಯನ್ನಿಟ್ಟಿಲ್ಲ. ನೀನು ಭೃತ್ಯರ ತೊಂದರೆಯನ್ನು ನಾಶಮಾಡತಕ್ಕವನು. ನಿನ್ನನ್ನು ಬಿಟ್ಟರೆ ಭಕ್ತರಕ್ಷಕನಾದವನು ಮತ್ತೊಬ್ಬನಿಲ್ಲ. ನನ್ನಂತಹ ಪಾಮರನಾದ ಮನುಜನೂ ಮತ್ತೊಬ್ಬನಿಲ್ಲ.

೧೭. ನೀನು ಶುಭಕರನಲ್ಲವೇ ? ಪಾಪಪರಿಹಾರಕನಾದ ನೀನು ಕುಬೇರಬಂಧುವು, ಕರುಣಾರ್ದ್ರಚಿತ್ತನು. ಆರು ಮುಖಗಳಿಂದಲೂ, ಹನ್ನೆರಡು ಕಣ್ಣುಗಳಿಂದಲೂ ಶೋಭಿಸುತ್ತಿರುವೆ. ನೀನು ನನ್ನ ಯಜ್ಞವನ್ನು ಪೂರೈಸುವಂತೆ ಕೃಪೆ ಮಾಡಬೇಕು.

ರಕ್ಷಕಸ್ತ್ವಂ ತ್ರಿಲೋಕಸ್ಯ ಶರಣಾಗತವತ್ಸಲಃ ।
ಯಜ್ಞಕರ್ತಾ ಯಜ್ಞಭರ್ತಾ ಹರಸೇ ವಿಘ್ನಕಾರಿಣಾಂ ॥ ೧೮ ॥

ವಿಘ್ನವಾರಣ ಸಾಧೂನಾಂ ಸ್ವರ್ಗಕಾರಣ ಸರ್ವತಃ ।
ಪೂರ್ಣಂ ಕುರು ಮಹೇಶಾನುಸುತ ಯಜ್ಞಂ ನಮೋಽಸ್ತು ತೇ ॥ ೧೯ ॥

ಸರ್ವತ್ರಾತಾ ಸ್ಕಂದ ಹಿ ತ್ವಂ ಸರ್ವಜ್ಞಾತಾ ತ್ವಮೇವ ಹಿ ।
ಸರ್ವೇಶ್ವರಸ್ತ್ವಮೀಶಾನೋ ನಿವೇಶಸಕಲಾವನಃ ॥ ೨೦ ॥

ಸಂಗೀತಜ್ಞಸ್ತ್ವಮೇವಾಸಿ ವೇದವಿಜ್ಞಃ ಪರಃ ಪ್ರಭುಃ ।
ಸರ್ವಸ್ಥಾತಾ ವಿಧಾತಾ ತ್ವಂ ದೇವದೇವಸ್ಸತಾಂ ಗತಿಃ ॥ ೨೧ ॥

ಭವಾನೀನಂದನಶ್ಶಂಭುತನಯೋ ವಯುನಃ ಸ್ವರಾಟ್ ।
ಧ್ಯಾತಾ ಧ್ಯೇಯಃ ಪಿತೄಣಾಂ ಹಿ ಪಿತಾ ಯೋನಿಃ ಸದಾತ್ಮನಾಂ ॥ ೨೨ ॥

---

೧೮-೧೯. ಎಲೈ ಸ್ವಾಮಿಯೇ, ನೀನು ತ್ರಿಲೋಕರಕ್ಷಕನು. ಶರಣಾಗತ ವತ್ಸಲನು. ಯಜ್ಞವನ್ನು ಮಾಡುವವನೂ ಯಜ್ಞಕ್ಕೆ ಅಧಿಪತಿಯೂ ನೀನೇ. ವಿಘ್ನವನ್ನು ನಾಶಮಾಡಿ ಸತ್ಪುರುಷರಿಗೆ ಸ್ವರ್ಗವನ್ನುಂಟುಮಾಡುವವನೂ ನೀನೇ. ಎಲೈ ಶಿವಸುತನೇ, ಈಗ ನನ್ನ ಯಜ್ಞವನ್ನು ಪೂರ್ಣಮಾಡು.

೨೦-೨೧. ಸರ್ವರಕ್ಷಕನೂ, ಸರ್ವಜ್ಞನೂ, ಸರ್ವೇಶ್ವರನೂ ನೀನೆ ಆಗಿರುವೆ. ಸಂಗೀತಜ್ಞಾನಿಯೂ, ವೇದವನ್ನು ತಿಳಿದವನೂ ನೀನೇ. ನೀನು ಶ್ರೇಷ್ಠನಾದ ಪ್ರಭುವು. ಸರ್ವಾಧಿಷ್ಠಾತೃವೂ ಸೃಷ್ಟಿಕರ್ತನೂ ನೀನೇ. ದೇವದೇವೇಶ್ವರನೂ ಸತ್ಪುರುಷರಿಗೆ ಸದ್ಗತಿದಾಯಕನೂ ನೀನೇ ಆಗಿರುವೆ.

೨೨ ನೀನು ಪಾರ್ವತಿಯ ಪುತ್ರನು. ಶಂಭುಸುತನು. ಸ್ವತಂತ್ರನು. ಭಕ್ತರಿಂದ ಧ್ಯಾನಮಾಡಲ್ಪಡುವವನು. ಭಕ್ತರ ಗುರಿಯು. ಪಿತೃಗಳಿಗೆ ಪಿತೃವು. ಸತ್ಪುರುಷರಿಗೆ ಕಾರಣನು ಎಂದು ಅನೇಕವಿಧವಾಗಿ ಸ್ತೋತ್ರಮಾಡಿದನು.

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯ ದೇವಸಮ್ರಾಟ್ ಶಿವಾತ್ಮಜಃ ।
ಸ್ವಗಣಂ ವೀರಬಾಹ್ವಾಖ್ಯಂ ಪ್ರೇಷಯಾಮಾಸ ತತ್ಕೃತೇ ॥ ೧೩ ॥

ತದಾಜ್ಞಯಾ ವೀರಬಾಹುಸ್ತದನ್ವೇಷಣಹೇತವೇ ।
ಪ್ರಣಮ್ಯ ಸ್ವಾಮಿನಂ ಭಕ್ತ್ಯಾ ಮಹಾವೀರೋ ದ್ರುತಂ ಯಯೌ ॥ ೧೪ ॥

ಅನ್ವೇಷಣಂ ಚಕಾರಾಸೌ ಸರ್ವಬ್ರಹ್ಮಾಂಡಗೋಲಕೇ ।
ನ ಪ್ರಾಪ ತಮಜಂ ಕುತ್ರ ಶುಶ್ರಾವ ತದುಪದ್ರವಂ ॥ ೧೫ ॥

ಜಗಾಮಾಥ ಸ ವೈಕುಂಠಂ ತತ್ರಾಜಂ ಪ್ರದದರ್ಶ ತಂ ।
ಉಪದ್ರವಂ ಪ್ರಕುರ್ವಂತಿ ಗಲಯೂಪಂ ಮಹಾಬಲಂ ॥ ೧೬ ॥

ಧೃತ್ವಾ ತಂ ಶೃಂಗಯೋರ್ವೀರೋ ಧರ್ಷಯಿತ್ವಾತಿವೇಗತಃ ।
ಆನಿನಾಯ ಸ್ವಾಮಿಪುರೋ ವಿಕುರ್ವಂತಂ ರವಂ ಬಹು ॥ ೧೭ ॥

---

೧೩. ಬ್ರಹ್ಮನು ಹೇಳಿದನು :—ಬ್ರಾಹ್ಮಣನು ಈರೀತಿಯಾಗಿ ಸ್ತೋತ್ರ ಮಾಡಲು ಅದನ್ನು ಕೇಳಿ ಶಿವಸುತನಾದ ಗುಹನು ವೀರಬಾಹುವೆಂಬ ತನ್ನ ಗಣವನ್ನು ಬ್ರಾಹ್ಮಣನೊಂದಿಗೆ ಕಳುಹಿಸಿದನು.

೧೪-೧೫. ಷಣ್ಮುಖನ ಅಪ್ಪಣೆಯಂತೆ ಆ ವೀರಬಾಹುವು ಅವನನ್ನು ನಮಸ್ಕರಿಸಿ ಆಡನ್ನು ಹುಡುಕಲು ಜಾಗ್ರತೆಯಾಗಿ ಹೊರಟನು. ಬ್ರಹ್ಮಾಂಡದಲ್ಲಿ ಎಲ್ಲಾ ಕಡೆಯಲ್ಲಿ ಹುಡುಕಿದರೂ ಆಡು ಸಿಕ್ಕಲೇ ಇಲ್ಲ. ಅದರ ಸುಳಿವೇ ಕಾಣಲಿಲ್ಲ.

೧೬. ಆ ವೀರಬಾಹುವು ಅನಂತರ ವೈಕುಂಠಕ್ಕೆ ಹೋದದನು. ಅಲ್ಲಿ ಉಪದ್ರವವನ್ನು ಮಾಡುತ್ತಿರುವ ಮಹಾಬಲಶಾಲಿಯಾದ ಆ ಅಜವನ್ನು ನೋಡಿದನು.

೧೭. ಅದು ಕೂಗಿಕೊಳ್ಳುತ್ತಿದ್ದರೂ ಬಿಡದೆ ಆ ಅಜವನ್ನು ಕೊಂಬಿನಲ್ಲಿ ಓಡಿದು ತನ್ನ ಸ್ವಾಮಿಯಾದ ಷಣ್ಮುಖನಲ್ಲಿಗೆ ಎಳೆದುಕೊಂಡು ಬಂದನು.

ದೃಷ್ಟ್ವಾ ತಂ ಕಾರ್ತಿಕೇಯಸ್ಸೋಽರಮಾರುರೋಹ ಸ ತಂ ಪ್ರಭುಃ ।
ಧೃತಬ್ರಹ್ಮಾಂಡಗರಿಮಾ ಮಹಾಸೂತಿಕರೋ ಗುಹಃ ॥ ೨೮ ॥

ಮುಹೂರ್ತಮಾತ್ರತಸ್ಸೋಽಜೋ ಬ್ರಹ್ಮಾಂಡಂ ಸಕಲಂ ಮುನೇ ।
ಬಭ್ರಾಮ ಶ್ರಮ ಏವಾಶು ಪುನಸ್ತತ್ಸ್ಥಾನಮಾಗತಃ ॥ ೨೯ ॥

ತತ ಉತ್ತೀರ್ಯ ಸ ಸ್ವಾಮೀ ಸಮುವಾಸ ಸ್ವಮಾಸನಂ ।
ಸೋಽಜಃ ಸ್ಥಿತಸ್ತು ತತ್ರೈವ ಸ ನಾರದ ಉವಾಚ ತಂ ॥ ೩೦ ॥

॥ ನಾರದ ಉವಾಚ ॥

ನಮಸ್ತೇ ದೇವದೇವೇಶ ದೇಹಿ ಮೇಽಜಂ ಕೃಪಾನಿಧೇ ।
ಕುರ್ಯಾಮಧ್ವರಮಾನಂದಾತ್ಸಖಾಯಂ ಕುರು ಮಾಮಹೋ ॥ ೩೧ ॥

॥ ಕಾರ್ತಿಕ ಉವಾಚ ॥

ವಧಯೋಗ್ಯೋ ನ ವಿಪ್ರಾಜಃ ಸ್ವಗೃಹಂ ಗಚ್ಛ ನಾರದ ।
ಪೂರ್ಣೋಽಸ್ತು ತೇಽಧ್ವರಸ್ಸರ್ವಃ ಪ್ರಸಾದಾದೇವ ಮೇ ಕೃತಃ ॥ ೩೨ ॥

---

೨೮-೨೯. ಅನಂತರ ಕಾರ್ತಿಕೇಯನು ಬ್ರಹ್ಮಾಂಡದ ವಿಸ್ತಾರವನ್ನು ತಿಳಿದವನಾಗಿ ಆ ಅಜದಮೇಲೆ ಕುಳಿತುಕೊಂಡನು. ಆ ಆಡು ಮುಹೂರ್ತಮಾತ್ರದಲ್ಲಿ ಸಕಲ ಬ್ರಹ್ಮಾಂಡವನ್ನೂ ಸುತ್ತಿ ಮತ್ತೆ ಗುಹನಿದ್ದ ಸ್ಥಳಕ್ಕೇ ಬಂದು ನಿಂತಿತು.

೩೦. ಬಳಿಕ ಷಣ್ಮುಖನು ಅಜದಿಂದ ಕೆಳಗಿಳಿದು ತನ್ನ ಸಿಂಹಾಸನದಲ್ಲಿ ಕುಳಿತನು. ಆ ಅಜವು ಅಲ್ಲಿಯೇ ನಿಂತಿದ್ದಿತು. ಅದನ್ನು ನೋಡಿ ನಾರದನಿಂತೆಂದನು.

೩೧. ನಾರದನೆಂಬ ಬ್ರಾಹ್ಮಣನು ಹೇಳಿದನು ;—ಎಲೈ ದೇವಾಧಿದೇವನೇ, ನಿನಗೆ ನಮಸ್ಕಾರವು. ನೀನು ಕರುಣಾನಿಧಿಯು. ನನ್ನ ಅಜವನ್ನು ಕೊಡು. ನನ್ನ ಯಜ್ಞವನ್ನು ಆನಂದದಿಂದ ಮಾಡುವೆನು. ನನ್ನನ್ನು ನಿನ್ನ ಸಖನೆಂದು ಭಾವಿಸು ಎನ್ನಲು,

೩೨. ಷಣ್ಮುಖನು ನಾರದನನ್ನು ಕುರಿತು ಎಲೈ ಬ್ರಾಹ್ಮಣನೇ, ಈ ಅಜವು ಯಜ್ಞದಲ್ಲಿ ವಧೆಮಾಡಲು ಯೋಗ್ಯವಾದುದಲ್ಲ. ಇದರ ಪ್ರಭಾವವು ನಿನಗೆ ತಿಳಿಯದು. ಈಗ ನಿನ್ನ ಮನೆಗೆ ನೀನು ಹೊರಡು. ನನ್ನ ಪ್ರಸಾದದಿಂದ ನಿನ್ನ ಯಜ್ಞವು ಪೂರ್ಣವಾಗುವುದು ಎಂದನು.

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ದ್ವಿಜಸ್ಸ್ವಾಮಿ ವಚನಂ ಪ್ರೀತಿಮಾನಸಃ ।
ಜಗಾಮ ಸ್ವಾಲಯಂ ದತ್ವಾ ತಸ್ಮಾ ಆಶಿಷಮುತ್ತಮಂ ॥ ೩೩ ॥

ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಕುಮಾರಖಂಡೇ
ಕುಮಾರಾದ್ಭುತಚರಿತವರ್ಣನಂ ನಾಮ ಷಷ್ಠೋಽಧ್ಯಾಯಃ.

---

೩೩. ಗುಹನಾಡಿದ ಮಾತನ್ನು ಕೇಳಿ ಆ ನಾರದನೆಂಬ ಬ್ರಾಹ್ಮಣನು ಸಂತೋಷದಿಂದ ಗುಹನಿಗೆ ಆಶೀರ್ವಾದಮಾಡಿ ತನ್ನ ಮನೆಗೆ ಹೊರಟುಹೋದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ರುದ್ರಸಂಹಿತೆಯ ಕುಮಾರಖಂಡದಲ್ಲಿ
ಕುಮಾರಾದ್ಭುತಚರಿತವರ್ಣನವೆಂಬ ಆರನೆಯ ಅಧ್ಯಾಯವು
ಮುಗಿದುದು.

॥ ಶ್ರೀ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಕುಮಾರಖಂಡೇ

## ಸಪ್ತಮೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಹರ್ಯಾದಯಸ್ಸುರಾಸ್ತೇ ಚ ದೃಷ್ಟ್ವಾ ತಚ್ಚರಿತಂ ವಿಭೋಃ ।
ಸುಪ್ರಸನ್ನಾ ಬಭೂವುರ್ಹಿ ವಿಶ್ವಾಸಾಸಕ್ತಮಾನಸಾಃ ॥ ೧ ॥

ವಲ್ಗಿತಃ ಕುರ್ವತೋ ನಾದಂ ಭಾವಿತಾಶ್ಶಿವತೇಜಸಾ ।
ಕುಮಾರಂ ತೇ ಪುರಸ್ಕೃತ್ಯ ತಾರಕಂ ಹಂತುಮಾಯಯೌ ॥ ೨ ॥

ದೇವಾನಾಮುದ್ಯಮಂ ಶ್ರುತ್ವಾ ತಾರಕೋಽಪಿ ಮಹಾಬಲಃ ।
ಸೈನ್ಯೇನ ಮಹತಾ ಸದ್ಯೋ ಯಯೌ ಯೋದ್ಧುಂ ಸುರಾನ್ಪ್ರತಿ ॥ ೩ ॥

---

### ಏಳನೆಯ ಅಧ್ಯಾಯವು.

೧-೨. ಬ್ರಹ್ಮನು ಹೇಳಿದನು :—ವಿಷ್ಣುವೇ ಮೊದಲಾದ ದೇವತೆಗಳೆಲ್ಲರೂ ಕುಮಾರನ ಅದ್ಭುತ ಚರಿತ್ರೆಯನ್ನು ನೋಡಿ ಇವನೇ ತಾರಕನನ್ನು ಸಂಹರಿಸುವವನು ಎಂದು ನಂಬಿಕೆಯುಳ್ಳವರಾಗಿ ಹರ್ಷಿತರಾದರು. ಅನಂತರ ಕುಮಾರನನ್ನು ಮುಂದಿಟ್ಟುಕೊಂಡು ಶಿವನ ತೇಜಸ್ಸಿನಿಂದ ಉತ್ಸಾಹಗೊಂಡ ದೇವತೆಗಳು ಜಯಶಬ್ದವನ್ನು ಮಾಡುತ್ತಾ ತಾರಕನನ್ನು ಕೊಲ್ಲಲು ಅಲ್ಲಿಂದ ಹೊರಟರು.

೩. ಮಹಾಬಲಶಾಲಿಯಾದ ತಾರಕನೂ ಸಹ ದೇವತೆಗಳು ತನ್ನ ಮೇಲೆ ಯುದ್ಧಮಾಡಲು ಬಂದಿರುವುದನ್ನು ತಿಳಿದು ದೊಡ್ಡಸೈನ್ಯವನ್ನು ತೆಗೆದುಕೊಂಡು ದೇವತೆಗಳ ಮೇಲೆ ಯುದ್ಧಮಾಡಲು ಜಾಗ್ರತೆಯಾಗಿ ಬಂದನು.

ದೇವಾ ದೃಷ್ಟ್ವಾ ಸಮಾಯಾತಂ ತಾರಕಸ್ಯ ಮಹಾಬಲಂ ।
ಬಲೇನ ಬಹು ಕುರ್ವಂತಃ ಸಿಂಹನಾದಂ ವಿಸಿಸ್ಮಿಯುಃ ॥ ೪ ॥

ತದಾ ನಭೋಽಂಗನಾ ವಾಣೀ ಜಗಾದೋಪರಿ ಸತ್ವರಂ ।
ಶಂಕರಪ್ರೇರಿತಾ ಸದ್ಯೋ ಹರ್ಯಾದೀನಖಿಲಾನ್ಸುರಾನ್ ॥ ೫ ॥

॥ ವ್ಯೋಮವಾಣ್ಯುವಾಚ ॥

ಕುಮಾರಂ ಚ ಪುರಸ್ಕೃತ್ಯ ಸುರಾ ಯೂಯಂ ಸಮುದ್ಯತಾಃ ।
ದೈತ್ಯಾನ್ವಿಜಿತ್ಯ ಸಂಗ್ರಾಮೇ ಜಯಿನೋಽಥ ಭವಿಷ್ಯಥ ॥ ೬ ॥

॥ ಬ್ರಹ್ಮೋವಾಚ ॥

ವಾಚಂ ತು ಖೇಚರೀಂ ಶ್ರುತ್ವಾ ದೇವಾಸ್ಸರ್ವೇ ಸಮುತ್ಸುಕಾಃ ।
ವೀರಶಬ್ದಾನ್ ಪ್ರಕುರ್ವಂತೋ ನಿರ್ಭಯಾ ಹ್ಯಭವಂಸ್ತದಾ ॥ ೭ ॥

ಕುಮಾರಂ ಚ ಪುರಸ್ಕೃತ್ಯ ಸರ್ವೇ ತೇ ಜಾತಸಾಧ್ವಸಾಃ ।
ಯೋದ್ಧುಕಾಮಾಸ್ಸುರಾ ಜಗ್ಮುರ್ಮಹೀಸಾಗರಸಂಗಮಂ ॥ ೮ ॥

---

೪. ದೊಡ್ಡಸೈನ್ಯದೊಡನೆ ತಾರಕನು ಬರುತ್ತಿರುವುದನ್ನು ದೇವತೆಗಳು ನೋಡಿ ತಮ್ಮ ಸೈನ್ಯವನ್ನು ಹುರಿದುಂಬಿಸುತ್ತಾ ಸಿಂಹನಾದವನ್ನು ಮಾಡಿದರು.

೫. ಆ ಸಮಯದಲ್ಲಿ ಈಶ್ವರಪ್ರೇರಿತವಾದ ಆಕಾಶವಾಣಿಯು ವಿಷ್ಣುವೇ ಮೊದಲಾದ ದೇವತೆಗಳನ್ನು ಕುರಿತು ಈರೀತಿ ಹೇಳಿತು.

೬. ಎಲೈ ದೇವತೆಗಳಿರಾ, ನೀವೆಲ್ಲರೂ ಕುಮಾರನನ್ನು ಮುಂದಿಟ್ಟುಕೊಂಡು ದೈತ್ಯರೊಡನೆ ಯುದ್ಧಮಾಡಿ. ಹಾಗೆ ಮಾಡುವುದರಿಂದ ನೀವು ಅವರನ್ನು ಗೆದ್ದು ಜಯಶಾಲಿಗಳಾಗುವಿರಿ.

೭-೮. ಬ್ರಹ್ಮನು ಹೇಳಿದನು:—ಆಕಾಶವಾಣಿಯನ್ನು ಕೇಳಿದನಂತರ ದೇವತೆಗಳಿಗೆ ಉತ್ಸಾಹವು ಜಾಸ್ತಿಯಾಯಿತು. ಸಂಭ್ರಮದಿಂದ ವೀರಾಲಾಪವನ್ನು ಮಾಡುತ್ತಾ ಭಯವನ್ನು ತ್ಯಜಿಸಿ, ಕುಮಾರನನ್ನು ಸೈನ್ಯಾಧಿಪತಿಯನ್ನಾಗಿಮಾಡಿಕೊಂಡು ಯುದ್ಧಮಾಡಲು ಸಮುದ್ರತೀರಕ್ಕೆ ಬಂದುಸೇರಿದರು.

ಆಜಗಾಮ ದ್ರುತಂ ತತ್ರ ಯತ್ರ ದೇವಾಸ್ಸ ತಾರಕಃ ।
ಸೈನ್ಯೇನ ಮಹತಾ ಸಾರ್ಧಂ ಸುರೈರ್ಬಹುಭಿರಾವೃತಃ ॥ ೯ ॥

ರಣದುಂದುಭಯೋ ನೇದುಃ ಪ್ರಲಯಾಂಬುದನಿಸ್ವನಾಃ ।
ಕರ್ಕಶಾನಿ ಚ ವಾದ್ಯಾನಿ ಪರಾಣಿ ಚ ತದಾಗಮೇ ॥ ೧೦ ॥

ಗರ್ಜಮಾನಾಸ್ತದಾ ದೈತ್ಯಾಸ್ತಾರಕೇಣಾಸುರೇಣ ಹ ।
ಕಂಪಯಂತೋ ಭುವಂ ಪಾದಕ್ರನ್ಯೈರ್ವಲ್ಗನಕಾರಕಾಃ ॥ ೧೧ ॥

ತಚ್ಛ್ರುತ್ವಾ ರವಮುತ್ಯುಗ್ರಂ ಸರ್ವೇ ದೇವಾ ವಿನಿರ್ಭಯಾಃ ।
ಏಕಪದ್ಯೇ ಚೋತ್ತಸ್ಥುರ್ಯೋದ್ಧುಕಾಮಾಶ್ಚ ತಾರಕಂ ॥ ೧೨ ॥

ಗಜಮಾರೋಪ್ಯ ದೇವೇಂದ್ರಃ ಕುಮಾರಂ ಹ್ಯಗ್ರತೋಽಭವತ್ ।
ಸುರಸೈನ್ಯೇನ ಮಹತಾ ಲೋಕಪಾಲೈಸ್ಸಮಾವೃತಃ ॥ ೧೩ ॥

---

೯. ಇಷ್ಟರಲ್ಲಿ ತಾರಕಾಸುರನು ದೇವತೆಗಳು ಇಳಿದಿರುವ ಸ್ಥಳಕ್ಕೆ ದೊಡ್ಡ ಸೈನ್ಯದೊಡನೆ ಬಂದನು. ಆಗ ದೇವತೆಗಳೆಲ್ಲರೂ ಅವನನ್ನು ಮುತ್ತಿದರು.

೧೦. ತಾರಕಾಸುರನು ಬರುತ್ತಿರಲು ಪ್ರಳಯಕಾಲದ ಮೇಘದ ಧ್ವನಿಯಂತೆ ರಣಭೇರಿಗಳು ಭಯಂಕರವಾಗಿ ಮೊಳಗಿದವು. ಇನ್ನೂ ಅನೇಕ ಕರ್ಕಶವಾದ ವಾದ್ಯಗಳೂ ಮೊಳಗಿದವು.

೧೧. ಆಗ ತಾರಕಾಸುರನೂ ಅವನ ಕಡೆಯ ದೈತ್ಯರೂ ಗರ್ಜಿಸುತ್ತಾ, ತಮ್ಮ ನಡಗೆಯಿಂದ ಭೂಮಿಯು ನಡುಗುತ್ತಿರಲು, ಅತ್ತಿತ್ತ ಒಲಿದಾಡುತ್ತಾ ಬಂದರು.

೧೨. ದೇವತೆಗಳು ಆ ಭಯಂಕರ ಶಬ್ದವನ್ನು ಕೇಳಿದರೂ ಸಹ ನಿರ್ಭಯರಾಗಿ ತಾರಕನೊಡನೆ ಯುದ್ಧಮಾಡಲು ಒಟ್ಟಿಗೆ ಸಿದ್ಧರಾದರು.

೧೩. ದೇವೇಂದ್ರನು ಕುಮಾರನನ್ನು ಮುಂದಿಟ್ಟುಕೊಂಡು ದೇವಸೈನ್ಯದೊಡನೆಯೂ ಅಷ್ಟದಿಕ್ಪಾಲಕರೊಡನೆಯೂ ಆನೆಯನ್ನು ಹತ್ತಿದನು.

ತದಾ ದುಂದುಭಯೋ ನೇದುರ್ಭೇರೀತೂರ್ಯಾಣ್ಯನೇಕಶಃ ।
ವೀಣಾವೇಣುಮೃದಂಗಾನಿ ತಥಾ ಗಂಧರ್ವನಿಸ್ಸ್ವನಾಃ ॥ ೧೪ ॥

ಗಜಂ ದತ್ವಾ ಮಹೇಂದ್ರಾಯ ಕುಮಾರೋ ಯಾನಮಾರುಹತ್ ।
ಅನೇಕಾಶ್ಚರ್ಯಸಂಭೂತಂ ನಾನಾರತ್ನಸಮನ್ವಿತಂ ॥ ೧೫ ॥

ವಿಮಾನಮಾರುಹ್ಯ ತದಾ ಮಹಾಯಶಾಃ
ಸ ಶಾಂಕರಿಸ್ಸರ್ವಗುಣೈರುಪೇತಃ ।
ಶ್ರಿಯಾ ಸಮೇತಃ ಪರಯಾ ಬಭೌ ಮಹಾನ್
ಸವೀಜ್ಯಮಾನಶ್ಚಮರೈರ್ಮಹಾಪ್ರಭೈಃ ॥ ೧೬ ॥

ಪ್ರಾಚೇತಸಂ ಛತ್ರಮತೀವ ಸುಪ್ರಭಂ
ರತ್ನೈರುಪೇತಂ ವಿವಿಧೈರ್ವಿರಾಜಿತಂ ।
ಧೃತಂ ತದಾ ತಚ್ಚ ಕುಮಾರಮೂರ್ಧ್ನಿ ವೈ
ಹ್ಯನಂತಚಂದ್ರೈಃ ಕಿರಣೈರ್ಮಹಾಪ್ರಭೈಃ ॥ ೧೭ ॥

---

೧೪. ಆ ಸಮಯದಲ್ಲಿ ದೇವದುಂದುಭಿಗಳು ಮೊಳಗಿದವು. ಭೇರಿ, ಕಹಳೆ ಮುಂತಾದುವುಗಳನ್ನು ಬಾರಿಸಿದರು. ವೀಣೆ, ಕೊಳಲು, ಮೃದಂಗ ಮುಂತಾದ ವಾದ್ಯಗಳನ್ನು ಗಂಧರ್ವರು ಬಾರಿಸಿದರು.

೧೫. ಷಣ್ಮುಖನು ಇಂದ್ರನಿಗೆ ಆನೆಯ ಮೇಲೇರಿ ಯುದ್ಧಕ್ಕೆ ಹೊರಡುವಂತೆ ಹೇಳಿ ತಾನು ಆ ಪರಮಾದ್ಭುತವಾದ ರತ್ನಖಚಿತವಾದ ವಿಮಾನವನ್ನು ಹತ್ತಿದನು.

೧೬. ಮಹಾಯಶಸ್ವಿಯಾದ ಆ ಶಂಕರಸುತನು ವಿಮಾನದಲ್ಲಿ ಕುಳಿತುಕೊಂಡು ಸದ್ಗುಣಗಳೊಡನೆ ಕೂಡಿ, ಅವನ ಅಕ್ಕಪಕ್ಕಗಳಲ್ಲಿ ದೇವತೆಗಳು ಕಾಂತಿಯುಕ್ತವಾದ ಚಾಮರಗಳನ್ನು ಬೀಸುತ್ತಿರಲು, ಅತ್ಯಂತವಾದ ಪ್ರಭೆಯಿಂದ ಪ್ರಕಾಶಿಸಿದನು.

೧೭. ವರುಣನು ಅನೇಕ ರತ್ನಗಳಿಂದ ನಿರ್ಮಿಸಿರುವ ಶ್ವೇತ ಛತ್ರಿಯನ್ನು ಕುಮಾರನಿಗೆ ಹಿಡಿದನು. ಅದು ಅನಂತಚಂದ್ರರ ಕಿರಣದಂತೆ ಬಿಳುಪಾಗಿ ಪ್ರಕಾಶಿಸುತ್ತಿತ್ತು.

ಮಿಲಿತಾಸ್ತೇ ತದಾ ಸರ್ವೇ ದೇವಾಶ್ಶಕ್ರಪುರೋಗಮಾಃ ।
ಸ್ವೈಃ ಸ್ವೈರ್ಬಲೈಃ ಪರಿವೃತಾ ಯುದ್ಧಕಾಮಾ ಮಹಾಬಲಾಃ ॥ ೧೮ ॥

ಏವಂ ದೇವಾಶ್ಚ ದೈತ್ಯಾಶ್ಚ ಯೋದ್ಧುಕಾಮಾಃ ಸ್ಥಿತಾ ಭುವಿ ।
ಸೈನ್ಯೇನ ಮಹತಾ ತೇನ ವ್ಯೂಹಂ ಕೃತ್ವಾ ಪೃಥಕ್ ಪೃಥಕ್ ॥ ೧೯ ॥

ತೇ ಸೇನೇ ಸುರದೈತ್ಯಾನಾಂ ಶುಶುಭಾತೇ ಪರಸ್ಪರಂ ।
ಹಂತುಕಾಮೇ ತದನ್ಯೋನ್ಯಂ ಸ್ತೂಯಮಾನೇ ಚ ವಂದಿಭಿಃ ॥ ೨೦ ॥

ಉಭೇ ಸೇನೇ ತದಾ ತೇಷಾಮುಗರ್ಜೀತಾಂ ಘನೋಪಮೇ ।
ಭಯಂಕರೇಽತ್ಯವೀರಾಣಾಮಿತರೇಷಾಂ ಸುಖಾವಹೇ ॥ ೨೧ ॥

ಏತಸ್ಮಿನ್ನಂತರೇ ತತ್ರ ಬಲೋನ್ಮತ್ತಾ ಪರಸ್ಪರಂ ।
ದೈತ್ಯಾ ದೇವಾ ಮಹಾವೀರಾ ಯಯುಧುಃ ಕ್ರೋಧವಿಹ್ವಲಾಃ ॥ ೨೨ ॥

---

೧೮. ಇಂದ್ರನೇ ಮೊದಲಾದ ದೇವತೆಗಳೆಲ್ಲರೂ ಒಟ್ಟುಗೂಡಿ ತಮ್ಮ ತಮ ಸೈನ್ಯಗಳೊಡನೆ ಯುದ್ಧಮಾಡಲು ಮುಂದುವರಿದರು.

೧೯. ಈರೀತಿಯಾಗಿ ದೇವತೆಗಳೂ ದಾನವರೂ ತಮ್ಮ ತಮ್ಮ ದೊಡ್ಡ ಸೈನ್ಯದೊಡನೆ ಬೇರೆಬೇರೆಯಾಗಿ ಸೈನ್ಯವ್ಯೂಹವನ್ನು ರಚಿಸಿಕೊಂಡು ಪರಸ್ಪರ ಯುದ್ಧಕ್ಕೆ ಸಿದ್ಧರಾದರು.

೨೦. ಆ ಸುರದೈತ್ಯರ ಸೈನ್ಯಗಳು ಒಬ್ಬರನ್ನೊಬ್ಬರು ಕೊಲ್ಲಬೇಕೆಂಬ ಆಶೆಯುಳ್ಳವರಾಗಿದ್ದರು. ಎರಡು ಕಡೆಯ ವಂದಿಗಳೂ ಹೊಗಳುತ್ತಾ ಎರಡು ಕಡೆಯ ಸೈನ್ಯದವರನ್ನೂ ಹುರಿದುಂಬಿಸುತ್ತಿದ್ದರು.

೨೧. ಮೋಡಗಳಂತೆ ಭಯಂಕರವಾಗಿ ಕಾಣುತ್ತಿರುವ ಆ ದೇವರಾಕ್ಷಸರ ಸೈನ್ಯಗಳು ಉತ್ಸಾಹದಿಂದ ಗರ್ಜಿಸಿದವು. ಆ ಗರ್ಜನೆಯು ವೀರರಿಗೆ ಉತ್ಸಾಹವನ್ನೂ ಇತರರಿಗೆ ಭಯವನ್ನೂ ಉಂಟುಮಾಡುತ್ತಿತ್ತು.

೨೨. ಅನಂತರ ಆ ದೇವದಾನವರೆಲ್ಲರೂ ಬಲದಿಂದ ಮದಿಸಿ ಪರಸ್ಪರ ಕೋಪದಿಂದ ಯುದ್ಧಮಾಡಿದರು.

ಆಸೀತ್ಸತುಮುಲಂ ಯುದ್ಧಂ ದೇವದೈತ್ಯಸಮಾಕುಲಂ ।
ರುಂಡಮುಂಡಾಂಕಿತಂ ಸರ್ವಂ ಕ್ಷಣೇವ ಸಮುಪದ್ಯತ ॥ ೨೩ ॥

ಭೂಮೌ ನಿಪತಿತಾಸ್ತತ್ರ ಶತಶೋಽಥ ಸಹಸ್ರಶಃ ।
ನಿಕೃತ್ತಾಂಗಾ ಮಹಾಶಸ್ತ್ರೈರ್ನಿಹತಾ ವೀರಸಮ್ಮತಾಃ ॥ ೨೪ ॥

ಕೇಷಾಂಚಿದ್ಬಾಹವಶ್ಛಿನ್ನಾಃ ಖಡ್ಗಪಾತೈಸ್ಸುದಾರುಣೈಃ ।
ಕೇಷಾಂಚಿದೂರವಶ್ಛಿನ್ನಾ ವೀರಾಣಾಂ ಮಾನಿನಾಂ ಮೃಧೇ ॥ ೨೫ ॥

ಕೇಚಿನ್ಮಥಿತಸರ್ವಾಂಗಾ ಗದಾಭಿರ್ಮುದ್ಗರೈಸ್ತಥಾ ।
ಕೇಚಿನ್ನಿರ್ಭಿನ್ನಹೃದಯಾಃ ಪಾಶೈರ್ಭಲ್ಲೈಶ್ಚ ಪಾತಿತಾಃ ॥ ೨೬ ॥

ಕೇಚಿದ್ವಿದಾರಿತಾಃ ಪೃಷ್ಠೇ ಕುಂತೈರಿಷ್ಟಿಭಿರಂಕುಶೈಃ ।
ಛಿನ್ನಾನ್ಯಪಿ ಶಿರಾಂಸ್ಯೇವ ಪತಿತಾನಿ ಚ ಭೂತಲೇ ॥ ೨೭ ॥

ಬಹೂನಿ ಚ ಕಬಂಧಾನಿ ನೃತ್ಯಮಾನಾನಿ ತತ್ರ ವೈ ।
ವಲ್ಗಮಾನಾನಿ ಶತಶೋ ಉದ್ಯತಾಸ್ತ್ರಕರಾಣಿ ಚ ॥ ೨೮ ॥

---

೨೩. ದೇವತೆಗಳೂ ದೈತ್ಯರೂ ಪರಸ್ಪರ ಮಿಲಿತರಾಗಿ ತುಮುಲಯುದ್ಧವನು ಮಾಡಿದರು. ಒಂದು ಕ್ಷಣವೆನ್ನುವಷ್ಟರಲ್ಲಿಯೇ ಯುದ್ಧರಂಗದಲ್ಲಿ ರುಂಡಗಳೂ ಮುಂಡುಗಳೂ ಚೆಲ್ಲಾಡಿದವು.

೨೪-೨೫. ಸಾವಿರಾರು ಜನರು ಮಡಿದು ಭೂಮಿಯಲ್ಲಿ ಬಿದ್ದರು. ಅನೇಕ ವೀರರ ಅಂಗಾಂಗಗಳು ಮಹಾಶಸ್ತ್ರಗಳ ಏಟಿನಿಂದ ಕತ್ತರಿಸಿಬಿದ್ದವು. ಅನೇಕ ಸೈನಿಕರ ಬಾಹುಗಳು ಹರಿತವಾದ ಕತ್ತಿಯ ಏಟಿಗೆ ಸಿಕ್ಕಿ ಕತ್ತರಿಸಿ ಕೆಳಗೆಬಿದ್ದವು. ವೀರರೂ, ಮಾನಿಷ್ಠರೂ ಆದವರನೇಕರ ತೊಡೆಗಳು ತುಂಡು ತುಂಡಾದವು.

೨೬-೨೮. ಗದೆಗಳ ಮುದ್ಗರಗಳ ಏಟಿನಿಂದ ಕೆಲವರ ಸರ್ವಾಂಗಗಳೂ ಜಜ್ಜಿ ಹೋದವು. ಪಾಶಾಯುಧಗಳಿಂದಲೂ, ಭಲ್ಲೆಗಳಿಂದಲೂ ಕೆಲವರ ಹೃದಯಗಳು ಸೀಳಿಹೋದವು. ಕುಂತಾಯುಧಗಳ ಏಟಿನಿಂದ ಕೆಲವರ ಬೆನ್ನುಗಳು ಸೀಳಿದವು. ಅನೇಕ ತಲೆಗಳು ಭೂಮಿಯಲ್ಲಿ ಉರುಳಾಡಿದವು. ಇನ್ನೂ ಅನೇಕ ತಲೆಗಳು ಪುಟಿ ವಿಕ್ಕುತ್ತಾ ನರ್ತನಮಾಡುವಂತೆ ತೋರುತ್ತಿದ್ದವು. ಕತ್ತರಿಸಿದ ನೂರಾರು ಕೈಗಳು ಅತ್ತಿತ್ತ ಅಲುಗಾಡುತ್ತಾ ಯುದ್ಧರಂಗದಲ್ಲಿ ಬಿದ್ದಿದ್ದವು.

ನದ್ಯಃ ಪ್ರವರ್ತಿತಾಸ್ತತ್ರ ಶತಶೋಽಸೃಜ್ವಹಾಸ್ತದಾ ।
ಭೂತಪ್ರೇತಾದಯಸ್ತತ್ರ ಶತಶಶ್ಚ ಸಮಾಗತಾಃ ॥ ೨೯ ॥

ಗೋಮಾಯುವಶ್ವಿವಾಸ್ತತ್ರ ಭಕ್ಷಯಂತಃ ಪಲಂ ಬಹು ।
ತಥಾ ಗೃಧ್ರವಟಾಶ್ಯೇನವಾಯುಸಾ ಮಾಂಸಭಕ್ಷಕಾಃ ।
ಬುಭುಜುಃ ಪತಿತಾನಾಂ ಚ ಪಲಾನಿ ಸುಬಹೂನಿ ಚ ॥ ೩೦ ॥

ಏತಸ್ಮಿನ್ನಂತರೇ ತತ್ರ ತಾರಕಾಖ್ಯೋ ಮಹಾಬಲಃ ।
ಸೈನ್ಯೇನ ಮಹತಾ ಸದ್ಯೋ ಯಯೌ ಯೋದ್ಧುಂ ಸುರಾನ್ಪ್ರತಿ ॥ ೩೧ ॥

ದೇವಾ ದೃಷ್ಟ್ವಾ ಸಮಾಯಾಂತಂ ತಾರಕಂ ಯುದ್ಧದುರ್ಮದಂ ।
ಯೋದ್ಧುಕಾಮಂ ತದಾ ಸದ್ಯೋ ಯಯುಶ್ಶಕ್ರಾದಯಸ್ತದಾ ।
ಬಭೂವಾಥ ಮಹಾನಾದಃ ಸೇನಯೋರುಭಯೋರಪಿ ॥ ೩೨ ॥

ಅಥಾಽಭೂದ್ದ್ವಂದ್ವಯುದ್ಧಂ ಹಿ ಸುರಾಸುರವಿಮರ್ದನಂ ।
ಯಂ ದೃಷ್ಟ್ವಾ ಹರ್ಷಿತಾ ವೀರಾಃ ಕ್ಲೀಬಾಶ್ಚ ಭಯಮಾಗತಾಃ ॥ ೩೩ ॥

---

೨೯-೩೦. ಆ ಯುದ್ಧರಂಗದಲ್ಲಿ ರಕ್ತದ ನದಿಗಳು ಸಾವಿರಗಟ್ಟಲೆ ಕೋಡಿ ಹರಿದವು. ಶವವನ್ನು ತಿನ್ನಲು ಬಂದಿದ್ದ ಭೂತಪ್ರೇತಾದಿಗಳಿಗೆ ಲೆಕ್ಕವೇ ಇಲ್ಲ. ಅನೇಕ ನರಿಗಳೂ ಹದ್ದುಗಳೂ, ಗಿಡುಗಗಳೂ, ಕಾಗೆಗಳೂ ಅಲ್ಲಿ ಬಿದ್ದಿರುವ ಶವಗಳ ಮಾಂಸವನ್ನು ತಿನ್ನುತ್ತಿದ್ದವು.

೩೧. ಇಷ್ಟರಲ್ಲಿ ಮಹಾಬಲಶಾಲಿಯಾದ ತಾರಕಾಸುರನು ದೇವತೆಗಳೊಡನೆ ಯುದ್ಧಮಾಡಲು ದೊಡ್ಡಸೈನ್ಯದೊಡನೆ ತಾನೇ ಜಾಗ್ರತೆಯಾಗಿ ಬಂದನು.

೩೨. ಮದಾಂಧನಾದ ತಾರಕಾಸುರನು ತಮ್ಮೊಡನೆ ಯುದ್ಧಮಾಡಲು ಬರುತ್ತಿರುವುದನ್ನು ನೋಡಿ ಇಂದ್ರಾದಿದೇವತೆಗಳೆಲ್ಲರೂ ಯುದ್ಧಕ್ಕೆ ಸಿದ್ಧರಾದರು. ಉಭಯ ಸೈನ್ಯಗಳಲ್ಲಿಯೂ ರಣವಾದ್ಯಗಳೂ ಮೊಳಗಿದವು.

೩೩. ಅನಂತರ ದೇವತೆಗಳಿಗೂ, ದಾನವರಿಗೂ ದ್ವಂದ್ವಯುದ್ಧವು ಪ್ರಾರಂಭವಾಯಿತು. ಎರಡು ಕಡೆಯಲ್ಲಿಯೂ ಅನೇಕ ಜನರು ಹತರಾದರು. ಈ ದ್ವಂದ್ವ ಯುದ್ಧವು ವೀರರಿಗೆ ಉತ್ಸಾಹವನ್ನೂ ನಿರ್ಬಲರಿಗೆ ಭಯವನ್ನೂ ಉಂಟು ಮಾಡುತ್ತಿತ್ತು.

ತಾರಕೋ ಯುಯುಧೇ ಯುದ್ಧೇ ಶಕ್ರೇಣ ದಿತಿಜೋ ಬಲೀ ।
ಅಗ್ನಿನಾ ಸಹ ಸಂಹ್ರಾದೋ ಜಂಭೇನೈವ ಯಮಃ ಸ್ವಯಂ ॥ ೩೪ ॥

ಮಹಾಪ್ರಭುರ್ನೈರ್ಋರ್ತೇನ ಪಾಶೀ ಸಹ ಬಲೇನ ಚ ।
ಸುವೀರೋ ವಾಯುನಾ ಸಾರ್ಧಂ ಪವಮಾನೇನ ಗುಹ್ಯರಾಟ್ ॥ ೩೫ ॥

ಈಶಾನೇನ ಸ್ವಯಂ ಶಂಭುರ್ಯುಯುಧೇ ರಣವಿತ್ತಮಃ ।
ಶುಂಭಶ್ಶೇಷೇಣ ಯುಯುಧೇ ಕುಂಭಶ್ಚಂದ್ರೇಣ ದಾನವಃ ॥ ೩೬ ॥

ಕುಂಜರೋ ಮಿಹಿರೇಣಾಜೌ ಮಹಾಬಲಪರಾಕ್ರಮಃ ।
ಯುಯುಧೇ ಪರಮಾಸ್ತ್ರೈಶ್ಚ ನಾನಾಯುದ್ಧವಿಶಾರದಃ ॥ ೩೭ ॥

ಏವಂ ದ್ವಂದ್ವೇನ ಯುದ್ಧೇನ ಮಹತಾ ಚ ಸುರಾಸುರಾಃ ।
ಸಂಗರೇ ಯುಯುಧುಸ್ಸರ್ವೇ ಬಲೇನ ಕೃತನಿಶ್ಚಯಾಃ ॥ ೩೮ ॥

ಅನ್ಯೋನ್ಯಂ ಸ್ಪರ್ಧಮಾನಾಸ್ತ್ರೇಽಮರಾ ದೈತ್ಯಾ ಮಹಾಬಲಾಃ ।
ತಸ್ಮಿನ್ ದೇವಾಸುರೇ ಯುದ್ಧೇ ದುರ್ಜಯಾ ಅಭವನ್ಮುನೇ ॥ ೩೯ ॥

---

೩೪-೩೭. ತಾರಕನು ಇಂದ್ರನೊಡನೆಯೂ, ಸಂಹ್ರಾದನು ಅಗ್ನಿಯೊಡನೆಯೂ, ಯಮನು ಜಂಭಾಸುರನೊಡನೆಯೂ ಮಹಾಪ್ರಭುವೆಂಬುವನು ನಿರರುತಿಯೊಡನೆಯೂ, ವರಣನು ಬಲ ಎಂಬುವನೊಡನೆಯೂ, ಸುವೀರನು ವಾಯುವಿನೊಡನೆಯೂ, ಕುಬೇರನು ಪವಮಾನನೆಂಬ ರಾಕ್ಷಸನೊಡನೆಯೂ, ಶಿವನು ಈಶಾನನೊಡನೆಯೂ, ಶುಂಭಾಸುರನು ಆದಿಶೇಷನೊಡನೆಯೂ, ಕುಂಭನು ಚಂದ್ರನೊಡನೆಯೂ, ಕುಂಜರನೆಂಬ ರಾಕ್ಷಸನು ಸೂರ್ಯನೊಡನೆಯೂ, ಪರಮಾಸ್ತ್ರಗಳನ್ನು ಪ್ರಯೋಗಿಸುತ್ತಾ ದ್ವಂದ್ವಯುದ್ಧವನ್ನು ಮಾಡಿದರು.

೩೮-೩೯. ಎಲೈ ನಾರದನೇ, ಕೇಳು. ಈ ರೀತಿಯಾಗಿ ದೇವಾಸುರರು ಪರಸ್ಪರವಾಗಿ ನಾವೇ ಬಲಿಷ್ಠರು ಎಂಬುದಾಗಿ ತಿಳಿದು ದೊಡ್ಡಯುದ್ಧವನ್ನು ಮಾಡಿದರು. ದ್ವಂದ್ವಯುದ್ಧವನ್ನು ಮಾಡುವುದರಲ್ಲಿ ತಮ್ಮ ಕುಶಲತೆಯನ್ನು ಪ್ರದರ್ಶಿಸಿ ಒಬ್ಬರೊನ್ನೊಬ್ಬರು ಮೀರಿಸುತ್ತಿದ್ದರು.

ತದಾ ಚ ತೇಷಾಂ ಸುರದಾನವಾನಾಂ
ಬಭೂವ ಯುದ್ಧಂ ತುಮುಲಂ ಜಯೈಷಿಣಾಂ ।
ಸುಖಾವಹಂ ವೀರಮನಸ್ವಿನಾಂ ವೈ
ಭಯಾವಹಂ ಚೈವ ತಥೇತರೇಷಾಂ ॥ ೪೦ ॥

ಮಹೀ ಮಹಾರೌದ್ರತರಾ ವಿನಷ್ಟಕೈಃ
ಸುರಾಸುರೈರ್ವೈ ಪತಿತೈರನೇಕಶಃ ।
ತಸ್ಮಿನ್ನಗಮ್ಯಾತಿಭಯಾನಕಾ ತದಾ
ಜಾತಾ ಮಹಾಸೌಖ್ಯವಹಾ ಮನಸ್ವಿನಾಂ ॥ ೪೧ ॥

ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಕುಮಾರಖಂಡೇ
ಯುದ್ಧಪ್ರಾರಂಭವರ್ಣನಂ ನಾಮ ಸಪ್ತಮೋಽಧ್ಯಾಯಃ

---

೪೦. ಒಬ್ಬರನ್ನೊಬ್ಬರು ಜಯಿಸಲಿಚ್ಛೆಯಿಂದ ತುಮುಲಯುದ್ಧವನ್ನು ಮಾಡಿದರು. ಈ ಯುದ್ಧವು ವೀರರಿಗೆ ಉತ್ಸಾಹವನ್ನು ಹೆಚ್ಚಿಸುತ್ತಿತ್ತು. ಇತರರಿಗೆ ಭಯವನ್ನುಂಟುಮಾಡುತ್ತಿತ್ತು.

೪೧. ಆ ಯುದ್ಧದಲ್ಲಿ ದೇವತೆಗಳ ಕಡೆಯಲ್ಲಿಯೂ, ದಾನವರ ಕಡೆಯಲ್ಲಿಯೂ ಅನೇಕರು ಸತ್ತುಬಿದ್ದಿದ್ದರು. ಆದರಿಂದ ಯುದ್ಧರಂಗವು ಭಯಂಕರವಾಗಿ ಕಾಣಿಸುತ್ತಿತ್ತು. ಯುದ್ಧರಂಗಕ್ಕೆ ಹೋಗುವುದಕ್ಕೂ ಭಯವಾಗುತ್ತಿತ್ತು. ಯುದ್ಧೋತ್ಸಾಹಿಗಳಾದ ವೀರರಿಗೆ ಮಾತ್ರ ಬಹಳ ಸುಖವನ್ನುಂಟುಮಾಡುತ್ತಿತ್ತು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿನ ರುದ್ರಸಂಹಿತೆಯ ಕುಮಾರಖಂಡದಲ್ಲಿ
ಯುದ್ಧಪ್ರಾರಂಭವರ್ಣನವೆಂಬ ಏಳನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿ ವ ಮ ಹಾ ಪು ರಾ ಣೇ

## ರುದ್ರಸಂಹಿತಾಯಾಂ ಕುಮಾರಖಂಡೇ

## ಅಷ್ಟಮೋಽಧ್ಯಾಯಃ

॥ ಬ್ರಹ್ಮೋವಾಚ ॥

ಇತಿ ತೇ ವರ್ಣಿತಸ್ತಾತ ದೇವದಾನವಸೇನಯೋಃ ।
ಸಂಗ್ರಾಮಸ್ತುಮುಲೋಽತೀವ ತತ್ಪ್ರಭ್ವೋಃ ಶೃಣು ನಾರದ ॥ ೧ ॥

ಏವಂ ಯುದ್ಧೇಽತಿತುಮುಲೇ ದೇವದಾನವಸಂಕ್ಷಯೇ ।
ತಾರಕೇಣೈವ ದೇವೇಂದ್ರಶ್ಶಕ್ತ್ಯಾ ಪರಮಯಾ ಸಹ ॥ ೨ ॥

ಸದ್ಯಃ ಪಪಾತ ನಾಗಾಚ್ಚ ಧರಣ್ಯಾಂ ಮೂರ್ಛಿತೋಽಭವತ್ ।
ಪರಂ ಕಶ್ಮಲಮಾಪೇದೇ ವಜ್ರಧಾರೀ ಸುರೇಶ್ವರಃ ॥ ೩ ॥

---

### ಎಂಟನೆಯ ಅಧ್ಯಾಯವು.

೧. ಬ್ರಹ್ಮನು ಹೇಳಿದನು :—ಎಲೈ ನಾರದನೇ, ಇದುವರೆವಿಗೂ ದೇವದಾನವರ ಯುದ್ಧಪ್ರಾರಂಭದ ವರ್ಣನೆಯನ್ನು ನಿನಗೆ ತಿಳಿಸಿದೆನು. ಇನ್ನು ಆ ದೇವದಾನವರಲ್ಲಿ ಮುಖಂಡರಾದವರ ಯುದ್ಧವನ್ನು ತಿಳಿಸುವೆನು ಕೇಳು.

೨-೩. ಈರೀತಿಯಾಗಿ ಕಲೆತು ಯುದ್ಧಮಾಡುತ್ತಿರಲು ಅನೇಕ ದೇವತೆಗಳೂ ದಾನವರೂ ನಾಶವಾಗುತ್ತಿರುವುದನ್ನು ನೋಡಿ ದೇವೇಂದ್ರನು ಶ್ರೇಷ್ಠವಾದ ತನ್ನ ಶಕ್ತ್ಯಾಯುಧವನ್ನು ತೆಗೆದುಕೊಂಡು ತಾರಕಾಸುರನೊಡನೆ ಯುದ್ಧಮಾಡಿದನು. ಆದರೇನು ? ತತ್ಕ್ಷಣದಲ್ಲಿಯೇ ತನ್ನ ಆನೆಯಿಂದ ಕೆಳಕ್ಕೆ ಬಿದ್ದು ಮೂರ್ಛಿತನಾದನು.

ತಥೈವ ಲೋಕಪಾಸ್ಸರ್ವೇಽಸುರೈಶ್ಚ ಬಲವತ್ತರಃ ।
ಪರಾಜಿತಾ ರಣೇ ತಾತ ಮಹಾರಣವಿಶಾರದೈಃ ॥ ೪ ॥

ಅನ್ಯೇಪಿ ನಿರ್ಜರಾ ದೈತ್ಯೈರ್ಯುಧ್ಯಮಾನಾಃ ಪರಾಜಿತಾಃ ।
ಅಸಹಂತೋ ಹಿ ತತ್ತೇಜಃ ಪಲಾಯನಪರಾಯಣಾಃ ॥ ೫ ॥

ಜಗರ್ಜುರಸುರಾಸ್ತತ್ರ ಜಯಿನಸ್ಸ್ವಕೃತೋದ್ಯಮಾಃ ।
ಸಿಂಹನಾದಂ ಪ್ರಕುರ್ವಂತಃ ಕೋಲಾಹಲಪರಾಯಣಾಃ ॥ ೬ ॥

ಏತಸ್ಮಿನ್ನಂತರೇ ತತ್ರ ವೀರಭದ್ರೋ ರುಷಾನ್ವಿತಃ ।
ಆಸಸಾದ ಗಣೈರ್ವೀರೈಸ್ತಾರಕಂ ವೀರಮಾನಿನಂ ॥ ೭ ॥

ನಿರ್ಜರಾನ್ ಪೃಷ್ಠತಃ ಕೃತ್ವಾ ಶಿವಕೋಪೋದ್ಭವೋ ಬಲೀ ।
ತತ್ಸಮ್ಮುಖೋ ಬಭೂವಾಥ ಯೋದ್ಧುಕಾಮೋ ಗಣಾಗ್ರಣೀಃ ॥ ೮ ॥

ತದಾ ತೇ ಪ್ರಮಥಾಸ್ಸರ್ವೇ ದೈತ್ಯಾಶ್ಚ ಪರಮೋತ್ಸವಾಃ ।
ಯುಯುಧುಃ ಸಂಯುಗೇಽನ್ಯೋಽನ್ಯಂ ಪ್ರಸಕ್ತಾಶ್ಚ ಮಹಾರಣೇ ॥ ೯ ॥

---

೪. ಇತ್ತ ಲೋಕಪಾಲಕರೆಲ್ಲರೂ ಮಹಾಯುದ್ಧವಿಶಾರದರಾದ ದಾನವರೊಡನೆ ಯುದ್ಧಮಾಡಿ ಸೋತರು.

೫-೬. ಮತ್ತೆ ಕೆಲವುಜನ ದೇವತೆಗಳೂ, ದೈತ್ಯರೊಡನೆ ಯುದ್ಧಮಾಡಿ ಅವರ ಪರಾಕ್ರಮವನ್ನು ತಡೆಯಲಾರದೆ ಯುದ್ಧರಂಗದಿಂದ ಹಿಮ್ಮೆಟ್ಟಿದರು. ಇದರಿಂದ ಅಸುರರು ಮತ್ತೂ ಉತ್ಸಾಹಗೊಂಡು ಜಯೋತ್ಸಾಹದಿಂದ ಸಿಂಹನಾದವನ್ನು ಮಾಡುತ್ತಾ ಕೋಲಾಹಲವನ್ನೆಬ್ಬಿಸಿದರು.

೭-೮. ಅಷ್ಟರಲ್ಲಿಯೇ ಇದನ್ನೆಲ್ಲಾ ನೋಡುತ್ತಿದ್ದ ವೀರಭದ್ರನು ಅತ್ಯಂತ ಕೋಪಗೊಂಡು ವೀರರಾದ ತನ್ನ ಸೈನಿಕರೊಂದಿಗೆ ಬಂದು ಅತಿ ಬಲಶಾಲಿಯಾದ ತಾರಕಾಸುರನನ್ನು ಎದುರಿಸಿದನು. ಶಿವನ ಕೋಪದಿಂದ ಹುಟ್ಟಿದ ಆ ವೀರಭದ್ರನು ದೇವತೆಗಳನ್ನು ಹಿಂದಿರಿಸಿಕೊಂಡು ತಾರಕನೊಡನೆ ಯುದ್ಧಮಾಡಿದನು.

೯. ಆಗ ಆ ಪ್ರಮಥಗಣಗಳೂ ದೈತ್ಯರೂ ಬಹಳ ಉತ್ಸಾಹದಿಂದ ಆ ಮಹಾರಣಾಂಗಣದಲ್ಲಿ ದ್ವಂದ್ವಯುದ್ಧವನ್ನು ಮಾಡಿದರು.

ತ್ರಿಶೂಲೈರ್ಋಷ್ಟಿಭಿಃ ಪಾಶೈಃ ಖಡ್ಗೈಃ ಪರಶುಪಟ್ಟಿಶೈಃ ।
ನಿಜಘ್ನುಃ ಸಮರೇಽನ್ಯೋನ್ಯಂ ರಣೇ ರಣವಿಶಾರದಾಃ ॥ ೧೦ ॥

ತಾರಕೋ ವೀರಭದ್ರೇಣ ಸತ್ರಿಶೂಲಾಹತೋ ಭೃಶಂ ।
ಪಪಾತ ಸಹಸಾ ಭೂಮೌ ಕ್ಷಣಂ ಮೂರ್ಛಾಪರಿಪ್ಲುತಃ ॥ ೧೧ ॥

ಉತ್ಥಾಯ ಸ ದ್ರುತಂ ವೀರಸ್ತಾರಕೋ ದೈತ್ಯಸತ್ತಮಃ ।
ಲಬ್ಧಸಂಜ್ಞೋ ಬಲಾಚ್ಛಕ್ತ್ಯಾ ವೀರಭದ್ರಂ ಜಘಾನ ಹ ॥ ೧೨ ॥

ವೀರಭದ್ರಸ್ತಥಾ ವೀರೋ ಮಹಾತೇಜಾ ಹಿ ತಾರಕಂ ।
ಜಘಾನ ತ್ರಿಶಿಖೇನಾಶು ಘೋರೇಣ ನಿಶಿತೇನ ತಂ ॥ ೧೩ ॥

ಸೋಽಪಿ ಶಕ್ತ್ಯಾ ವೀರಭದ್ರಂ ಜಘಾನ ಸಮರೇ ತತಃ ।
ತಾರಕೋ ದಿತಿಜಾಧೀಶಃ ಪ್ರಬಲೋ ವೀರಸಮ್ಮತಃ ॥ ೧೪ ॥

ಏವಂ ಸಂಯುದ್ಧ್ಯಮಾನೌ ತೌ ಜಘ್ನತುಶ್ಚೇತರೇತರಂ ।
ನಾನಾಸ್ತ್ರಶಸ್ತ್ರೈಸ್ಸಮರೇ ರಣವಿದ್ಯಾವಿಶಾರದೌ ॥ ೧೫ ॥

---

೧೦. ರಣವಿಶಾರದರಾದ ಆ ಉಭಯಪಕ್ಷದವರೂ ತ್ರಿಶೂಲಗಳಿಂದಲೂ, ಋಷ್ಟ್ಯಾಯುಧಗಳಿಂದಲೂ, ಪಾಶಾಯುಧ, ಖಡ್ಗಾಯುಧ, ಪರಶು, ಪಟ್ಟಿಶ ಮುಂತಾದ ಆಯುಧಗಳಿಂದಲೂ ಪರಸ್ಪರ ಹೊಡೆದಾಡಿದರು.

೧೧-೧೨. ಅನಂತರ ವೀರಭದ್ರನು ತ್ರಿಶೂಲಾಯುಧವನ್ನು ತಾರಕಾಸುರನ ಮೇಲೆ ಪ್ರಯೋಗಿಸಲು ತಕ್ಷಣ ಆ ತಾರಕನು ಭೂಮಿಯಲ್ಲಿ ಬಿದ್ದು ಮೂರ್ಛೆಹೊಂದಿದನು. ಸ್ವಲ್ಪಹೊತ್ತಾದನಂತರ ಚೇತರಿಸಿಕೊಂಡು ಮೇಲಕ್ಕೆದ್ದು ವೀರಭದ್ರನಮೇಲೆ ಶಕ್ತ್ಯಾಯುಧವನ್ನು ಪ್ರಯೋಗಿಸಿದನು.

೧೩-೧೪. ಮಹಾತೇಜಸ್ವಿಯಾದ ವೀರಭದ್ರನು ಭಯಂಕರವೂ, ಹರಿತವೂ ಆಗಿರುವ ತನ್ನ ತ್ರಿಶೂಲದಿಂದ ತಾರಕಾಸುರನನ್ನು ಹೊಡೆದನು. ಪ್ರಬಲವೀರನಾದ ತಾರಕಾಸುರನೂ ಕೂಡ ವೀರಭದ್ರನನ್ನು ಶಕ್ತ್ಯಾಯುಧದಿಂದ ಹೊಡೆದನು.

೧೫-೧೬. ಈರೀತಿಯಾಗಿ ವೀರಭದ್ರನೂ, ತಾರಕಾಸುರನೂ ಅನೇಕ ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸುತ್ತಾ ಭಯಂಕರವಾಗಿ ದ್ವಂದ್ವಯುದ್ಧವನ್ನು ಮಾಡಿದರು.

ತಯೋರ್ಮಹಾತ್ಮನೋಸ್ತತ್ರ ದ್ವಂದ್ವಯುದ್ಧಮಭೂತ್ತದಾ ।
ಸರ್ವೇಷಾಂ ಪಶ್ಯತಾಮೇವ ತುಮುಲಂ ರೋಮಹರ್ಷಣಂ ॥ ೧೬ ॥

ತತೋ ಭೇರಿಮೃದಂಗಾಶ್ಚ ಪಟಹಾನಕಗೋಮುಖಾಃ ।
ವಿನೇದುರ್ವಿಹಿತಾ ವೀರೈಶ್ಶೃಣ್ವತಾಂ ಸುಭಯಾನಕಾಃ ॥ ೧೭ ॥

ಯುಯುಧಾತೇऽತಿಸನ್ನದ್ಧೌ ಪ್ರಹಾರೈರ್ಜರ್ಜರೀಕೃತೌ ।
ಅನ್ಯೋನ್ಯಮತಿಸಂರಬ್ಧೌ ತೌ ಬುಧಾಂಗಾರಕಾವಿವ ॥ ೧೮ ॥

ಏವಂ ದೃಷ್ಟ್ವಾ ತದಾ ಯುದ್ಧಂ ವೀರಭದ್ರಸ್ಯ ತೇನ ಚ ।
ತತ್ರ ಗತ್ವಾ ವೀರಭದ್ರಮವೋಚಸ್ತ್ವಂ ಶಿವಪ್ರಿಯಃ ॥ ೧೯ ॥

॥ ನಾರದ ಉವಾಚ ॥

ವೀರಭದ್ರ ಮಹಾವೀರ ಗಣಾನಾಮಗ್ರಣೀರ್ಭವಾನ್ ।
ನಿವರ್ತಸ್ವ ರಣಾದಸ್ಮಾದ್ರೋಚತೇ ನ ವಧಸ್ತ್ವಯಾ ॥ ೨೦ ॥

---

ಈ ತುಮುಲಯುದ್ಧವು ನೋಡುವವರಿಗೆ ರೋಮಾಂಚವನ್ನುಂಟುಮಾಡುತ್ತಿತ್ತು.

೧೭. ಯುದ್ಧರಂಗದಲ್ಲಿ ಭೇರಿ, ಮೃದಂಗ, ಪಟಹ, (ತಮಟೆ) ಗೋಮುಖ ಮುಂತಾದ ವಾದ್ಯಗಳು ಭಯಂಕರವಾಗಿ ಮೊಳಗಿದವು.

೧೮-೧೯. ವೀರಭದ್ರನೂ, ತಾರಕಾಸುರನೂ ಪರಸ್ಪರವಾಗಿ ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸಿ ಒಬ್ಬರನ್ನೊಬ್ಬರು ಹೊಡೆಯುತ್ತಾ ಅತ್ಯಂತ ಪರಾಕ್ರಮದಿಂದ ಯುದ್ಧ ಮಾಡುತ್ತಿದ್ದರು. ಬುಧ ಮತ್ತು ಅಂಗಾರಕರಂತೆ ಯುದ್ಧಮಾಡುತ್ತಿರುವ ಆ ವೀರಭದ್ರ ಮತ್ತು ತಾರಕಾಸುರರನ್ನು ನೋಡಿ ನಾರದನು ವೀರಭದ್ರನನ್ನು ಕುರಿತು,

೨೦. ಎಲೈ ವೀರಭದ್ರನೇ, ನೀನು ಮಹಾವೀರನು. ಪ್ರಮಥಗಣಗಳಲ್ಲಿ ಶ್ರೇಷ್ಠನು. ಆದರೂ ನೀನು ಯುದ್ಧದಿಂದ ಹಿಂತಿರುಗು. ನಿನ್ನಿಂದ ಆ ತಾರಕನಿಗೆ ವಧೆಯು ಆಗಬಾರದು. ಆದುದರಿಂದ ನೀನು ಯುದ್ಧವನ್ನು ನಿಲ್ಲಿಸಿ ಹಿಂತಿರುಗೆನ್ನಲು,

ಏವಂ ನಿಶಮ್ಯ ತ್ವದ್ವಾಕ್ಯಂ ವೀರಭದ್ರೋ ಗಣಾಗ್ರಣೀಃ ।
ಅವದತ್ಸರುಷಾವಿಷ್ಟಸ್ತ್ವಾಂ ತದಾ ತು ಕೃತಾಂಜಲಿಃ ॥ ೨೦ ॥

॥ ವೀರಭದ್ರ ಉವಾಚ ॥

ಮುನಿವರ್ಯ ಮಹಾಪ್ರಾಜ್ಞ ಶೃಣು ಮೇ ಪರಮಂ ವಚಃ ।
ತಾರಕಂ ಚ ವಧಿಷ್ಯಾಮಿ ಪಶ್ಯ ಮೇಽದ್ಯ ಪರಾಕ್ರಮಂ ॥ ೨೧ ॥

ಆಸಯಂತಿ ಚ ಯೇ ವೀರಾಃ ಸ್ವಾಮಿನಂ ರಣಸಂಸದಿ ।
ತೇ ಪಾಪಿನೋ ಮಹಾಕ್ಲೀಬಾ ವಿನಶ್ಯಂತಿ ರಣಂ ಗತಾಃ ॥ ೨೨ ॥

ಅಸದ್ಗತಿಂ ಪ್ರಾಪ್ನುವಂತಿ ತೇಷಾಂ ಚ ನಿರಯೋ ಧ್ರುವಂ ।
ವೀರಭದ್ರೋ ಹಿ ವಿಜ್ಞೇಯೋ ನ ವಾಚ್ಯಸ್ತೇ ಕದಾಚನ ॥ ೨೪ ॥

ಶಸ್ತ್ರಾಸ್ತ್ರೈರ್ಭಿನ್ನಗಾತ್ರಾ ಯೇ ರಣಂ ಕುರ್ವಂತಿ ನಿರ್ಭಯಾಃ ।
ಇಹಾಮುತ್ರ ಪ್ರಶಂಸ್ಯಾಸ್ತೇ ಲಭಂತೇ ಸುಖಮದ್ಭುತಂ ॥ ೨೫ ॥

---

೨೦-೨೧. ವೀರಭದ್ರನು ನಿನ್ನ (ನಾರದ) ಮಾತನ್ನು ಕೇಳಿ ಕೋಪಗೊಂಡು ಇಂತೆಂದನು ;—ಎಲೈ ಮಹಾಜ್ಞಾನಿಯಾದ ಮುನಿವರನೇ, ನೋಡೀಗ ನನ್ನ ಪರಾಕ್ರಮವನ್ನು. ಈಗಲೇ ತಾರಕಾಸುರನನ್ನು ಕೊಲ್ಲುವೆನು.

೨೨-೨೪. ಯಾವ ವೀರರು ತಾವು ಯುದ್ಧಕ್ಕೆ ಬಂದಿದ್ದರೂ ಪರಾಕ್ರಮದಿಂದ ಯುದ್ಧಮಾಡಲು ಕೈಲಾಗದೆ ತಮ್ಮ ಸ್ವಾಮಿಯನ್ನು ಯುದ್ಧಕ್ಕೆ ಕರೆತರುವರೋ ಅಂತಹ ಪಾಪಿಗಳು ಯುದ್ಧದಲ್ಲಿ ಮಡಿಯುವುದು ನಿಶ್ಚಯವು. ಅವರಿಗೆ ಸದ್ಗತಿಯು ಉಂಟಾಗಲಾರದು. ಅವರಿಗೆ ನರಕವೇ ಗತಿ. ಆದರೆ ಈ ವೀರಭದ್ರನನ್ನು ಅಂತಹ ಹೇಡಿಯೆಂದು ಮಾತ್ರ ಯಾವಾಗಲೂ ತಿಳಿಯಬೇಡ.

೨೫. ಯುದ್ಧದಲ್ಲಿ ಶಸ್ತ್ರಾಸ್ತ್ರಗಳಿಂದ ಶರೀರವು ಕತ್ತರಿಸಿಹೋಗಿದ್ದರೂ ಯಾರು ನಿರ್ಭಯರಾಗಿ ಯುದ್ಧಮಾಡುವರೋ ಅವರು ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ಸುಖವನ್ನು ಹೊಂದುವರು ಮತ್ತು ಕೀರ್ತಿವಂತರಾಗುವರು.

ಶೃಣ್ವಂತು ಮಮ ವಾಕ್ಯಾನಿ ದೇವಾ ಹರಿಪುರೋಗಮಾಃ ।
ಅತಾರಕಾಂ ಮಹೀಮದ್ಯ ಕರಿಷ್ಯೇ ಸ್ವಾಮಿವರ್ಜಿತಃ ॥ ೨೬ ॥

ಇತ್ಯುಕ್ತ್ವಾ ಪ್ರಮಥೈಸ್ಸಾರ್ಧಂ ವೀರಭದ್ರೋ ಹಿ ಶೂಲಧೃಕ್ ।
ವಿಚಿಂತ್ಯ ಮನಸಾ ಶಂಭುಂ ಯುಯುಧೇ ತಾರಕೇಣ ಹಿ ॥ ೨೭ ॥

ವೃಷಾರೂಢೈರನೇಕೈಶ್ಚ ತ್ರಿಶೂಲವರಧಾರಿಭಿಃ ।
ಮಹಾವೀರೈಸ್ತ್ರಿನೇತ್ರೈಶ್ಚ ಸ ರೇಜೇ ರಣಸಂಗತಃ ॥ ೨೮ ॥

ಕೋಲಾಹಲಂ ಪ್ರಕುರ್ವಂತೋ ನಿರ್ಭಯಾಶ್ಶತಶೋ ಗಣಾಃ ।
ವೀರಭದ್ರಂ ಪುರಸ್ಕೃತ್ಯ ಯುಯುಧುರ್ದಾನವೈಸ್ಸಹ ॥ ೨೯ ॥

ಅಸುರಾಸ್ತೇಽಪಿ ಯುಯುಧುಸ್ತಾರಕಾಸುರಜೀವಿನಃ ।
ಬಲೋತ್ಕಟಾ ಮಹಾವೀರಾ ಮರ್ದಯಂತೋ ಗಣಾನ್ ರುಷಾ ॥ ೩೦ ॥

---

೨೬. ಎಲೈ ವಿಷ್ಣ್ವಾದಿ ದೇವತೆಗಳಿರಾ, ನನ್ನ ಮಾತನ್ನು ಲಾಲಿಸಿ, ಇಂದು ಭೂಮಿಯಲ್ಲಿ ತಾರಕನು ಇಲ್ಲದಂತೆ ಮಾಡಿಬಿಡುವೆನು.

೨೭. ಈರೀತಿಯಾಗಿ ಹೇಳಿ ವೀರಭದ್ರನು ಶೂಲವನ್ನು ಹಿಡಿದು ಪ್ರಮಥ ಗಣಗಳೊಡನೆ ಯುದ್ಧಕ್ಕೆ ಸಿದ್ಧನಾಗಿ ಈಶ್ವರನನ್ನು ಮನಸ್ಸಿನಲ್ಲಿ ಧ್ಯಾನಮಾಡುತ್ತಾ ತಾರಕನೊಡನೆ ಯುದ್ಧಮಾಡಿದನು.

೨೮-೨೯. ಕೆಲವರು ಎತ್ತಿನಮೇಲೆ ಕುಳಿತುಕೊಂಡು ತ್ರಿಶೂಲವನ್ನು ಹಿಡಿದು ಯುದ್ಧಮಾಡುತ್ತಿದ್ದರು. ಮೂರು ಕಣ್ಣಿನ ಅನೇಕ ವೀರರು ದಾನವರೊಡನೆ ಯುದ್ಧಮಾಡುತ್ತಿದ್ದರು. ಇನ್ನೂ ಅನೇಕ ನೂರಾರು ವೀರರು ಕೋಲಾಹಲವನ್ನು ಮಾಡುತ್ತಾ ನಿರ್ಭಯರಾಗಿ ಯುದ್ಧಮಾಡುತ್ತಿದ್ದರು. ಇವರೆಲ್ಲರ ಮುಂದೆ ವೀರಭದ್ರನು ಯುದ್ಧಮಾಡುತ್ತಾ ಪ್ರಕಾಶಿಸಿದನು.

೩೦. ತಾರಕಾಸುರನ ಕಡೆಯವರೂ ಮಹಾಬಲಿಷ್ಠರು. ಅವರೆಲ್ಲರೂ ಮಹಾ ಪರಾಕ್ರಮದಿಂದ ದೇವತೆಗಳನ್ನು ನಾಶಮಾಡುತ್ತಾ ಕೋಪದಿಂದ ಯುದ ಮಾಡುತ್ತಿದ್ದರು.

ಪುನಃ ಪುನಶ್ಚೈವ ಬಭೂವ ಸಂಗರೋ
ಮಹೋತ್ಕಟೋ ದೈತ್ಯವರೈರ್ಗಣಾನಾಂ ।
ಪ್ರಹರ್ಷಮಾಣಾಃ ಪರಮಾಸ್ತ್ರಕೋವಿದಾ-
ಸ್ತದಾ ಗಣಾಸ್ತೇ ಜಯಿನೋ ಬಭೂವುಃ ॥ ೩೧ ॥

ಗಣೈರ್ಜಿತಾಸ್ತೇ ಪ್ರಬಲೈರಸುರಾ ವಿಮುಖಾ ರಣೇ ।
ಪಲಾಯನಪರಾ ಜಾತಾ ವ್ಯಥಿತಾ ವ್ಯಗ್ರಮಾನಸಾಃ ॥ ೩೨ ॥

ಏವಂ ಭ್ರಷ್ಟಂ ಸ್ವಸೈನ್ಯಂ ತದ್ದೃಷ್ಟ್ವಾ ತತ್ಪಾಲಕೋಽಸುರಃ ।
ತಾರಕೋ ಹಿ ರುಷಾವಿಷ್ಟೋ ಹಂತುಂ ದೇವಗಣಾನ್ ಯಯೌ ॥ ೩೩ ॥

ಭುಜಾನಾಮಯುತಂ ಕೃತ್ವಾ ಸಿಂಹಮಾರುಹ್ಯ ವೇಗತಃ ।
ಪಾತಯಾಮಾಸ ತಾನ್ ದೇವಾನ್ ಗಣಾಂಶ್ಚ ರಣಮೂರ್ಧನಿ ॥ ೩೪ ॥

ಸ ದೃಷ್ಟ್ವಾ ತಸ್ಯ ತತ್ಕರ್ಮ ವೀರಭದ್ರೋ ಗಣಾಗ್ರಣೀಃ ।
ಚಕಾರ ಸುಮಹತ್ಕೋಪಂ ತದ್ವಧಾಯ ಮಹಾಬಲೀ ॥ ೩೫ ॥

---

೩೧. ದೇವಾಸುರರು ಮಾಡುತ್ತಿದ್ದ ಆ ಯುದ್ಧದಬಿರಸು ಕ್ಷಣಕ್ಷಣಕ್ಕೂ ಹೆಚ್ಚುತ್ತಿತ್ತು. ದೇವತೆಗಳು ಪರಮಾಸ್ತ್ರಗಳನ್ನು ದಾನವರಮೇಲೆ ಪ್ರಯೋಗಮಾಡಿ ಅವರನ್ನು ಜಯಿಸಿ ಹರ್ಷಧ್ವನಿಮಾಡಿದರು.

೩೨. ಪ್ರಬಲರಾದ ದೇವತೆಗಳು ದಾನವರನ್ನು ಜಯಿಸಲು, ಅವರೆಲ್ಲರೂ ಬಹಳ ದುಃಖಗೊಂಡು ರಣರಂಗದಿಂದ ಹಿಮ್ಮೆಟ್ಟಿದರು.

೩೩-೩೪. ಈರೀತಿಯಾಗಿ ತನ್ನ ಸೈನ್ಯವು ಯುದ್ಧರಂಗದಿಂದ ಹಿಮ್ಮೆಟ್ಟುತ್ತಿರುವುದನ್ನು ನೋಡಿ ಅಧಿಪತಿಯಾದ ತಾರಕಾಸುರನು ಕೋಪಗೊಂಡು ದೇವಗಣಗಳನ್ನು ಕೊಲ್ಲಲು ಸಿಂಹದಮೇಲೆ ಕುಳಿತು ಹತ್ತುಸಾವಿರ ಕೈಗಳನ್ನು ಧರಿಸಿ ಯುದ್ಧಕ್ಕೆ ಹೊರಟು ಅನೇಕ ದೇವತೆಗಳನ್ನು ಕೊಂದನು.

೩೫-೩೬. ತಾರಕನು ದೇವತೆಗಳನ್ನು ಕೊಲ್ಲುತ್ತಿರುವುದನ್ನು ನೋಡಿ ಗಣಾಧಿಪತಿಯಾದ ವೀರಭದ್ರನು ಅತ್ಯಂತ ಕೋಪದಿಂದ ಮಹಾಬಲಶಾಲಿಯಾದ ಅವನನ್ನು

ಸ್ಮೃತ್ವಾ ಶಿವಪದಾಂಭೋಜಂ ಜಗ್ರಾಹ ತ್ರಿಶಿಖಂ ಪರಂ ।
ಜಜ್ವಲುಸ್ತೇಜಸಾ ತಸ್ಯ ದಿಶಃ ಸರ್ವಾ ನಭಸ್ತಥಾ ॥ ೩೬ ॥

ಏತಸ್ಮಿನ್ನಂತರೇ ಸ್ವಾಮೀ ವಾರಯಾಮಾಸ ತಂ ರಣಂ ।
ವೀರಬಾಹುಮುಖಾನ್ಸರ್ದ್ವೋ ಮಹಾಕೌತುಕದರ್ಶಕಃ ॥ ೩೭ ॥

ತದಾಜ್ಞಯಾ ವೀರಭದ್ರೋ ನಿವೃತ್ತೋಽಭೂದ್ರಣಾತ್ತದಾ ।
ಕೋಪಂ ಚಕ್ರೇ ಮಹಾವೀರಸ್ತಾರಕೋಽಸುರನಾಯಕಃ ॥ ೩೮ ॥

ಚಕಾರ ಬಾಣವೃಷ್ಟಿಂ ಚ ಸುರೋಪರಿ ತದಾಽಸುರಃ ।
ತಪ್ತೋಽಹ್ವಾಸೀತ್ಸುರಾನ್ಸರ್ದ್ವೋ ನಾನಾಸ್ತ್ರರಣಕೋವಿದಃ ॥ ೩೯ ॥

ಏವಂ ಕೃತ್ವಾ ಮಹತ್ಕರ್ಮ ತಾರಕೋಽಸುರಪಾಲಕಃ ।
ಸರ್ವೇಷಾಮಪಿ ದೇವಾನಾಮಶಕ್ಯೋ ಬಲಿನಾಂ ವರಃ ॥ ೪೦ ॥

ಏವಂ ನಿಹನ್ಯಮಾನಾಂಸ್ತಾನ್ ದೃಷ್ಟ್ವಾ ದೇವಾನ್ ಭಯಾಕುಲಾನ್ ।
ಕೋಪಂ ಕೃತ್ವಾ ರಣಾಯಾಶು ಸನ್ನದ್ಧೋಽಭವದಚ್ಯುತಃ ॥ ೪೧ ॥

---

ಕೊಲ್ಲಬೇಕೆಂದು ನಿಶ್ಚಯಿಸಿ, ಮನದಲ್ಲಿ ಈಶ್ವರನನ್ನು ಧ್ಯಾನಮಾಡುತ್ತಾ ತ್ರಿಶೂಲ ವನ್ನು ಕೈಯಲ್ಲಿ ಹಿಡಿದುಕೊಂಡನು. ಆಗ ಅವನ ತೇಜಸ್ಸಿನಿಂದ ದಶದಿಕ್ಕುಗಳೂ ನಡು ಗಿದುವು.

೩೭. ಅತ್ಯಾಶ್ಚರ್ಯದಿಂದ ನೋಡುತ್ತಿದ್ದ ಕುಮಾರಸ್ವಾಮಿಯು ಅಷ್ಟುಹೊತ್ತಿಗೆ ಸರಿಯಾಗಿ ಅಲ್ಲಿಗೆ ಬಂದು, ವೀರಭದ್ರನನ್ನೂ ವೀರಬಾಹುವೇ ಮೊದಲಾದ ಸೈನಿಕ ರನ್ನೂ ಯುದ್ಧವನ್ನು ನಿಲ್ಲಿಸಬೇಕೆಂದು ತಡೆದನು.

೩೮-೩೯. ಅದರಂತೆ ವೀರಭದ್ರನು ಯುದ್ಧವನ್ನು ನಿಲ್ಲಿಸಿದನು. ಆಗ ಅಸುರ ರಾಜನಾದ ತಾರಕನು ಬಹು ಕೋಪಗೊಂಡು ದೇವತೆಗಳಮೇಲೆ ಬಾಣಗಳ ಮಳೆ ಕರೆದನು. ಆದರಿಂದ ದೇವತೆಗಳು ಬಲುಸಂಕಟಪಟ್ಟರು.

೪೦. ಈರೀತಿಯಾಗಿ ಮಹಾಬಲಶಾಲಿಯಾದ ಆ ತಾರಕನು ದೊಡ್ಡ ಯುದ್ಧ ವನ್ನು ಮಾಡಿದನು. ದೇವತೆಗಳು ಮಾತ್ರ ಇವನನ್ನು ಜಯಿಸಲಾಗಲಿಲ್ಲ.

೪೧-೪೨. ರಣರಂಗದಲ್ಲಿ ಅನೇಕ ದೇವತೆಗಳು ಮೃತರಾದರು. ಮತ್ತೆ ಕೆಲವರು ಭಯಗೊಂಡು ಹಿಮ್ಮೆಟ್ಟಿದರು. ಇದನ್ನು ನೋಡಿ ವಿಷ್ಣುವು ಅತ್ಯಂತ

ಚಕ್ರಂ ಸುದರ್ಶನಂ ಶಾರ್ಙ್ಗಂ ಧನುರಾದಾಯ ಸಾಯುಧಃ ।
ಅಭ್ಯುದ್ಯಯೌ ಮಹಾದೈತ್ಯಂ ರಣಾಯ ಭಗವಾನ್ ಹರಿಃ ॥ ೪೨ ॥

ತತಸ್ಸಮಭವದ್ಯುದ್ಧಂ ಹರಿತಾರಕಯೋರ್ಮಹತ್ ।
ಲೋಮಹರ್ಷಣಮತ್ಯುಗ್ರಂ ಸರ್ವೇಷಾಂ ಪಶ್ಯತಾಂ ಮುನೇ ॥ ೪೩ ॥

ಗದಾಮುದ್ಯಮ್ಯ ಸ ಹರಿರ್ಜಘಾನಾಸುರಮೋಜಸಾ ।
ದ್ವಿಧಾ ಚಕಾರ ತಾಂ ದೈತ್ಯಸ್ತ್ರಿಶಿಖೇನ ಮಹಾಬಲೀ ॥ ೪೪ ॥

ತತಸ್ಸ ಕ್ರುದ್ಧೋ ಭಗವಾನ್ ದೇವಾನಾಮಭಯಂಕರಃ ।
ಶಾರ್ಙ್ಗಚ್ಯುತೈಶ್ಶರವ್ಯೂಹೈರ್ಜಘಾನಾಸುರನಾಯಕಂ ॥ ೪೫ ॥

ಸೋಽಪಿ ದೈತ್ಯೋ ಮಹಾವೀರಸ್ತಾರಕಃ ಪರವೀರಹಾ ।
ಚಿಚ್ಛೇದ ಸಕಲಾನ್ಬಾಣಾನ್ ಸ್ವಶರೈರ್ನಿಶಿತೈದ್ರುತಂ ॥ ೪೬ ॥

ಅಥ ಶಕ್ತ್ಯಾ ಜಘಾನಾಶು ಮುರಾರಿಂ ತಾರಕಾಸುರಃ ।
ಭೂಮೌ ಪಪಾತ ಸ ಹರಿಸ್ತತ್ಪ್ರಹಾರೇಣ ಮೂರ್ಛಿತಃ ॥ ೪೭ ॥

---

ಕೋಪಗೊಂಡು ಸುದರ್ಶನವೆಂಬ ಚಕ್ರವನ್ನೂ, ಶಾರ್ಙ್ಗವೆಂಬ ಧನುಸ್ಸನ್ನೂ ಹಿಡಿದು ತಾರಕನೊಡನೆ ಯುದ್ಧಮಾಡಲು ಮುನ್ನುಗ್ಗಿದನು.

೪೩. ಆಗ ವಿಷ್ಣುತಾರಕರಿಗೆ ಭಯಂಕರವಾದ ಯುದ್ಧವು ಜರುಗಿತು. ನೋಡುವವರಿಗೆ ಭಯದಿಂದ ರೋಮಾಂಚನವಾಗುತ್ತಿತ್ತು.

೪೪-೪೫. ವಿಷ್ಣುವು ಜಾಗ್ರತೆಯಾಗಿ ಗದೆಯಿಂದ ತಾರಕನನ್ನು ಹೊಡೆದನು. ಮಹಾಬಲಾಶಾಲಿಯಾದ ತಾರಕನು ತ್ರಿಶೂಲದಿಂದ ಆ ಗದೆಯನ್ನು ಎರಡು ಭಾಗವಾಗಿ ಸೀಳಿದನು. ಆಗ ವಿಷ್ಣುವು ದಾನವರಿಗೆ ಭಯವುಂಟಾಗುವಂತೆ ತಾರಕನ ಮೇಲೆ ಅನೇಕ ಬಾಣಗಳನ್ನು ಪ್ರಯೋಗಿಸಿದನು.

೪೬-೪೭. ಮಹಾವೀರನಾದ ಆ ತಾರಕನು ತನ್ನ ಬಾಣಗಳಿಂದ ಆ ವಿಷ್ಣುವು ಪ್ರಯೋಗಿಸಿದ ಬಾಣಗಳನ್ನು ತುಂಡುತುಂಡಾಗಿ ಕತ್ತರಿಸಿ, ಜಾಗ್ರತೆಯಾಗಿ ಶಕ್ತ್ಯಾಯುಧದಿಂದ ವಿಷ್ಣುವನ್ನು ಹೊಡೆದನು. ಆ ಏಟಿನಿಂದ ವಿಷ್ಣುವು ಮೂರ್ಛೆಗೊಂಡು ಭೂಮಿಯಲ್ಲಿ ಬಿದ್ದನು-

ಜಗ್ರಾಹ ಸ ರುಷಾ ಚಕ್ರಮುತ್ಥಿತಃ ಕ್ಷಣತೋಽಚ್ಯುತಃ ।
ಸಿಂಹನಾದಂ ಮಹತ್ಕೃತ್ವಾ ಜ್ವಲಜ್ಜ್ವಾಲಾಸಮಾಕುಲಂ ॥ ೪೮ ॥

ತೇನ ತಂ ಚ ಜಘಾನಾಸೌ ದೈತ್ಯಾನಾಮಧಿಪಂ ಹರಿಃ ।
ತತ್ಪ್ರಹಾರೇಣ ಮಹತಾ ವ್ಯಥಿತೋ ಪ್ಯಪತದ್ಭುವಿ ॥ ೪೯ ॥

ಪುನಶ್ಚೋತ್ಥಾಯ ದೈತ್ಯೇಂದ್ರಸ್ತಾರಕೋಽಸುರನಾಯಕಃ ।
ಚಿಚ್ಛೇದ ತ್ವರಿತಂ ಚಕ್ರಂ ಸ್ವಶಕ್ತ್ಯಾತಿಬಲಾನ್ವಿತಃ ॥ ೫೦ ॥

ಪುನಸ್ತಯಾ ಮಹಾಶಕ್ತ್ಯಾ ಜಘಾನಾಮರವಲ್ಲಭಂ ।
ಅಚ್ಯುತೋಽಪಿ ಮಹಾವೀರೋ ನಂದಕೇನ ಜಘಾನ ತಂ ॥ ೫೧ ॥

ಏವಮನ್ಯೋನ್ಯಮಸುರೋ ವಿಷ್ಣುಶ್ಚ ಬಲವಾನುಭೌ ।
ಯುಯುಧಾತೇ ರಣೇ ಭೂರಿ ತತ್ರಾಕ್ಷತಬಲೌ ಮುನೇ ॥ ೫೨ ॥

ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಕುಮಾರಖಂಡೇ
ದೇವದೈತ್ಯಸಾಮಾನ್ಯಯುದ್ಧವರ್ಣನಂ ನಾಮ
ಅಷ್ಟಮೋಽಧ್ಯಾಯಃ.

---

೪೮-೪೯. ಸ್ವಲ್ಪ ಹೊತ್ತಿನಲ್ಲಿಯೇ ವಿಷ್ಣುವು ಚೇತರಿಸಿಕೊಂಡು ಮೇಲಕ್ಕೆದ್ದು ಚಕ್ರಾಯುಧವನ್ನು ಕೈಯಲ್ಲಿ ಹಿಡಿದು ದೊಡ್ಡದಾಗಿ ಸಿಂಹನಾದವನ್ನು ಮಾಡಿದನು. ಕಿಡಿಗಳನ್ನು ಕಾರುತ್ತಿರುವ ಆ ಚಕ್ರದಿಂದ ತಾರಕನನ್ನು ಹೊಡೆಯಲು ಅದರ ಬಲವಾದ ಏಟಿನಿಂದ ತಾರಕನು ಗಾಯಗೊಂಡು ಕೆಳಗುರುಳಿದನು.

೫೦-೫೧. ಪುನಃ ಸ್ವಲ್ಪಹೊತ್ತಿನಲ್ಲಿಯೇ ಅಸುರರಾಜನಾದ ಆ ತಾರಕನು ಮೂರ್ಛೆಯಿಂದ ಎದ್ದು ಶಕ್ತ್ಯಾಯುಧದಿಂದ ಆ ಚಕ್ರವನ್ನು ಕತ್ತರಿಸಿದನು. ಅದೇ ಶಕ್ತ್ಯಾಯುಧದಿಂದಲೇ ವಿಷ್ಣುವನ್ನು ಹೊಡೆದನು. ವಿಷ್ಣುವೂ ಸಹ ನಂದಕವೆಂಬ ಆಯುಧದಿಂದ ಆ ತಾರಕನನ್ನು ಹೊಡೆದನು.

೫೨. ಎಲೈ ನಾರದನೇ, ಈ ರೀತಿಯಾಗಿ ವಿಷ್ಣುವಿಗೂ ತಾರಕನಿಗೂ ಭಯಂಕರ ಯುದ್ಧವು ಜರುಗಿತು. ಇಬ್ಬರೂ ಬಲಿಷ್ಠರಾದುದರಿಂದ ಒಬ್ಬರಾದರೂ ಸೋಲಲಿಲ್ಲ.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ರುದ್ರಸಂಹಿತೆಯ ಕುಮಾರಖಂಡದಲ್ಲಿ
ದೇವದೈತ್ಯಸಾಮಾನ್ಯಯುದ್ಧವರ್ಣನವೆಂಬ ಎಂಟನೆಯ ಅಧ್ಯಾಯವು
ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವ ಮಹಾಪುರಾಣೇ

## ರುದ್ರಸಂಹಿತಾಯಾಂ ಕುಮಾರಖಂಡೇ

## ನವಮೋಽಧ್ಯಾಯಃ



॥ ಬ್ರಹ್ಮೋವಾಚ ॥

ದೇವದೇವ ಗುಹ ಸ್ವಾಮಿನ್ ಶಾಂಕರೇ ಪಾರ್ವತೀಸುತ ।
ನ ಶೋಭತೇ ರಣೋ ವಿಷ್ಣುತಾರಕಾಸುರಯೋರ್ವೃಥಾ ॥ ೧ ॥

ವಿಷ್ಣುನಾ ನ ಹಿ ವಧ್ಯೋಽಸೌ ತಾರಕೋ ಬಲವಾನತಿ ।
ಮಯಾ ದತ್ತವರಸ್ತಸ್ಮಾತ್ಸತ್ಯಂ ಸತ್ಯಂ ವದಾಮ್ಯಹಂ ॥ ೨ ॥

---

### ಒಂಭತ್ತನೆಯ ಅಧ್ಯಾಯವು.

೧-೨. ಬ್ರಹ್ಮನು ಹೇಳಿದನು:—ಎಲೈ ಸ್ವಾಮಿಯಾದ ಗುಹನೇ, ನೀನು ಪಾರ್ವತೀಪರಮೇಶ್ವರರ ಪುತ್ರನು. ಈಗ ವಿಷ್ಣು ಮತ್ತು ತಾರಕಾಸುರರಿಗೆ ಯುದ್ಧವು ನಡೆಯುತ್ತಿರುವುದಷ್ಟೇ? ಅದು ಸರಿಯಾದುದಲ್ಲ. ಏಕೆಂದರೆ, ತಾರಕಾಸುರನು ವಿಷ್ಣುವಿಗಿಂತಲೂ ಬಲಶಾಲಿಯು. ನಾನು,—ವಿಷ್ಣುವಿನಿಂದ ನಿನಗೆ ಮರಣವಿಲ್ಲವೆಂದು ಅವನಿಗೆ ವರವನ್ನು ಕೊಟ್ಟಿರುವೆನು. ಆದುದರಿಂದ ಅವರಿಬ್ಬರೂ ಯುದ್ಧ ಮಾಡುತ್ತಿರುವುದು ವ್ಯರ್ಥವೇ ಸರಿ.

ನಾನ್ಯೋ ಹಂತಾsಸ್ಯ ಪಾಪಸ್ಯ ತ್ವಾಂ ವಿನಾ ಪಾರ್ವತೀಸುತ ।
ತಸ್ಮಾತ್ತ್ವಯಾ ಹಿ ಕರ್ತವ್ಯಂ ವಚನಂ ಮೇ ಮಹಾಪ್ರಭೋ ॥ ೩ ॥

ಸನ್ನದ್ಧೋ ಭವ ದೈತ್ಯಸ್ಯ ವಧಾಯಾಶು ಪರಂತಪ ।
ತದ್ವಧಾರ್ಥಂ ಸಮುತ್ಪನ್ನಃ ಶಂಕರಾತ್ತ್ವಂ ಶಿವಾಸುತ ॥ ೪ ॥

ರಕ್ಷ ರಕ್ಷ ಮಹಾವೀರ ತ್ರಿದಶಾನ್ವ್ಯಥಿತಾನ್ರಣೇ ।
ನ ಬಾಲಸ್ತ್ವಂ ಯುವಾ ನೈವ ಕಿಂತು ಸರ್ವೇಶ್ವರಃ ಪ್ರಭುಃ ॥ ೫ ॥

ಶಕ್ರಂ ಪಶ್ಯ ತಥಾ ವಿಷ್ಣುಂ ವ್ಯಾಕುಲಂ ಚ ಸುರಾನ್ ರಣೇ ।
ಏವಂ ಜಹಿ ಮಹಾದೈತ್ಯಂ ತ್ರೈಲೋಕ್ಯಂ ಸುಖಿತಂ ಕುರು ॥ ೬ ॥

ಅನೇನ ವಿಜಿತಶ್ಚೇಂದ್ರೋ ಲೋಕಪಾಲೈಃ ಪುರಾ ಸಹ ।
ವಿಷ್ಣುಶ್ಚಾಪಿ ಮಹಾವೀರೋ ತರ್ಜಿತಸ್ತಪಸೋ ಬಲಾತ್ ॥ ೭ ॥

---

೩-೪. ಎಲೈ ಪಾರ್ವತೀಪುತ್ರನೇ, ಈ ಪಾಪಿಯಾದ ತಾರಕಾಸುರನನ್ನು ಕೊಲ್ಲಲು ನಿನ್ನನ್ನು ಬಿಟ್ಟರೆ ಮತ್ತೆ ಯಾರೂ ಇಲ್ಲ. ನಿನ್ನ ಉತ್ಪತ್ತಿಯೇ ಈ ತಾರಕನ ವಧೆಗೋಸ್ಕರವಾಗಿ. ಶತ್ರು ನಿಷೂದನನಾದ ನೀನು ಶಂಕರನ ಮಗನು. ಆದುದ ರಿಂದ ತಾರಕನನ್ನು ವಧೆಮಾಡಲು ಸಿದ್ಧನಾಗು.

೫-೬. ನೀನು ಮಹಾವೀರನು. ಈಗ ಒದಗಿರುವ ದುಃಖದಿಂದ ನಮ್ಮನ್ನು ಕಾಪಾಡು. ನೀನೇನು ಬಾಲಕನಲ್ಲ, ಅಥವಾ ತರುಣನಲ್ಲ, ಸರ್ವೇಶ್ವರನಾದ ಸ್ವಾಮಿಯೇ ನೀನು. ರಣಾಂಗಣದಲ್ಲಿ ದುಃಖಿಸುತ್ತಿರುವ ಇಂದ್ರ, ವಿಷ್ಣು ಮೊದಲಾದ ದೇವತೆಗಳನ್ನು ನೋಡು. ಆ ದೈತ್ಯನನ್ನು ಕೊಂದು ಮೂರು ಲೋಕದವರನ್ನೂ ಸುಖಿಗಳನ್ನಾಗಿ ಮಾಡು.

೭-೮. ಹಿಂದೆಯೇ ದುರಾತ್ಮನಾದ ತಾರಕನು ಇಂದ್ರನನ್ನೂ ಅಷ್ಟದಿಕ್ಪಾಲಕ ರನ್ನೂ ಸೋಲಿಸಿರುವನು. ತನ್ನ ತಪಸ್ಸಿನ ಬಲದಿಂದ ಮಹಾವೀರನಾದ ವಿಷ್ಣು ವನ್ನೂ ಸಹ ಬೆದರಿಸಿರುತ್ತಾನೆ. ಅಷ್ಟೇಕೆ? ಮೂರು ಲೋಕವನ್ನೂ ಜಯಿಸಿರು ವನು. ಈಗ ನೀನು ಯುದ್ಧಕ್ಕೆ ಹೊರಟಿದ್ದರಿಂದ ನಿನ್ನ ಬೆಂಬಲವನ್ನು ನಂಬಿ

ತ್ರೈಲೋಕ್ಯಂ ನಿರ್ಜಿತಂ ಸರ್ವಮಸುರೇಣ ದುರಾತ್ಮನಾ ।
ಇದಾನೀಂ ತವ ಸಾನ್ನಿಧ್ಯಾತ್ಪುನರ್ಯುದ್ಧಂ ಕೃತಂ ಚ ತೈಃ ॥ ೮ ॥

ತಸ್ಮಾತ್ತ್ವಯಾ ನಿಹಂತವ್ಯಸ್ತಾರಕಃ ಪಾಪಪೂರುಷಃ ।
ಅನ್ಯವಧ್ಯೋ ನ ಚೈವಾಯಂ ಮದ್ವರಾಚ್ಛಂಕರಾತ್ಮಜ ॥ ೯ ॥

॥ ಬ್ರಹ್ಮೋವಾಚ ॥

ಇತಿ ಶ್ರುತ್ವಾ ಮಮ ವಚಃ ಕುಮಾರಃ ಶಂಕರಾತ್ಮಜಃ ।
ವಿಜಹಾಸ ಪ್ರಸನ್ನಾತ್ಮಾ ತಥಾಸ್ತ್ವಿತಿ ವಚೋಽಬ್ರವೀತ್ ॥ ೧೦ ॥

ವಿನಿಶ್ಚಿತ್ಯಾಸುರವಧಂ ಶಾಂಕರಿಸ್ಸ ಮಹಾಪ್ರಭುಃ ।
ವಿಮಾನಾದವತೀರ್ಯಾಥ ಪದಾತಿಭಿರವತ್ತದಾ ॥ ೧೧ ॥

ಪದ್ಭ್ಯಾಂ ತದಾಸೌ ಪರಿಧಾವಮಾನೋ
ರೇಜೇಽತಿವೀರಃ ಶಿವಜಃ ಕುಮಾರಃ ।
ಕರೇ ಸಮಾದಾಯ ಮಹಾಪ್ರಭಾಂ ತಾಂ
ಶಕ್ತಿಂ ಮಹೋಲ್ಕಾಮಿವ ದೀಪ್ತಿದೀಪ್ತಾಂ ॥ ೧೨ ॥

---

ಇಂದ್ರ, ವಿಷ್ಣು ಮುಂತಾದವರು ಯುದ್ಧಕ್ಕೆ ಬಂದರೇ ಹೊರತು, ನೀನಿಲ್ಲದಿದ್ದರೆ ಬರುತ್ತಿರಲಿಲ್ಲ.

೯. ಆದುದರಿಂದ ಶಿವಸುತನಾದ ನೀನೇ ಆ ಪಾಪಿಯಾದ ತಾರಕಾಸುರನನ್ನು ಕೊಲ್ಲಬೇಕು. ಏಕೆಂದರೆ ಬೇರೆ ಯಾರಿಂದಲೂ ಮರಣವಾಗದಿರಲೆಂದು ನಾನು ಹಿಂದೆ ವರವನ್ನು ಕೊಟ್ಟಿರುವೆನು.

೧೦. ಬ್ರಹ್ಮನು ಹೇಳಿದನು:—ಶಂಕರ ಸುತನಾದ ಷಣ್ಮುಖನು ನಾನಾಡಿದ ಮಾತುಗಳನ್ನು ಕೇಳಿ ಪ್ರಸನ್ನನಾಗಿ ನಗುತ್ತಾ ನಿನ್ನ ಇಷ್ಟದಂತೆಯೇ ಆಗಲಿ ಎಂದು ಹೇಳಿದನು.

೧೧. ಮಹಾಪ್ರಭುವಾದ ಷಣ್ಮುಖನು ತಾರಕನನ್ನು ಕೊಲ್ಲಬೇಕೆಂದು ನಿಶ್ಚಯ ಮಾಡಿಕೊಂಡು ವಿಮಾನದಿಂದ ಇಳಿದು ಕಾಲುನಡಗೆಯಲ್ಲಿ ಹೊರಟನು.

೧೨. ಉರಿಯುತ್ತಿರುವ ಕೊಳ್ಳಿಯಂತೆ ಅತಿ ಪ್ರಕಾಶಮಾನವಾದ ಶಕ್ತ್ಯಾಯುಧವನ್ನು ಕೈಯಲ್ಲಿ ಹಿಡಿದುಕೊಂಡು, ಕಾಲುನಡಗೆಯಿಂದಲೇ ಯುದ್ಧಕ್ಕೆ ಹೊರಟನು. ಆದರೂ ಮಹಾಪರಾಕ್ರಮಿಯಾದ ಆ ಶಿವಕುಮಾರನು ಅಪಾರವಾದ ತೇಜಸ್ಸಿನಿಂದ ಬೆಳಗುತ್ತಿದ್ದನು.

ದೃಷ್ಟ್ವಾ ತಮಾಯಾಂತಮತಿಪ್ರಚಂಡ-
ಮವ್ಯಾಕುಲಂ ಷಣ್ಮುಖಮಪ್ರಮೇಯಂ ।
ದೈತ್ಯೋ ಬಭಾಷೇಽಸುರಸತ್ತಮಾನ್ಸ
ಕುಮಾರ ಏಷ ದ್ವಿಷತಾಂ ಪ್ರಹಂತಾ ॥ ೧೩ ॥

ಅನೇನ ಸಾಕಂ ಹ್ಯಹಮೇಕವೀರೋ
ಯೋತ್ಸ್ಯೇ ಚ ಸರ್ವಾನಹಮೇವ ವೀರಾನ್ ।
ಗಣಾಂಶ್ಚ ಸರ್ವಾನಪಿ ಘಾತಯಾಮಿ
ಸಲೋಕಪಾಲಾನ್ ಹರಿನಾಯಕಾಂಶ್ಚ ॥ ೧೪ ॥

ಇತ್ಯೇವಮುಕ್ತ್ವಾ ಸ ತದಾ ಮಹಾಬಲಃ
ಕುಮಾರಮುದ್ದಿಶ್ಯ ಯಯೌ ಚ ಯೋದ್ಧುಂ ।
ಜಗ್ರಾಹ ಶಕ್ತಿಂ ಪರಮಾದ್ಭುತಾಂ ಚ
ಸ ತಾರಕೋ ದೇವವರಾನ್ ಬಭಾಷೇ ॥ ೧೫ ॥

---

೧೩. ಯುದ್ಧಕ್ಕೆ ಹೊರಟ ಆ ಕುಮಾರಸ್ವಾಮಿಯು ಶತ್ರುಗಳಿಗೆ ಅತಿ ಭಯಂಕರನಾಗಿ ಕಾಣುತ್ತಿದ್ದನು. ಬಾಲಕನಾಗಿದ್ದರೂ ಯುದ್ಧಕ್ಕೆ ಹೆದರದೆ ನಿರ್ಭಯನಾಗಿದ್ದನು. ಇಂತಹ ವೀರನಾದ ಕುಮಾರನು ಯುದ್ಧಸನ್ನದ್ಧನಾಗಿ ತನ್ನೆದುರಾಗಿ ಬರುತ್ತಿರುವುದನ್ನು ತಾರಕಾಸುರನು ನೋಡಿ ತನ್ನ ಕಡೆಯವರಾದ ದೈತ್ಯರಿಗಿಂತೆಂದನು.

೧೪. ಎಲೈ ದಾನವರೇ, ಅಸಹಾಯಶೂರನಾದ ನಾನೊಬ್ಬನೇ ಈ ಕುಮಾರನೊಡನೆ ಯುದ್ಧಮಾಡುವೆನು. ವೀರರನ್ನೆಲ್ಲಾ ಕೊಂದು ಗಣಗಳನ್ನೆಲ್ಲಾ ಘಾಯಗೊಳಿಸುವೆನು. ಅಷ್ಟದಿಕ್ಪಾಲಕರನ್ನೂ, ವಿಷ್ಣುವೇ ಮೊದಲಾದ ಪ್ರಧಾನರನ್ನೂ ಕೊಲ್ಲುವೆನು.

೧೫-೧೬. ಹೀಗೆ ಹೇಳಿ ಮಹಾಬಲಶಾಲಿಯಾದ ಆ ತಾರಕನು ಯುದ್ಧಮಾಡಲು ಅದ್ಭುತವಾದ ಶಕ್ತ್ಯಾಯುಧವನ್ನು ಕೈಯಲ್ಲಿ ಹಿಡಿದು, ಕುಮಾರನಿದ್ದಲ್ಲಿಗೆ ಹೋಗಿ ದೇವತೆಗಳನ್ನು ಕುರಿತು, ಎಲೈ ದೇವತೆಗಳಿರಾ, ಕೇವಲ ಬಾಲಕನಾದ ಷಣ್ಮುಖ

॥ ತಾರಕ ಉವಾಚ ॥

ಕುಮಾರೋ ಮೇಽಗ್ರತಶ್ಚಾದ್ಯ ಭವದ್ಭಿಶ್ಚ ಕಥಂ ಕೃತಃ ।
ಯೂಯಂ ಗತತ್ರಪಾ ದೇವಾ ವಿಶೇಷಾಚ್ಛಕ್ರಮೇಶ್ವರೌ ॥ ೧೬ ॥

ಪುರೈತಾಭ್ಯಾಂ ಕೃತಂ ಕರ್ಮ ವಿರುದ್ಧಂ ವೇದಮಾರ್ಗತಃ ।
ತಚ್ಛೃಣುಧ್ವಂ ಮಯಾ ಪ್ರೋಕ್ತಂ ವರ್ಣಯಾಮಿ ವಿಶೇಷತಃ ॥ ೧೭ ॥

ತತ್ರ ವಿಷ್ಣುಶ್ಛಲೀ ದೋಷೀ ಹ್ಯವಿವೇಕೀ ವಿಶೇಷತಃ ।
ಬಲಿರ್ಯೇನ ಪುರಾ ಬದ್ಧಶ್ಛಲಮಾಶ್ರಿತ್ಯ ಪಾಪತಃ ॥ ೧೮ ॥

ತೇನೈವ ಯತ್ನತಃ ಪೂರ್ವಮಸುರೌ ಮಧುಕೈಟಭೌ ।
ಶಿರೋಹೀನೌ ಕೃತೌ ಧೌರ್ತ್ಯಾದ್ವೇದಮಾರ್ಗೋ ವಿವರ್ಜಿತಃ ॥ ೧೯ ॥

ಮೋಹಿನೀರೂಪತೋಽನೇನ ಪಂಕ್ತಿಭೇದಃ ಕೃತೋ ಹಿ ವೈ ।
ದೇವಾಸುರಸುಧಾಪಾನೇ ವೇದಮಾರ್ಗೋ ವಿಗರ್ಹಿತಃ ॥ ೨೦ ॥

---

ನನ್ನ ನನ್ನೊಡನೆ ಯುದ್ಧಮಾಡಲು ಮುಂದೆ ತಂದು ನಿಲ್ಲಿಸಿರುವಿರಲ್ಲಾ, ನಿಮಗೆ ನಾಚಿಕೆಯಾಗುವುದಿಲ್ಲವೇ ? ನಿಮ್ಮ ಶೂರತನವೆಲ್ಲಿಹೋಯಿತು? ಇಂದ್ರನಿಗೂ ಈಶ್ವರನಿಗೂ ತಿಳುವಳಿಕೆ ಇಲ್ಲದೆ ಹೋಯಿತೇ ?

೧೭. ಹಿಂದೆ ಈ ವಿಷ್ಣುವೂ ಮತ್ತು ಶಿವನೂ ವೇದಮಾರ್ಗಕ್ಕೆ ವಿರುದ್ಧವಾದ ಕೆಲಸವನ್ನು ಮಾಡಿದರು. ಅದೇ ವಿಷಯವನ್ನು ಚೆನ್ನಾಗಿ ತಿಳಿಸುವೆನು ಕೇಳಿರಿ.

೧೮-೧೯. ಅವರಿಬ್ಬರಲ್ಲಿ ವಿಷ್ಣುವು ಮೋಸಮಾಡುವವನು. ದೋಷಿಯೂ ಅವಿವೇಕಿಯೂ ಆಗಿರುವವನು. ಹಿಂದೆ ಮೋಸದಿಂದ ಬಲಿಯನ್ನು ನಿಗ್ರಹಿಸಿದನು. ಅದು ಮಹಾಪಾಪಕೆಲಸವು. ಮಧುಕೈಟಭರೆಂಬ ಅಸುರರನ್ನು ಧೂರ್ತತನದಿಂದ ಕೊಂದನು. ಈ ಕಾರ್ಯವೆಲ್ಲವನ್ನೂ ನ್ಯಾಯವಾಗಿ ಮಾಡಲಿಲ್ಲವಾದುದರಿಂದ ವೇದ ವಿರುದ್ಧವಾದುದು.

೨೦-೨೧. ಅಲ್ಲದೆ ಪೂರ್ವದಲ್ಲಿ ದೇವಾಸುರರಿಗೆ ಅಮೃತವನ್ನು ಹಂಚುವಾಗ ಈ ವಿಷ್ಣುವು ಮೋಹಿನಿಯ ರೂಪವನ್ನು ಧರಿಸಿ ಪಂಕ್ತಿಭೇದವನ್ನು ಮಾಡಿದನು. ಇದು ವೇದವಿರುದ್ಧವಾದುದಲ್ಲವೇ ? ರಾಮನಾಗಿ ಅವತರಿಸಿ ತಾಟಕೆ ಎಂಬ ಸ್ತ್ರೀಯನ್ನು ಕೊಂದನು. ಅವನಿಗೆ ಸ್ತ್ರೀಹತ್ಯಾ ದೋಷವು ಬಂದಿತು. ಎದುರಿಗೆ

ರಾಮೋ ಭೂತ್ವಾ ಹತಾ ನಾರೀ ವಾಲೀ ವಿಧ್ವಂಸಿತೋ ಹಿ ಸಃ ।
ಪುನರ್ವೈಶ್ರವಣೋ ವಿಪ್ರೋ ಹತೋ ನೀತಿರ್ಹತಾ ಶ್ರುತೇಃ ॥ ೨೧ ॥

ಪಾಪಂ ವಿನಾ ಸ್ವಕೀಯಾ ಸ್ತ್ರೀ ತ್ಯಕ್ತಾ ಪಾಪರತೇನ ಯತ್ ।
ತತ್ರಾಪಿ ಶ್ರುತಿಮಾರ್ಗಶ್ಚ ಧ್ವಂಸಿತಸ್ಸ್ವಾರ್ಥಹೇತವೇ ॥ ೨೨ ॥

ಸ್ವಜನನ್ಯಾಶ್ಶಿರಶ್ಛಿನ್ನಮವತಾರೇ ರಸಾಖ್ಯಕೇ ।
ಗುರುಪುತ್ರಾಪಮಾನಶ್ಚ ಕೃತೋಽನೇನ ದುರಾತ್ಮನಾ ॥ ೨೩ ॥

ಕೃಷ್ಣೋ ಭೂತ್ವಾನ್ಯನಾರ್ಯಶ್ಚ ದೂಷಿತಾಃ ಕುಲಧರ್ಮತಃ ।
ಶ್ರುತಿಮಾರ್ಗಂ ಪರಿತ್ಯಜ್ಯ ಸ್ವವಿವಾಹಾಃ ಕೃತಾಸ್ತಥಾ ॥ ೨೪ ॥

ಪುನಶ್ಚ ವೇದಮಾರ್ಗೋ ಹಿ ನಿಂದಿತೋ ನವಮೇ ಭವೇ ।
ಸ್ಥಾಪಿತಂ ನಾಸ್ತಿಕಮತಂ ವೇದಮಾರ್ಗವಿರೋಧಕೃತ್ ॥ ೨೫ ॥

---

ನಿಂತು ಯುದ್ಧಮಾಡದೆ ಮರೆಯಲ್ಲಿ ನಿಂತು ವಾಲಿಯನ್ನು ಸಂಹರಿಸಿದನು. ಇದು ಮೋಸಮಾಡಿದುದರಿಂದ ವೇದವಿರುದ್ಧವು. ವೈಶ್ರವಣನೆಂಬ ಬ್ರಾಹ್ಮಣನನ್ನು ಕೊಂದು ನೀತಿಯನ್ನು ಹಾಳುಮಾಡಿದನು. ಬ್ರಹ್ಮಹತ್ಯಾ-ದೋಷದಿಂದ ಇದೂ ಶ್ರುತಿವಿರುದ್ಧವಾದುದು.

೨೨-೨೩. ಈ ದುರಾತ್ಮನು ತನ್ನ ಪತ್ನಿಯಾದ ಸೀತೆಯಲ್ಲಿ ಯಾವ ದೋಷವೂ ಇಲ್ಲದಿದ್ದರೂ ಅವಳನ್ನು ಬಿಟ್ಟುಬಿಟ್ಟನು. ಸ್ವಪ್ರಯೋಜನಕ್ಕೋಸ್ಕರವಾಗಿ ಶ್ರುತಿಮಾರ್ಗವಿರುದ್ಧಾಚರಣೆಯನ್ನು ಮಾಡಿದನು. ತನ್ನ ಆರನೆಯ ಅವತಾರವಾದ ಪರಶುರಾಮನ ಅವತಾರದಲ್ಲಿ ತನ್ನ ತಾಯಿಯ ತಲೆಯನ್ನೇ ಕತ್ತರಿಸಿದನು. ಗುರುಪುತ್ರನಿಗೆ ಅವಮಾನಮಾಡಿ ವೇದವಿರುದ್ಧವಾಗಿ ಆಚರಿಸಿದನು.

೨೪-೨೫ ಇದೆಲ್ಲವೂ ರಾಮಾವತಾರದ ವಿಷಯವು. ಇನ್ನು ಕೃಷ್ಣಾವತಾರದಲ್ಲಿ ಪರಸ್ತ್ರೀಯರನ್ನೆಲ್ಲಾ ವಿವಾಹಮಾಡಿಕೊಂಡನು. ಇದು ಕುಲಧರ್ಮಕ್ಕೆ ವಿರುದ್ಧವೂ ಅಲ್ಲದೆ ಶ್ರುತಿಮಾರ್ಗ ದೂಷಿತವಾದುದು. ಅನಂತರ ಒಂಭತ್ತನೆಯ ಬೌದ್ಧಾವತಾರದಲ್ಲಿ ನಾಸ್ತಿಕಮತವನ್ನು ಸ್ಥಾಪನೆಮಾಡಿ ವೇದಮಾರ್ಗವನ್ನು ನಿಂದಿಸಿದನು.

ಏವಂ ಯೇನ ಕೃತಂ ಪಾಪಂ ವೇದಮಾರ್ಗಂ ವಿಸೃಜ್ಯ ವೈ ।
ಸ ಕಥಂ ವಿಜಯೇದ್ಯುದ್ಧೇ ಭವೇದ್ಧರ್ಮವತಾಂ ವರಃ ॥ ೨೬ ॥

ಭ್ರಾತಾ ಜ್ಯೇಷ್ಠಶ್ಚ ಯಸ್ತಸ್ಯ ಶಕ್ರಃ ಪಾಪೀ ಮಹಾನ್ಮತಃ ।
ತೇನ ಪಾಪಾನ್ಯನೇಕಾನಿ ಕೃತಾನಿ ನಿಜಹೇತುತಃ ॥ ೨೭ ॥

ನಿಕೃತ್ತೋ ಹಿ ದಿತೇರ್ಗರ್ಭಸ್ಸ್ವಾರ್ಥಹೇತೋರ್ವಿಶೇಷತಃ ।
ಧರ್ಷಿತಾ ಗೌತಮಸ್ತ್ರೀ ವೈ ಹತೋ ವೃತ್ರಶ್ಚ ವಿಪ್ರಜಃ ॥ ೨೮ ॥

ವಿಶ್ವರೂಪದ್ವಿಜಾತೇರ್ವೈ ಭಾಗಿನೇಯಸ್ಯ ಯದ್ಗುರೋಃ ।
ನಿಕೃತ್ತಾನಿ ಚ ಶೀರ್ಷಾಣಿ ತದಧ್ವಾ ಧ್ವಂಸಿತಶ್ರುತೇಃ ॥ ೨೯ ॥

ಕೃತ್ವಾ ಬಹೂನಿ ಪಾಪಾನಿ ಹರಿಶ್ಶಕ್ರಃ ಪುನಃ ಪುನಃ ।
ತೇಜೋಭಿರ್ವಿಹತಾವೇವ ನಷ್ಟವೀರ್ಯೌ ವಿಶೇಷತಃ ॥ ೩೦ ॥

ತಯೋರ್ಬಲೇನ ನೋ ಯೂಯಂ ಸಂಗ್ರಾಮೇ ಜಯಮಾಪ್ಸ್ಯಥ ।
ಕಿಮರ್ಥಂ ಮೂಢತಾಂ ಪ್ರಾಪ್ಯ ಪ್ರಾಣಾಂಸ್ತ್ಯಕ್ತುಮಿಹಾಗತಾಃ ॥ ೩೧ ॥

---

ಇವನು ಯಾವ ಕೆಲಸವನ್ನು ಮಾಡಿರುವನೋ ಅವೆಲ್ಲವೂ ಪಾಪಕಲುಷಿತವಾದುದಾಗಿಯೂ ವೇದಮಾರ್ಗವನ್ನು ದೂಷಿಸುವುದಾಗಿಯೂ ಇರುವುದು. ಇಂತಹವನು ನನ್ನೊಡನೆ ಹೇಗೆತಾನೇ ಯುದ್ಧಮಾಡಿ ಜಯಶಾಲಿಯಾಗುವನು ?

೨೭. ಈ ವಿಷ್ಣುವಿನ ಹಿರಿಯ ಅಣ್ಣನು ಇಂದ್ರ. ಇವನಂತೂ ಮಹಾಪಾಪಿ. ತನ್ನ ಪ್ರಯೋಜನಕ್ಕೋಸ್ಕರವಾಗಿ ಅನೇಕ ಪಾಪಗಳನ್ನು ಮಾಡಿರುವನು.

೨೮-೩೦. ತನ್ನ ಪ್ರಯೋಜನಕ್ಕಾಗಿಯೇ ದಿತಿಯ ಗರ್ಭವನ್ನು ಕತ್ತರಿಸಿದನು. ಗೌತಮನ ಪತ್ನಿಯಾದ ಅಹಲ್ಯೆಯನ್ನು ಕೆಡಿಸಿದನು. ಬ್ರಾಹ್ಮಣನಿಂದ ಹುಟ್ಟಿದ ವೃತ್ರಾಸುರನನ್ನು ಕೊಂದನು. ತನ್ನ ತಂಗಿಯ ಮಗನೂ ಗುರುವೂ ಆದ ವಿಶ್ವರೂಪನೆಂಬ ಬ್ರಾಹ್ಮಣನ ತಲೆಯನ್ನು ಕತ್ತರಿಸಿದನು. ಈ ರೀತಿಯಾಗಿ ಅನೇಕ ಪಾಪಗಳನ್ನು ಮಾಡಿ ವೇದಮಾರ್ಗಕ್ಕೆ ವಿರುದ್ಧವಾಗಿ ನಡೆದಿರುವನು.

೩೧. ಇಂತಹ ವಿಷ್ಣು, ಇಂದ್ರರು ಪಾಪಕೆಲಸವನ್ನು ಮಾಡಿ ಮಾಡಿ ಬಲುವನ್ನೆಲ್ಲಾ ನಾಶಮಾಡಿಕೊಂಡಿರುವರು. ಅಯ್ಯೋ ಮೂಢರೇ! ಅವರೊಡನೆ ಸೇರಿ ನನ್ನ ಮೇಲೆ ಯುದ್ಧಮಾಡಲು ಬಂದಿರುವಿರಲ್ಲಾ. ನಿಮಗೆ ಜಯವು ಸಿಕ್ಕುವುದೆಂದು ನಂಬಿರುವಿರಾ ? ಅನ್ಯಾಯವಾಗಿ ಪ್ರಾಣವನ್ನು ಬಿಡಲು ಬಂದಿರುವಿರಿ.

ಜಾನಂತೌ ಧರ್ಮಮೇತೌ ನ ಸ್ವಾರ್ಥಲಂಪಟಮಾನಸೌ ।
ಧರ್ಮಂ ವಿನಾಮರಾಃ ಕೃತ್ಯಂ ನಿಷ್ಫಲಂ ಸಕಲಂ ಭವೇತ್ ॥ ೩೨ ॥

ಮಹಾಧೃಷ್ಟಾವಿಮೌ ಮೇಧ್ಯ ಕ್ಷತವಂತೌ ಪುರಶ್ಶಿಶುಂ ।
ಅಹಂ ಬಾಲಂ ವಧಿಷ್ಯಾಮಿ ತಯೋಸ್ಸೋಽಪಿ ಭವಿಷ್ಯತಿ ॥ ೩೩ ॥

ಕಿಂ ತು ಬಾಲ ಇತೋ ಪಾಪಾದ್ದೂರಂ ಪ್ರಾಣಪರೀಪ್ಸಯಾ ।
ಇತ್ಯುಕ್ತ್ವೋದ್ದಿಶ್ಯ ಚ ಹರೀ ವೀರಭದ್ರಮುವಾಚ ಸಃ ॥ ೩೪ ॥

ಪುರಾ ಹತಾಸ್ತ್ವಯಾ ವಿಪ್ರಾ ದಕ್ಷಯಜ್ಞೇ ಹ್ಯನೇಕಶಃ ।
ತತ್ಕರ್ಮಣಃ ಫಲಂ ಚಾದ್ಯ ದರ್ಶಯಿಷ್ಯಾಮಿ ತೇಽನಘ ॥ ೩೫ ॥

॥ ಬ್ರಹ್ಮೋವಾಚ ॥

ಇತ್ಯೇವಮುಕ್ತ್ವಾ ತು ವಿಧೂಯ ಪುಣ್ಯಂ
ನಿಜಂ ಸ ತನ್ನಿಂದನಕರ್ಮಣಾ ವೈ ।
ಜಗ್ರಾಹ ಶಕ್ತಿಂ ಪರಮಾದ್ಭುತಾಂ ಚ
ಸ ತಾರಕೋ ಯುದ್ಧವತಾಂ ವರಿಷ್ಠಃ ॥ ೩೬ ॥

---

೩೨-೩೩. ಎಲೈ ದೇವತೆಗಳಿರಾ, ಇವರಿಬ್ಬರಿಗೂ ಯಾವ ಧರ್ಮವೂ ಗೊತ್ತಿಲ್ಲ. ಅಧರ್ಮವಾಗಿ ಮಾಡಿದ ಕೆಲಸವು ನಿಷ್ಪ್ರಯೋಜನವಾದುದು. ಇವರಿಬ್ಬರೂ ಕೇವಲ ಸ್ವಪ್ರಯೋಜನಾಸಕ್ತರು. ಈಗ ಧೂರ್ತರಾದ ಇವರು ಆ ಮಗುವನ್ನು ನನ್ನೊಡನೆ ಯುದ್ಧಮಾಡಲು ಮುಂದೆ ತಳ್ಳಿರುವರು. ಈಗ ನಾನು ಈ ಬಾಲಕನನ್ನು ಕೊಲ್ಲುವೆನು. ಇದರ ದೋಷವನ್ನೂ ಇವರೇ ಅನುಭವಿಸಲಿ.

೩೪-೩೫. ಆದರೆ ಆ ಬಾಲಕನು ಮಾತ್ರ ಪ್ರಾಣದ ಆಶೆಯಿಂದ ದೂರದಲ್ಲಿಯೇ ನಿಂತಿರುವನು. ಈ ರೀತಿಯಾಗಿ ಹೇಳಿ ತಾರಕನು ವೀರಭದ್ರನನ್ನು ಕುರಿತು ಎಲೈ ವೀರಭದ್ರನೇ, ಹಿಂದೆ ನೀನು ದಕ್ಷಯಜ್ಞದಲ್ಲಿ ಅನೇಕ ಬ್ರಾಹ್ಮಣರನ್ನು ಕೊಂದು ಬ್ರಹ್ಮಹತ್ಯಾದೋಷವನ್ನು ಹೊಂದಿರುವೆ. ಈಗ ಅದರ ಫಲವನ್ನು ತೋರಿಸುವೆನು. ನನ್ನೊಡನೆ ಯುದ್ಧಕ್ಕೆ ಬಾ ಎಂದನು.

೩೬. ಬ್ರಹ್ಮನು ಹೇಳಿದನು :—ತಾರಕನು ದೇವತೆಗಳನ್ನು ನಿಂದೆಮಾಡುವುದರಿಂದ ತಾನು ಮಾಡಿದ ಪುಣ್ಯಕರ್ಮದ ಫಲವನ್ನೂ ಕಳೆದುಕೊಂಡನು. ಅನಂತರ ಪರಮಾಶ್ಚರ್ಯಕರವಾದ ಒಂದು ಶಕ್ತ್ಯಾಯುಧವನ್ನು ಕೈಯಲ್ಲಿ ಹಿಡಿದು ಯುದ್ಧಕ್ಕೆ ಹೊರಟನು.

ತಂ ಬಾಲಾಂತಿಕಮಾಯಾಂತಂ ತಾರಕಾಸುರಮೋಜಸಾ ।
ಆಜಘಾನ ಚ ವಜ್ರೇಣ ಶಕ್ರೋ ಗುಹಪುರಸ್ಸರಃ ॥ ೩೭ ॥

ತೇನ ವಜ್ರಪ್ರಹಾರೇಣ ತಾರಕೋ ಜರ್ಜರೀಕೃತಃ ।
ಭೂಮೌ ಪಪಾತ ಸಹಸಾ ನಿಂದಾಹತಬಲಃ ಕ್ಷಣಾಂ ॥ ೩೮ ॥

ಪತಿತೋಽಪಿ ಸಮುತ್ಥಾಯ ಶಕ್ತ್ಯಾ ತಂ ಪ್ರಾಹರದ್ರುಷಾ ।
ಪುರಂದರಂ ಗಜಸ್ಥಂ ಹಿ ಪಾತಯಾಮಾಸ ಭೂತಲೇ ॥ ೩೯ ॥

ಹಾಹಾಕಾರೋ ಮಹಾನಾಸೀತ್ಪತಿತೇ ಚ ಪುರಂದರೇ ।
ಸೇನಾಯಾಂ ನಿರ್ಜರಾಣಾಂ ಹಿ ತದ್ದೃಷ್ಟ್ವಾ ಕ್ಲೇಶ ಆವಿಶತ್ ॥ ೪೦ ॥

ತಾರಕೇಣಾಪಿ ತತ್ರೈವ ಯತ್ಕೃತಂ ಕರ್ಮ ದುಃಖದಂ ।
ಸ್ವನಾಶಕಾರಣಂ ಧರ್ಮವಿರುದ್ಧಂ ತನ್ನಿಬೋಧ ಮೇ ॥ ೪೧ ॥

---

೩೭. ಕುಮಾರನೊಡನೆ ಯುದ್ಧಮಾಡಲು ತಾರಕನು ಬರುತ್ತಿರುವುದನ್ನು ನೋಡಿ ಇಂದ್ರನು ತನ್ನ ವಜ್ರಾಯುಧದಿಂದ ಅವನನ್ನು ಹೊಡೆದನು.

೩೮-೩೯. ಆ ವಜ್ರಾಯುಧದ ಏಟಿನಿಂದ ತಾರಕನು ತತ್ತರಿಸಿ ಜಾಗ್ರತೆಯಾಗಿ ಭೂಮಿಯಲ್ಲಿ ಬಿದ್ದುಬಿಟ್ಟನು. ಪರನಿಂದೆಯಿಂದ ಅವನ ಬಲವಲ್ಲವೂ ಮೊದಲೇ ಕ್ಷೀಣವಾಗಿದ್ದಿತು. ಅನಂತರ ಸ್ವಲ್ಪಹೊತ್ತಿನ ಮೇಲೆ ಚೇತರಿಸಿಕೊಂಡು ತುಂಬಾ ಕೋಪಗೊಂಡು ಆನೆಯಮೇಲೆ ಕುಳಿತಿರುವ ಇಂದ್ರನನ್ನು ಶಕ್ತ್ಯಾಯುಧದಿಂದ ಹೊಡೆದನು. ಆ ಏಟನ್ನು ತಾಳಲಾರದೆ ಇಂದ್ರನು ಕೆಳಗುರುಳಿದನು.

೪೦. ಇಂದ್ರನು ಬಿದ್ದುದನ್ನು ನೋಡಿ ದೇವತೆಗಳ ಸೈನ್ಯದಲ್ಲಿ ದೊಡ್ಡ ಕೋಲಾಹಲವು ಎದ್ದಿತು. ಹಾಗೂ ಎಲ್ಲರೂ ದುಃಖಪಟ್ಟರು.

೪೧. ಆ ಸಮಯದಲ್ಲಿ ತಾರಕನೂ ಕೂಡ ಒಂದು ದುಃಖಕರವಾದ ಕೆಟ್ಟ ಕೆಲಸವನ್ನು ಮಾಡಿದನು. ಧರ್ಮವಿರುದ್ಧವಾದ ಆ ಕೆಲಸವು ಅವನ ನಾಶಕ್ಕೇ ಕಾರಣವಾಯಿತು. ಅದನ್ನು ಹೇಳುವೆನು ಕೇಳು.

ಪತಿತಂ ಚ ಪದಾಕ್ರಮ್ಯ ಹಸ್ತಾದ್ವಜ್ರಂ ಪ್ರಗೃಹ್ಯ ವೈ ।
ಪುನರುದ್ವಜ್ರಘಾತೇನ ಶಕ್ರಮಾತಾಡಯದ್ಭೃಶಂ ॥ ೪೨ ॥

ಏವಂ ತಿರಸ್ಕೃತಂ ದೃಷ್ಟ್ವಾ ಶಕ್ರಂ ವಿಷ್ಣುಃ ಪ್ರತಾಪವಾನ್ ।
ಚಕ್ರಮುದ್ಯಮ್ಯ ಭಗವಾನ್ ತಾರಕಂ ಸ ಜಘಾನ ಹ ॥ ೪೩ ॥

ಚಕ್ರಪ್ರಹಾರಾಭಿಹತೋ ನಿಪಪಾತ ಕ್ಷಿತೌ ಹಿ ಸಃ ।
ಪುನರುತ್ಥಾಯ ದೈತ್ಯೇಂದ್ರಃ ಶಕ್ತ್ಯಾ ವಿಷ್ಣುಂ ಜಘಾನ ತಂ ॥ ೪೪ ॥

ತೇನ ಶಕ್ತಿಪ್ರಹಾರೇಣ ಪತಿತೋ ಭುವಿ ಚಾಚ್ಯುತಃ ।
ಹಾಹಾಕಾರೋ ಮಹಾನಾಸೀಚ್ಚುಕ್ರುಶುಶ್ಚಾತಿ ನಿರ್ಜರಾಃ ॥ ೪೫ ॥

ನಿಮೇಷೇಣ ಪುನರ್ವಿಷ್ಣುರ್ಯಾವದುತ್ತಿಷ್ಠತೇ ಸ್ವಯಂ ।
ತಾವತ್ಸ ವೀರಭದ್ರೋ ಹಿ ತತ್ಕ್ಷಣಾದಾಗತೋಽಸುರಂ ॥ ೪೬ ॥

ತ್ರಿಶೂಲಂ ಚ ಸಮುದ್ಯಮ್ಯ ವೀರಭದ್ರಃ ಪ್ರತಾಪವಾನ್ ।
ತಾರಕಂ ದಿತಿಜಾಧೀಶಂ ಜಘಾನ ಪ್ರಸಭಂ ಬಲೀ ॥ ೪೭ ॥

---

೪೨. ಇಂದ್ರನು ಭೂಮಿಯಮೇಲೆ ಬಿದ್ದಿರಲು ಅದನ್ನು ನೋಡಿ ತಾರಕನು ಜಾಗ್ರತೆಯಾಗಿ ಅವನ ಹತ್ತಿರಕ್ಕೆ ಹೋಗಿ ಆತನ ಕೈಲಿರುವ ವಜ್ರಾಯುಧವನ್ನು ಕಿತ್ತುಕೊಂಡು ಅದರಿಂದಲೇ ಇಂದ್ರನನ್ನು ಹೊಡೆದನು.

೪೩. ಇಂದ್ರನನ್ನು ಈರೀತಿಯಾಗಿ ಹೊಡೆಯುತ್ತಿರುವುದನ್ನು ನೋಡಿ ವೀರನಾದ ವಿಷ್ಣುವು ಆ ತಾರಕನನ್ನು ಚಕ್ರಾಯುಧದಿಂದ ಹೊಡೆದನು.

೪೪-೪೫. ಅದರ ಏಟಿನಿಂದ ತಾರಕನು ಕೆಳಗೆಬಿದ್ದನು. ಸ್ವಲ್ಪಹೊತ್ತಿನಲ್ಲಿಯೇ ಮೇಲಕ್ಕೆ ಎದ್ದು ಶಕ್ತ್ಯಾಯುಧದಿಂದ ವಿಷ್ಣುವನ್ನು ಹೊಡೆಯಲು ಅದರ ಪ್ರಹಾರದಿಂದ ವಿಷ್ಣುವು ಭೂಮಿಯಮೇಲೆ ಬಿದ್ದನು. ಆಗ ದೇವತೆಗಳೆಲ್ಲರೂ ದುಃಖದಿಂದ ಕೂಗುತ್ತಾ ಹಾಹಾಕಾರವನ್ನು ಮಾಡಿದರು.

೪೬-೪೭. ಪುನಃ ಒಂದು ನಿಮಿಷದಲ್ಲಿಯೇ ವಿಷ್ಣುವು ಏಳುತ್ತಿರಲು ಅಷ್ಟರಲ್ಲಿಯೇ ವಿಷ್ಣುವನ್ನು ಹೊಡೆಯಲು ಓಡಿಬರುತ್ತಿದ್ದನು. ಅದನ್ನು ನೋಡಿ ವೀರಭದ್ರನು ತ್ರಿಶೂಲವನ್ನು ತೆಗೆದುಕೊಂಡು ಆ ದೈತ್ಯನಾದ ತಾರಕನನ್ನು ಬಲವಾಗಿ ಹೊಡೆದನು.

ತತ್ರಿಶೂಲಪ್ರಹಾರೇಣ ಸ ಪಪಾತ ಕ್ಷಿತೌ ತದಾ ।
ಪತಿತೋಽಪಿ ಮಹಾತೇಜಾಸ್ತಾರಕಃ ಪುನರುತ್ಥಿತಃ ॥ ೪೮ ॥

ಕೃತ್ವಾ ಕ್ರೋಧಂ ಮಹಾವೀರಸ್ಸಕಲಾಸುರನಾಯಕಃ ।
ಜಘಾನ ಪರಯಾ ಶಕ್ತ್ಯಾ ವೀರಭದ್ರಂ ತದೋರಸಿ ॥ ೪೯ ॥

ವೀರಭದ್ರೋಽಪಿ ಪತಿತೋ ಭೂತಲೇ ಮೂರ್ಛಿತಃ ಕ್ಷಣಂ ।
ತಚ್ಛಕ್ತ್ಯಾ ಪರಯಾ ಕ್ರೋಧಾನ್ನಿಹತೋ ವಕ್ಷಸಿ ಧ್ರುವಂ ॥ ೫೦ ॥

ಸಗಣಾಶ್ಚೈವ ದೇವಾಸ್ತೇ ಗಂಧರ್ವೋರಗರಾಕ್ಷಸಾಃ ।
ಹಾಹಾಕಾರೇಣ ಮಹತಾ ಚುಕ್ರುಶುಶ್ಚ ಮುಹುರ್ಮುಹುಃ ॥ ೫೧ ॥

ನಿಮೇಷಮಾತ್ರಾಸ್ಸಹಸಾ ಮಹೌಜಾ-
ಸ್ಸವೀರಭದ್ರೋ ದ್ವಿಷತಾಂ ನಿಹಂತಾ ।
ತ್ರಿಶೂಲಮುದ್ಯಮ್ಯ ತಡಿತ್ಪ್ರಕಾಶಂ
ಜ್ವಾಜ್ವಲ್ಯಮಾನಂ ಪ್ರಭಯಾ ವಿರೇಜೇ ॥ ೫೨ ॥

---

೪೮-೪೯. ಆದರ ಪ್ರಹಾರದಿಂದ ತಾರಕನು ಕೆಳಗೆ ಬಿದ್ದನು. ಬಿದ್ದರೂ ಕೂಡ ಜಾಗ್ರತೆಯಾಗಿ ಮೇಲಕ್ಕೆದ್ದು ಅತ್ಯಂತ ಕೋಪದಿಂದ ಶಕ್ತ್ಯಾಯುಧವನ್ನು ತೆಗೆದುಕೊಂಡು ವೀರಭದ್ರನ ಎದೆಗೆ ಸರಿಯಾಗಿ ಹೊಡೆದನು.

೫೦-೫೧. ವೀರಭದ್ರನು ಆದರ ಏಟಿಗೆ ಕೆಳಗೆಬಿದ್ದು ಮೂರ್ಛೆಹೊಂದಿದನು. ಆಗ ದೇವತೆಗಳೂ, ಗಂಧರ್ವೋರಗರಾಕ್ಷಸರೂ, ಎಲ್ಲರೂ ದುಃಖದಿಂದ ಹಾಹಾಕಾರ ಮಾಡಿದರು. ಮಹಾಕೋಲಾಹಲವೆದ್ದಿತು.

೫೨. ಒಂದು ನಿಮಿಷದಲ್ಲೇ ವೀರಭದ್ರನು ಎಚ್ಚೆತ್ತು ಶತ್ರುಗಳನ್ನು ಕೊಲ್ಲಲು ಉಜ್ಜಗಿಸಲು, ಮಿಂಚಿನಂತೆ ಹೊಳೆಯುತ್ತಿರುವ ತ್ರಿಶೂಲವನ್ನು ಹಿಡಿದು ಆದರ ಪ್ರಭೆಯಿಂದ ಪ್ರಕಾಶಿಸಿದನು.

ಸ್ವರೋಚಿಷಾ ಭಾಸಿತದಿಗ್ವಿತಾನಂ
ಸೂರ್ಯೇಂದುಬಿಂಬಾಗ್ನಿಸಮಾನಮಂಡಲಂ ।
ಮಹಾಪ್ರಭಂ ವೀರಭಯಾವಹಂ ಪರಂ
ಕಾಲಾಖ್ಯಮತ್ಯಂತಕರಂ ಮಹೋಜ್ಜ್ವಲಂ ॥ ೫೩ ॥

ಯಾವತ್ತ್ರಿಶೂಲೇನ ತದಾ ಹಂತುಕಾಮೋ ಮಹಾಬಲಃ ।
ವೀರಭದ್ರೋಽಸುರಂ ತಾವತ್ಕುಮಾರೇಣ ನಿವಾರಿತಃ ॥ ೫೪ ॥

ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಕುಮಾರಖಂಡೇ
ಯುದ್ಧವರ್ಣನಂ ನಾಮ ನವಮೋಽಧ್ಯಾಯಃ.

---

೫೩-೫೪. ಆ ತ್ರಿಶೂಲದ ಕಾಂತಿಯಿಂದ ದಶದಿಕ್ಕುಗಳೂ ಬೆಳಗುತ್ತಿದ್ದವು. ಅದು ಸೂರ್ಯ, ಚಂದ್ರ, ಅಗ್ನಿ ಇವರುಗಳ ಮಂಡಲದಂತೆ ಅತಿ ಪ್ರಕಾಶದಿಂದ ಬೆಳಗುತ್ತಿತ್ತು. ಅದನ್ನು ನೋಡಿ ವೀರರೆಲ್ಲರೂ ಭಯಗೊಳ್ಳುತ್ತಿದ್ದರು. ಆ ತ್ರಿಶೂಲಕ್ಕೆ ಕಾಲವೆಂದು ಹೆಸರು. ಇಂತಹ ಉಜ್ವಲವಾದ ತ್ರಿಶೂಲವನ್ನು ತೆಗೆದುಕೊಂಡು ವೀರಭದ್ರನು ತಾರಕನನ್ನು ಹೊಡೆಯಲು ಸಿದ್ಧನಾಗಲು, ಷಣ್ಮುಖನು ವೀರಭದ್ರನನ್ನು ತಡೆದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ರುದ್ರಸಂಹಿತೆಯ ಕುಮಾರಖಂಡದಲ್ಲಿ
ಯುದ್ಧವರ್ಣನವೆಂಬ ಒಂಭತ್ತನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ರುದ್ರಸಂಹಿತಾಯಾಂ ಕುಮಾರಖಂಡೇ

## ದಶಮೋಽಧ್ಯಾಯಃ

॥ ಬ್ರಹ್ಮೋವಾಚ ॥

ನಿವಾರ್ಯ ವೀರಭದ್ರಂ ತಂ ಕುಮಾರಃ ಪರವೀರಹಾ ।
ಸಮೈಚ್ಛತ್ತಾರಕವಧಂ ಸ್ಮೃತ್ವಾ ಶಿವಪದಾಂಬುಜೌ ॥ ೧ ॥

ಜಗರ್ಜಾಥ ಮಹಾತೇಜಾ ಕಾರ್ತಿಕೇಯೋ ಮಹಾಬಲಃ ।
ಸನ್ನದ್ಧಸ್ಸೋಽಭವತ್ಕ್ರುದ್ಧಃ ಸೈನ್ಯೇನ ಮಹತಾ ವೃತಃ ॥ ೨ ॥

ತದಾ ಜಯಜಯೇತ್ಯುಕ್ತಂ ಸರ್ವೈರ್ದೇವಗಣೈಸ್ತಥಾ ।
ಸಂಸ್ತುತೋ ವಾಗ್ಭಿರಿಷ್ಟಾಭಿಸ್ತಥೈವ ಚ ಸುರರ್ಷಿಭಿಃ ॥ ೩ ॥

---

### ಹತ್ತನೆಯ ಅಧ್ಯಾಯವು.

೧-೨. ಬ್ರಹ್ಮನು ಹೇಳಿದನು:—ಶತ್ರುನಿಷೂದಕನಾದ ಕುಮಾರನು ವೀರಭದ್ರನನ್ನು ಯುದ್ಧದಿಂದ ತಡೆದನಂತರ ತಾನೇ ತಾರಕನ ವಧೆಮಾಡಲು ನಿಶ್ಚಯಿಸಿದನು. ಶಿವನ ಚರಣಕಮಲವನ್ನು ಮನದಲ್ಲಿ ನೆನೆದು, ಮಹಾಪರಾಕ್ರಮಿಯಾದ ಆ ಕಾರ್ತಿಕೇಯನು ದೊಡ್ಡಸೈನ್ಯದೊಡನೆ ಹೊರಟು ಯುದ್ಧಕ್ಕೆ ಸಿದ್ಧನಾಗಿ ಗರ್ಜಿಸಿದನು.

೩. ಆ ಸಮಯದಲ್ಲಿ ದೇವತೆಗಳೂ, ಪ್ರಮಥಗಣಗಳೂ, ಋಷಿಗಳೂ, ಕುಮಾರನಿಗೆ ಜಯವಾಗಲಿ ಎಂದು ಹೇಳುತ್ತಾ ಸ್ತೋತ್ರಮಾಡಿದರು.

ತಾರಕಸ್ಯ ಕುಮಾರಸ್ಯ ಸಂಗ್ರಾಮೋऽತೀವ ದುಸ್ಸಹಃ ।
ಜಾತಸ್ತದಾ ಮಹಾಘೋರಸ್ಸರ್ವಭೂತಭಯಂಕರಃ ॥ ೪ ॥

ಶಕ್ತಿಹಸ್ತೌ ಚ ತೌ ವೀರೌ ಯುಯುಧಾತೇ ಪರಸ್ಪರಂ ।
ಸರ್ವೇಷಾಂ ಪಶ್ಯತಾಂ ತತ್ರ ಮಹಾಶ್ಚರ್ಯವತಾಂ ಮುನೇ ॥ ೫ ॥

ಶಕ್ತಿನಿರ್ಭಿನ್ನದೇಹೌ ತೌ ಮಹಾಸಾಧನಸಂಯುತೌ ।
ಪರಸ್ಪರಂ ವಂಚಯಂತೌ ಸಿಂಹಾವಿವ ಮಹಾಬಲೌ ॥ ೬ ॥

ವೈತಾಲಿಕಂ ಸಮಾಶ್ರಿತ್ಯ ತಥಾ ಖೇಚರಕಂ ಮತಂ ।
ಪ್ರಾಪತಂ ಚ ಸಮಾಶ್ರಿತ್ಯ ಶಕ್ತ್ಯಾ ಶಕ್ತಿಂ ವಿಜಘ್ನತುಃ ॥ ೭ ॥

ಏಭಿರ್ಮಂತ್ರೈರ್ಮಹಾವೀರೌ ಚಕ್ರತುರ್ಯುದ್ಧಮದ್ಭುತಂ ।
ಅನ್ಯೋನ್ಯಂ ಸಾಧಕೌ ಭೂತ್ವಾ ಮಹಾಬಲಪರಾಕ್ರಮೌ ॥ ೮ ॥

ಮಹಾಬಲಂ ಪ್ರಕುರ್ವಂತೌ ಪರಸ್ಪರವಧೈಷಿಣೌ ।
ಜಘ್ನತುಶ್ಶಕ್ತಿಧಾರಾಭೀ ರಣೇ ರಣವಿಶಾರದೌ ॥ ೯ ॥

---

೪. ಬಳಿಕ ತಾರಕನಿಗೂ, ಕುಮಾರನಿಗೂ ಅತಿ ಭಯಂಕರವಾದ ಯುದ್ಧವು ನಡೆಯಿತು. ಎಲ್ಲಾ ಪ್ರಾಣಿಗಳಿಗೂ ಭಯವನ್ನುಂಟುಮಾಡುತ್ತಿತ್ತು.

೫-೬. ಆ ವೀರರಿಬ್ಬರೂ ಶಕ್ತ್ಯಾಯುಧವನ್ನು ಹಿಡಿದು ಯುದ್ಧಮಾಡುತ್ತಿದ್ದರು. ಶಕ್ತ್ಯಾಯುಧದಿಂದ ಒಬ್ಬರನ್ನೊಬ್ಬರು ಹೊಡೆದಾಡುತ್ತಿದ್ದರು. ಒಬ್ಬೊಬ್ಬರ ದೇಹವೂ ಚೂರುಚೂರಾಗಿದ್ದಿತು. ಬಿದ್ದ ಏಟನ್ನು ಪರಸ್ಪರವಾಗಿ ತಪ್ಪಿಸಿಕೊಳ್ಳುತ್ತಾ ಸಿಂಹಗಳಂತೆ ಭಯಂಕರವಾಗಿ ಯುದ್ಧಮಾಡುತ್ತಿದ್ದರು.

೭. ವೈತಾಲಿಕ, ಖೇಚರಕ ಪ್ರಾಪತ ಮುಂತಾದ ಮಂತ್ರಗಳನ್ನು ಉಚ್ಚರಿಸುತ್ತಾ, ನಾನಾವರಸೆಗಳನ್ನು ತೋರುತ್ತಾ ಶಕ್ತ್ಯಾಯುಧವನ್ನು ಪ್ರಯೋಗಿಸುತ್ತಿದ್ದರು.

೮-೯. ಯುದ್ಧವಿಶಾರದರಾದ ಅವರಿಬ್ಬರೂ ಒಬ್ಬರನ್ನೊಬ್ಬರು ಕೊಲ್ಲಲಪೇಕ್ಷೆಯುಳ್ಳವರಾಗಿ ಬಹಳ ಪರಾಕ್ರಮವನ್ನು ತೋರಿಸುತ್ತಾ, ಶಕ್ತ್ಯಾಯುಧದಿಂದ ಪರಸ್ಪರವಾಗಿ ಹೊಡೆದಾಡುತ್ತಾ, ಅದ್ಭುತವಾದ ಯುದ್ಧವನ್ನು ಮಾಡಿದರು.

ಮೂರ್ಧ್ನಿ ಕಂಠೇ ತಥಾ ಚೋರ್ವೋರ್ಜಾನ್ವೋಶ್ಚೈವ ಕಟೀತಟೇ ।
ವಕ್ಷಸ್ಯುರಸಿ ಪೃಷ್ಠೇ ಚ ಚಿಚ್ಛಿದುಶ್ಚ ಪರಸ್ಪರಮ್ ॥ ೧೦ ॥

ತದಾ ತೌ ಯುಧ್ಯಮಾನೌ ಚ ಹಂತುಕಾಮೌ ಮಹಾಬಲೌ ।
ವಲ್ಗಂತೌ ವೀರಶಬ್ದೈಶ್ಚ ನಾನಾಯುದ್ಧವಿಶಾರದೌ ॥ ೧೧ ॥

ಅಭವನ್ಪ್ರೇಕ್ಷಕಾಸ್ಸರ್ವೇ ದೇವಾ ಗಂಧರ್ವಕಿನ್ನರಾಃ ।
ಊಚುಃ ಪರಸ್ಪರಂ ತತ್ರ ಕೋಽಸ್ಮಿನ್ಯುದ್ಧೇ ವಿಜೇಷ್ಯತಿ ॥ ೧೨ ॥

ತದಾ ನಭೋಗತಾ ವಾಣೀ ಜಗೌ ದೇವಾಂಶ್ಚ ಸಾಂತ್ವಯನ್ ।
ಅಸುರಂ ತಾರಕಂ ಚಾತ್ರ ಕುಮಾರೋಽಯಂ ಹನಿಷ್ಯತಿ ॥ ೧೩ ॥

ಮಾ ಶೋಚ್ಯತಾಂ ಸರ್ವೈಸ್ಸರ್ವೈಃ ಸುಖೇನ ಸ್ಥೀಯತಾಮಿತಿ ।
ಯುಷ್ಮದರ್ಥಂ ಶಂಕರೋ ಹಿ ಪುತ್ರರೂಪೇಣ ಸಂಸ್ಥಿತಃ ॥ ೧೪ ॥

ಶ್ರುತ್ವಾ ತದಾ ತಾಂ ಗಗನೇ ಸಮೀರಿತಾಂ
ವಾಚಂ ಶುಭಾಂ ಸಪ್ರಮಥೈಸ್ಸಮಾವೃತಃ ।
ನಿಹಂತುಕಾಮಃ ಸುಖಿತಃ ಕುಮಾರಕೋ
ದೈತ್ಯಾಧಿಪಂ ತಾರಕಮಾಶ್ವಭೂತ್ತದಾ ॥ ೧೫ ॥

---

೧೦. ತಲೆ, ಕುತ್ತಿಗೆ, ತೊಡೆ, ಮುಂಡಿ, ಸೊಂಟ, ಎದೆ, ಬೆನ್ನು ಮುಂತಾದ ಸ್ಥಳಗಳಿಗೆ ಗುರಿಯಿಟ್ಟು ಹೊಡೆದಾಡುತ್ತಾ ಯುದ್ಧಮಾಡಿದರು.

೧೧-೧೨. ಈ ರೀತಿಯಾಗಿ ಒಬ್ಬರನ್ನೊಬ್ಬರು ಕೊಲ್ಲಬೇಕೆಂಬ ಆಕಾಂಕ್ಷೆಯಿಂದ ವೀರನಾದವನ್ನು ಮಾಡುತ್ತಾ ಯುದ್ಧಮಾಡುತ್ತಿರಲು ಅದನ್ನು ನೋಡಿ ದೇವತೆಗಳೂ ಗಂಧರ್ವರೂ, ಕಿನ್ನರರೂ ಈ ಯುದ್ಧದಲ್ಲಿ ಯಾರು ಗೆಲ್ಲುವರು ? ಎಂದು ಸಂಶಯ ಗೊಂಡು ಆಶ್ಚರ್ಯವಾಗಿ ನೋಡುತ್ತಿದ್ದರು.

೧೩-೧೪. ಆ ಸಮಯದಲ್ಲಿ ಆಕಾಶವಾಣಿಯು ದೇವತೆಗಳನ್ನು ಸಮಾಧಾನ ಮಾಡುತ್ತಾ, ತಾರಕಾಸುರನನ್ನು ಕುಮಾರನು ಕೊಲ್ಲುವನು. ನೀವೇನೂ ದುಃಖ ಪಡಬೇಡಿರಿ, ಸುಖವಾಗಿರಿ, ನಿಮಗೋಸ್ಕರವಾಗಿಯೇ ಶಂಕರನು ಪುತ್ರರೂಪದಿಂದ ಹುಟ್ಟಿರುವನು ಎಂದು ಹೇಳಿತು.

೧೫-೧೬. ಕುಮಾರನು ಆಕಾಶವಾಣಿಯನ್ನು ಕೇಳಿ ಉತ್ಸಾಹಗೊಂಡು ಆ ತಾರಕಾಸುರನನ್ನು ವಧೆಮಾಡಲೋಸುಗ ಪ್ರಮಥಗಳೊಡನೆ ಹೊರಟು ಅವನನ್ನು

ಶಕ್ತ್ಯಾ ತಯಾ ಮಹಾಬಾಹುರಾಜಘಾನ ಸ್ತನಾಂತರೇ ।
ಕುಮಾರಃ ಸ್ಮ ರುಷಾವಿಷ್ಟಸ್ತಾರಕಾಸುರಮೋಜಸಾ ॥ ೧೬ ॥

ತಂ ಪ್ರಹಾರಮನಾದೃತ್ಯ ತಾರಕೋ ದೈತ್ಯಪುಂಗವಃ ।
ಕುಮಾರಂ ಚಾಪಿ ಸಂಕ್ರುದ್ಧಸ್ಸ್ವಶಕ್ತ್ಯಾ ಸಂಜಘಾನ ಸಃ ॥ ೧೭ ॥

ತೇನ ಶಕ್ತಿಪ್ರಹಾರೇಣ ಶಾಂಕರಿರ್ಮೂರ್ಛಿತೋಽಭವತ್ ।
ಮುಹೂರ್ತಾಚ್ಚೇತನಾಂ ಪ್ರಾಪ್ಯ ಸ್ತೂಯಮಾನೋ ಮಹರ್ಷಿಭಿಃ ॥ ೧೮ ॥

ಯಥಾ ಸಿಂಹೋ ಮದೋನ್ಮತ್ತೋ ಹಂತುಕಾಮಸ್ತಥಾಸುರಂ ।
ಕುಮಾರಸ್ತಾರಕಂ ಶಕ್ತ್ಯಾ ಸ ಜಘಾನ ಪ್ರತಾಪವಾನ್ ॥ ೧೯ ॥

ಏವಂ ಪರಸ್ಪರಂ ತೌ ಹಿ ಕುಮಾರಶ್ಚಾಪಿ ತಾರಕಃ ।
ಯುಯುಧಾತೇಽತಿಸಂರಬ್ಧೌ ಶಕ್ತಿಯುದ್ಧವಿಶಾರದೌ ॥ ೨೦ ॥

ವಿವಿಧೈರ್ಘಾತಪುಂಜೈಸ್ತಾವನ್ಯೋನ್ಯಂ ವಿನಿಜಘ್ನತುಃ ।
ನಾನಾಮಾರ್ಗಾನ್ಪ್ರಕುರ್ವಂತೌ ಗರ್ಜಂತೌ ಸುಪರಾಕ್ರಮೌ ॥ ೨೧ ॥

---

ಎದುರಿಸಿ ತನ್ನ ಶಕ್ತ್ಯಾಯುಧದಿಂದ ತಾರಕನ ಎದೆಗೆ ಗುರಿಯಿಟ್ಟು ಬಲವಾಗಿ ಹೊಡೆದನು.

೧೭. ಅದರ ಏಟನ್ನು ಲೆಕ್ಕಿಸದೆ ದೈತ್ಯಶ್ರೇಷ್ಠನಾದ ತಾರಕನು ಕೋಪಗೊಂಡು ತನ್ನ ಶಕ್ತ್ಯಾಯುಧದಿಂದ ಕುಮಾರನನ್ನೂ ಹೊಡೆದನು.

೧೮-೧೯. ಆ ಶಕ್ತ್ಯಾಯುಧದ ಏಟಿನಿಂದ ಷಣ್ಮುಖನು ಮೂರ್ಛಿತನಾದನು. ಆದರೇನು, ಸ್ವಲ್ಪ ಹೊತ್ತಿನಲ್ಲಿಯೇ ಚೇತರಿಸಿಕೊಂಡು ಎದ್ದನು. ಮಹರ್ಷಿಗಳೆಲ್ಲರೂ ಕುಮಾರನನ್ನು ಹೊಗಳಿದರು. ಮದಿಸಿದ ಸಿಂಹದಂತೆ ಅತಿ ಕೋಪದಿಂದ ಆ ಕುಮಾರನು ತನ್ನ ಶಕ್ತ್ಯಾಯುಧದಿಂದ ತಾರಕನನ್ನು ಬಲವಾಗಿ ಹೊಡೆದನು.

೨೦-೨೧. ಈ ರೀತಿ ಕುಮಾರನೂ, ತಾರಕನೂ ಅತ್ಯುತ್ಸಾಹದಿಂದ ಶಕ್ತಿಯುದ್ಧವನ್ನು ಮಾಡುತ್ತಾ, ಅನೇಕ ವಿಧವಾದ ವರಸೆಗಳನ್ನು ತೋರುತ್ತಾ, ಏಟುಗಳನ್ನು ಅನುಭವಿಸುತ್ತಾ, ಅದನ್ನು ತಪ್ಪಿಸಿಕೊಳ್ಳಲು ಮಾರ್ಗವನ್ನು ಹುಡುಕುತ್ತಾ, ಆಗಾಗ್ಗೆ ಉತ್ಸಾಹದಿಂದ ಗರ್ಜಿಸುತ್ತಾ, ಪರಾಕ್ರಮದಿಂದ ಯುದ್ಧಮಾಡಿದರು.

ಅಭ್ಯಾಸಪರಮಾವಾಸ್ತಾಮನ್ಯೋನ್ಯಂ ವಿಜಿಗೀಷಯಾ ।
ಪದಾತಿನೌ ಯುಧ್ಯಮಾನೌ ಚಿತ್ರರೂಪೌ ತರಸ್ವಿನೌ ॥ ೨೨ ॥

ಅವಲೋಕಪರಾಸ್ಸರ್ವೇ ದೇವಗಂಧರ್ವಕಿನ್ನರಾಃ ।
ವಿಸ್ಮಯಂ ಪರಮಂ ಜಗ್ಮುರ್ನೋಚುಃ ಕಿಂಚನ ತತ್ರ ತೇ ॥ ೨೩ ॥

ನ ವವೌ ಪವಮಾನಶ್ಚ ನಿಷ್ಪ್ರಭೋಽಭೂದ್ದಿವಾಕರಃ ।
ಚಚಾಲ ವಸುಧಾ ಸರ್ವಾ ಸಶೈಲವನಕಾನನಾ ॥ ೨೪ ॥

ಏತಸ್ಮಿನ್ನಂತರೇ ತತ್ರ ಹಿಮಾಲಯಮುಖಾ ಧರಾಃ ।
ಸ್ನೇಹಾರ್ದಿತಾಸ್ತದಾ ಜಗ್ಮುಃ ಕುಮಾರಂ ಚ ಪರೀಪ್ಸವಃ ॥ ೨೫ ॥

ತತಸ್ಸ ದೃಷ್ಟ್ವಾ ತಾನ್ಸರ್ವಾನ್ಭಯಭೀತಾಂಶ್ಚ ಶಾಂಕರಿಃ ।
ಪರ್ವತಾನ್ ಗಿರಿಜಾಪುತ್ರೋ ಬಭಾಷೇ ಪರಿಬೋಧಯನ್ ॥ ೨೬ ॥

॥ ಕುಮಾರ ಉವಾಚ ॥

ಮಾ ಖಿದ್ಯತಾಂ ಮಹಾಭಾಗಾ ಮಾ ಚಿಂತಾಂ ಕುರ್ವತಾಂ ನಗಾಃ ।
ಘಾತಯಾಮ್ಯದ್ಯ ಪಾಪಿಷ್ಠಂ ಸರ್ವೇಷಾಂ ವಃ ಪ್ರಪಶ್ಯತಾಂ ॥ ೨೭ ॥

---

೨೨. ಯುದ್ಧಮಾಡುವುದರಲ್ಲಿ ಚೆನ್ನಾಗಿ ಅಭ್ಯಾಸವುಳ್ಳ ಕುಮಾರತಾರಕರು ಒಬ್ಬರನ್ನೊಬ್ಬರು ಗೆಲ್ಲಬೇಕೆಂಬ ಆಶೆಯಿಂದ ಭೂಮಿಯಲ್ಲಿಯೇ ನಿಂತು ಚಿತ್ರ ವಿಚಿತ್ರವಾಗಿ ಯುದ್ಧಮಾಡಿದರು.

೨೩. ಯುದ್ಧವನ್ನು ನೋಡಲು ಬಂದ ದೇವಗಂಧರ್ವಕಿನ್ನರರೆಲ್ಲರೂ ಆ ಯುದ್ಧವನ್ನು ನೋಡಿ ವಿಸ್ಮಯಗೊಂಡು ಏನನ್ನೂ ಹೇಳಲಾರದೆ ನೆಟ್ಟದೃಷ್ಟಿಯಿಂದ ನೋಡುತ್ತಿದ್ದರು.

೨೪. ಆ ಸಮಯದಲ್ಲಿ ವಾಯುವು ಬೀಸಲಸಮರ್ಥನಾದನು. ಸೂರ್ಯನು ಪ್ರಭಾಹೀನನಾದನು. ಪರ್ವತ, ವನ, ಮುಂತಾದುವೂ, ಭೂಮಿಯು ನಡುಗಿದವು.

೨೫. ಈ ಸಮಯದಲ್ಲಿ ಹಿಮಾಲಯವೇ ಮುಂತಾದ ಪರ್ವತಗಳು ಕುಮಾರನನ್ನು ನೋಡಬೇಕೆಂದು ಸ್ನೇಹದಿಂದ ಯುದ್ಧರಂಗಕ್ಕೆ ಬಂದವು.

೨೬-೨೭. ಈ ರೀತಿಯಾಗಿ ಭಯಭೀತರಾದ ಪರ್ವತಗಳನ್ನು ನೋಡಿ ಕುಮಾರನು ಹೇಳಿದನು:—ಎಲೈ ಪರ್ವತಗಳೇ, ನೀವು ಚಿಂತೆಯನ್ನು ಮಾಡಬೇಡಿರಿ. ಈಗ ನೀವು ನೋಡುತ್ತಿರುವಂತೆಯೇ, ಆ ಪಾಪಿಯನ್ನು ಕೊಲ್ಲುವೆನು.

ಏವಂ ಸಮಾಶ್ವಾಸ್ಯ ತದಾ ಪರ್ವತಾನ್ ನಿರ್ಜರಾನ್ಗಣಾನ್ ।
ಪ್ರಣಮ್ಯ ಗಿರಿಜಾಂ ಶಂಭುಮಾದದೇ ಶಕ್ತಿಮುತ್ಪ್ರಭಾಂ ॥ ೨೮ ॥

ತಂ ತಾರಕಂ ಹಂತುಮನಾಃ ಕರಶಕ್ತಿರ್ಮಹಾಪ್ರಭುಃ ।
ವಿರರಾಜ ಮಹಾವೀರಃ ಕುಮಾರಶ್ಶಂಭುಬಾಲಕಃ ॥ ೨೯ ॥

ಶಕ್ತ್ಯಾ ತಯಾ ಜಘಾನಾಶು ಕುಮಾರಸ್ತಾರಕಾಸುರಂ ।
ತೇಜಸಾಢ್ಯಃ ಶಂಕರಸ್ಯ ಲೋಕಕ್ಲೇಶಕರಂ ಚ ತಂ ॥ ೩೦ ॥

ಪಪಾತ ಸದ್ಯಸ್ಸಹಸಾ ವಿಶೀರ್ಣಾಂಗೋಽಸುರಃ ಕ್ಷಿತೌ ।
ತಾರಕಾಖ್ಯೋ ಮಹಾವೀರಸ್ಸರ್ವಾಸುರಗಣಾಧಿಪಃ ॥ ೩೧ ॥

ಕುಮಾರೇಣ ಹತಸ್ಸೋಽತಿವೀರಸ್ಸ ಖಲು ತಾರಕಃ ।
ಲಯಂ ಯಯೌ ಚ ತತ್ರೈವ ಸರ್ವೇಷಾಂ ಪಶ್ಯತಾಂ ಮುನೇ ॥ ೩೨ ॥

---

೨೮. ಈ ರೀತಿಯಾಗಿ ಪರ್ವತಗಳನ್ನೂ, ದೇವತೆಗಳನ್ನೂ, ಗಣಗಳನ್ನೂ ಸಮಾಧಾನಪಡಿಸಿ ಗಿರಿಜೆಯನ್ನೂ, ಶಂಭುವನ್ನೂ ನಮಸ್ಕರಿಸಿ ಶಕ್ತ್ಯಾಯುಧವನ್ನು ಕೈಗೆ ತೆಗೆದುಕೊಂಡನು.

೨೯. ಅನಂತರ ತಾರಕನನ್ನು ಕೊಲ್ಲಲಪೇಕ್ಷೆಯುಳ್ಳವನಾಗಿ ಶಕ್ತ್ಯಾಯುಧವನ್ನು ಕೈಯಲ್ಲಿ ಹಿಡಿದು ಶಂಭುಸುತನಾದ ಆ ಕುಮಾರನು ಅತ್ಯಂತವಾಗಿ ಪ್ರಕಾಶಿಸುತ್ತಿದ್ದನು.

೩೦-೩೧. ಆ ಶಕ್ತ್ಯಾಯುಧದಿಂದ ಕುಮಾರನು ತಾರಕನನ್ನು ಬಲವಾಗಿ ಹೊಡೆದನು. ಆ ಪ್ರಹಾರದಿಂದ ಲೋಕಕಂಟಕನಾದ ತಾರಕನ ಶರೀರವು ಜರ್ಜರಿತವಾಯಿತು. ತಕ್ಷಣವೇ ಅವನು ಭೂಮಿಯಲ್ಲಿ ಬಿದ್ದನು.

೩೨. ಎಲ್ಲರೂ ನೋಡುತ್ತಿರಲು ಕುಮಾರನು ಆ ನೀಚನಾದ ತಾರಕನನ್ನು ಸಂಹಾರಮಾಡಿದನು. ಆ ತಾರಕನು ಯುದ್ಧರಂಗದಲ್ಲಿಯೇ ಸತ್ತುಹೋದನು.

ತಥಾ ತಂ ಪತಿತಂ ದೃಷ್ಟ್ವಾ ತಾರಕಂ ಬಲವತ್ತರಂ ।
ನ ಜಘಾನ ಪುನರ್ವೀರಸ್ಸ ಗತ್ವಾ ವ್ಯಸುಮಾನಹವೇ ॥ ೩೩ ॥

ಹತೇ ತಸ್ಮಿನ್ಮಹಾದೈತ್ಯೇ ತಾರಕಾಖ್ಯೇ ಮಹಾಖಲೇ ।
ಕ್ಷಯಂ ಪ್ರಣೀತಾ ಬಹವೋಽಸುರಾ ದೇವಗಣೈಸ್ತದಾ ॥ ೩೪ ॥

ಕೇಚಿದ್ಭೀತಾಃ ಪ್ರಾಂಜಲಯೋ ಬಭೂವುಸ್ತತ್ರ ಚಾಹವೇ ।
ಛಿನ್ನಭಿನ್ನಾಂಗಕಾಃ ಕೇಚಿನ್ಮೃತಾ ದೈತ್ಯಾಸ್ಸಹಸ್ರಶಃ ॥ ೩೫ ॥

ಕೇಚಿಜ್ಞಾತಾಃ ಕುಮಾರಸ್ಯ ಶರಣಂ ಶರಣಾರ್ಥಿನಃ ।
ವದಂತಃ ಪಾಹಿ ಪಾಹೀತಿ ದೈತ್ಯಾಃ ಸಾಂಜಲಯಸ್ತದಾ ॥ ೩೬ ॥

ಕಿಯಂತಶ್ಚ ಹತಾಸ್ತತ್ರ ಕಿಯಂತಶ್ಚ ಪಲಾಯಿತಾಃ ।
ಪಲಾಯಮಾನಾ ವ್ಯಥಿತಾಸ್ತಾಡಿತಾ ನಿರ್ಜರೈರ್ಗಣೈಃ ॥ ೩೭ ॥

ಸಹಸ್ರಶಃ ಪ್ರವಿಷ್ಟಾಸ್ತೇ ಪಾತಾಲೇ ಚ ಜಿಜೀಷವಃ ।
ಪಲಾಯಮಾನಾಸ್ತೇ ಸರ್ವೇ ಭಗ್ನಾಶಾ ದೈತ್ಯಮಾಗತಾಃ ॥ ೩೮ ॥

---

೩೩. ಬಲಿಷ್ಠನಾದ ತಾರಕನು ಮರಣಹೊಂದಲು ವೀರನಾದ ಆ ಕುಮಾರನು ಪುನಃ ಶಕ್ತ್ಯಾಯುಧವನ್ನು ಪ್ರಯೋಗಿಸಲಿಲ್ಲ.

೩೪. ಮಹಾಪರಾಕ್ರಮಿಯಾದ ಆ ತಾರಕಾಸುರನು ಮರಣಹೊಂದಲು ದೇವತೆಗಳೆಲ್ಲರೂ ಉಳಿದ ಅನೇಕ ಜನ ರಾಕ್ಷಸರನ್ನು ಕೊಂದುಹಾಕಿದರು.

೩೫-೩೬. ಕೆಲ ರಾಕ್ಷಸರು ಹೆದರಿ ಓಡಿದರು. ಕೆಲವರು ಬೇಡಿಕೊಂಡರು. ಕೆಲವರ ಶರೀರಗಳು ಚೂರುಚೂರಾದವು. ಮತ್ತೆ ಕೆಲವರು ಕುಮಾರನನ್ನು ಕಾಪಾಡು ಕಾಪಾಡು ಎಂಬುದಾಗಿ ಹೇಳುತ್ತಾ ಅವನನ್ನೇ ಶರಣುಹೊಂದಿದರು. ಈ ರೀತಿಯಾಗಿ ಸಹಸ್ರಾರು ಜನ ರಾಕ್ಷಸರು ಆ ಯುದ್ಧದಲ್ಲಿ ಮಡಿದರು.

೩೭-೩೮. ಎಷ್ಟೋ ಜನರು ಮಡಿದರು. ಎಷ್ಟೋ ಜನರು ಓಡಿಹೋದರು. ದೇವತೆಗಳು ಅನೇಕ ರಾಕ್ಷಸರನ್ನು ಹೊಡೆದೋಡಿಸಿದರು. ಪ್ರಾಣದಾಸೆಯಿಂದ ಅನೇಕ ಜನರು ಓಡಿಹೋಗಿ ಪಾತಾಲಲೋಕವನ್ನು ಸೇರುತ್ತಿದ್ದರು. ಎಲ್ಲರೂ ಭಗ್ನ ಮನೋಥರಾಗಿ ದುಃಖದಿಂದ ಓಡಿಹೋದರು.

ಏವಂ ಸರ್ವಂ ದೈತ್ಯಸೈನ್ಯಂ ಭ್ರಷ್ಟಂ ಜಾತಂ ಮುನೀಶ್ವರ ।
ನ ಕೇಚಿತ್ತತ್ರ ಸಂತಸ್ಥುರ್ಗಣದೇವಭಯಾತ್ತದಾ ॥ ೩೯ ॥

ಆಸೀನ್ನಿಷ್ಕಂಟಕಂ ಸರ್ವಂ ಹತೇ ತಸ್ಮಿನ್ ದುರಾತ್ಮನಿ ।
ತೇ ದೇವಾ ಸುಖಮಾಪನ್ನಾಸ್ಸರ್ವೇ ಶಕ್ರಾದಯಸ್ತದಾ ॥ ೪೦ ॥

ಏವಂ ವಿಜಯಮಾಪನ್ನಂ ಕುಮಾರಂ ನಿಖಿಲಾಸ್ಸುರಾಃ ।
ಬಭೂವುರ್ಯುಗಪದ್ಧೃಷ್ಟಾಸ್ತ್ರಿಲೋಕಾಶ್ಚ ಮಹಾಸುಖಾಃ ॥ ೪೧ ॥

ತದಾ ಶಿವೋऽಪಿ ತಂ ಜ್ಞಾತ್ವಾ ವಿಜಯಂ ಕಾರ್ತಿಕಸ್ಯ ಚ ।
ತತ್ರಾಜಗಾಮ ಸ ಮುದಾ ಸಗಣಃ ಪ್ರಿಯಯಾ ಸಹ ॥ ೪೨ ॥

ಸ್ವಾತ್ಮಜಂ ಸ್ವಾಂಕಮಾರೋಪ್ಯ ಕುಮಾರಂ ಸೂರ್ಯವರ್ಚಸಂ ।
ಲಾಲಯಾಮಾಸ ಸುಪ್ರೀತ್ಯಾ ಶಿವಾ ಚ ಸ್ನೇಹಸಂಕುಲಾ ॥ ೪೩ ॥

ಹಿಮಾಲಯಸ್ತದಾಗತ್ಯ ಸ್ವಪುತ್ರೈಃ ಪರಿವಾರಿತಃ ।
ಸಬಂಧುಸ್ಸಾನುಗಶ್ಶಂಭುಂ ತುಷ್ಟಾವ ಚ ಶಿವಾಂ ಗುಹಂ ॥ ೪೪ ॥

---

೩೯-೪೦. ಆ ದೇವತೆಗಳ ಮತ್ತು ಗಣಗಳ ಭಯದಿಂದ ಯುದ್ಧರಂಗದಲ್ಲಿ ಯಾವ ರಾಕ್ಷಸನೂ ನಿಲ್ಲಲಾಗಲಿಲ್ಲ. ಎಲ್ಲರೂ ಅತ್ತಿತ್ತ ಚದುರಿ ಓಡಿದರು. ದುರಾತ್ಮನಾದ ತಾರಕನು ಸಾಯಲು ದೇವತೆಗಳಿಗೆಲ್ಲರಿಗೂ ಸುಖವುಂಟಾಯಿತು. ಎಲ್ಲರೂ ಶತ್ರುರಹಿತರಾದರು.

೪೧. ತಾರಕನನ್ನು ಕೊಂದು ವಿಜಯಶಾಲಿಯಾದ ಕುಮಾರನನ್ನು ನೋಡಿ ದೇವತೆಗಳೆಲ್ಲರೂ ಆನಂದಪಟ್ಟರು. ಮೂರು ಲೋಕಕ್ಕೂ ಸುಖವುಂಟಾಯಿತು.

೪೨-೪೩. ಅನಂತರ ಶಿವನು ತನ್ನ ಮಗನು ಜಯಶೀಲನಾದನೆಂಬ ವಿಷಯವನ್ನು ತಿಳಿದು ಪಾರ್ವತಿಯೊಡನೆ ಅಲ್ಲಿಗೆ ಬಂದನು. ಆನಂದದಿಂದ ಕುಮಾರನನ್ನು ತೊಡೆಯಮೇಲೆ ಕೂರಿಸಿಕೊಂಡು ಮುದ್ದಿಸಿದನು. ಪಾರ್ವತಿಯೂ ಸಹ ಕುಮಾರನನ್ನು ತೊಡೆಯಮೇಲೆ ಕೂರಿಸಿಕೊಂಡು ವಾತ್ಸಲ್ಯದಿಂದ ಮುದ್ದಿಸಿದಳು.

೪೪. ಹಿಮವಂತನು ತನ್ನ ಪುತ್ರಮಿತ್ರಬಂಧುಬಳಗದವರೊಡನೆ ಅಲ್ಲಿಗೆ ಬಂದು ಪಾರ್ವತಿಪರಮೇಶ್ವರರನ್ನೂ ಷಣ್ಮುಗನನ್ನೂ ಹೊಗಳಿದನು.

ತತೋ ದೇವಗಣಾಸ್ಸರ್ವೇ ಮುನಯಸ್ಸಿದ್ಧಚಾರಣಾಃ ।
ತುಷ್ಟುವುಶ್ಯಾಂಕರೀಂ ಶಂಭುಂ ಗಿರಿಜಾಂ ತುಷಿತಾಂ ಭೃಶಂ ॥ ೪೫ ॥

ಪುಷ್ಪವೃಷ್ಟಿಂ ಸುಮಹತೀಂ ಚಕ್ರುಶ್ಚೋಪಸುರಾಸ್ತದಾ ।
ಜಗುರ್ಗಂಧರ್ವಪತಯೋ ನನೃತುಶ್ಚಾಪ್ಸರೋ ಗಣಾಃ ॥ ೪೬ ॥

ವಾದಿತ್ರಾಣಿ ತಥಾ ನೇದುಸ್ತದಾನೀಂ ಚ ವಿಶೇಷತಃ ।
ಜಯಶಬ್ದೋ ನಮಃಶಬ್ದೋ ಬಭೂವೋಚ್ಚೈರ್ಮುಹುರ್ಮುಹುಃ ॥ ೪೭ ॥

ತತೋ ಮಯಾಚ್ಯುತಶ್ಚಾಪಿ ಸಂತುಷ್ಟೋಽಭೂದ್ವಿಶೇಷತಃ ।
ಶಿವಂ ಶಿವಾಂ ಕುಮಾರಂ ಚ ಸಂತುಷ್ಟಾವ ಸಮಾದರಾತ್ ॥ ೪೮ ॥

ಕುಮಾರಮಗ್ರತಂ ಕೃತ್ವಾ ಹರಿರಿಂದ್ರಮುಖಾಸ್ಸುರಾಃ ।
ಚಕ್ರುರ್ನೀರಾಜನಂ ಪ್ರೀತ್ಯಾ ಮುನಯಶ್ಚಾಪರೇ ತಥಾ ॥ ೪೯ ॥

ಗೀತವಾದಿತ್ರಘೋಷೇಣ ಬ್ರಹ್ಮಘೋಷೇಣ ಭೂಯಸಾ ।
ತದೋತ್ಸವೋ ಮಹಾನಾಸೀತ್ಕೀರ್ತನಂ ಚ ವಿಶೇಷತಃ ॥ ೫೦ ॥

---

೪೫. ದೇವತೆಗಳೂ, ಪ್ರಮಥಗಣಗಳೂ, ಮುನಿಗಳೂ, ಸಿದ್ಧರೂ, ಚಾರಣರೂ ಗುಹನನ್ನೂ, ಪಾರ್ವತಿಪರಮೇಶ್ವರರನ್ನೂ ಸ್ತುತಿಸಿದರು.

೪೬-೪೭. ದೇವತೆಗಳು ಪುಷ್ಪವೃಷ್ಟಿಯನ್ನು ಕರೆದರು. ಗಂಧರ್ವರು ಗಾನಮಾಡಿದರು. ಅಪ್ಸರೆಯರು ನರ್ತಿಸಿದರು. ದೇವವಾದ್ಯಗಳನೇಕವು ಮೊಳಗಿದವು. ಜಯ ಜಯ ಎಂಬ ಶಬ್ದವನ್ನೂ ನಮಸ್ಕಾರನೆಂಬುದನ್ನೂ ಗಟ್ಟಿಯಾಗಿ ಆಗಾಗ ಧ್ವನಿಗೈಯುತ್ತಿದ್ದರು.

೪೮. ನಾನೂ (ಬ್ರಹ್ಮನು) ವಿಷ್ಣುವೂ ವಿಶೇಷವಾಗಿ ಸಂತೋಷಗೊಂಡು ಪಾರ್ವತಿಪರಮೇಶ್ವರರನ್ನೂ ಗುಹನನ್ನೂ ಆದರದಿಂದ ಸ್ತೋತ್ರಮಾಡಿದೆವು.

೪೯. ಇಂದ್ರ, ವಿಷ್ಣು ಮುಂತಾದ ದೇವತೆಗಳೂ, ಮುನಿಗಳೂ ಎಲ್ಲರೂ ಸೇರಿ ಕುಮಾರನನ್ನು ಮುಂದೆ ನಿಲ್ಲಿಸಿ ಆರತಿಯನ್ನು ಎತ್ತಿದರು.

೫೦. ಗೀತವಾದ್ಯಗಳು ಮೊಳಗುತ್ತಿರಲು, ಮುನಿಗಳು ವೇದಘೋಷವನ್ನು ಮಾಡುತ್ತಿರಲು, ವಿಶೇಷವಾಗಿ ಕೀರ್ತನೆಗಳನ್ನು ಹಾಡುತ್ತಾ ಕುಮಾರನೊಡಗೂಡಿ ದೇವತೆಗಳು ಮಹದಾನಂದವನ್ನು ಹೊಂದಿದರು.

ಗೀತವಾದ್ಯೈಸ್ಸುಪ್ರಸನ್ನೈಸ್ತಥಾ ಸಾಂಜಲಿಭಿರ್ಮುನೇ ।
ಸ್ತೂಯಮಾನೋ ಜಗನ್ನಾಥಸ್ಸರ್ವೈರ್ದೇವಗಣೈರಭೂತ್ ॥ ೫೧ ॥

ತತಸ್ಸ ಭಗವಾನ್ರುದ್ರೋ ಭವಾನ್ಯಾ ಜಗದಂಬಯಾ ।
ಸರ್ವೈಸ್ಸ್ತುತೋ ಜಗನ್ನಾಥ ಸ್ವಗಿರಿಂ ಸ್ವಗಣೈರ್ವೃತಃ ॥ ೫೨ ॥

ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಕುಮಾರಖಂಡೇ
ತಾರಕಾಸುರವಧದೇವೋತ್ಸವವರ್ಣನಂ ನಾಮ
ದಶಮೋಽಧ್ಯಾಯಃ



---

೫೧. ಗೀತವಾದ್ಯಗಳಿಂದ ಹರ್ಷಗೊಂಡ ದೇವತೆಗಳೂ, ಗಣಗಳೂ ಆ ಕುಮಾರನನ್ನು ಅಂಜಲಿಬದ್ಧರಾಗಿ ಸ್ತೋತ್ರಮಾಡಿದರು. ವಿಷ್ಣುವೂ ಸಹ ಅವರೊಡನೆ ಕುಮಾರನನ್ನು ಬಹುವಿಧವಾಗಿ ಸ್ತುತಿಸಿದನು.

೫೨. ದೇವತೆಗಳೆಲ್ಲರೂ ಸ್ತುತಿಸುತ್ತಿರಲು, ಈಶ್ವರನು ಜಗನ್ಮಾತೆಯಾದ ಪಾರ್ವತಿಯೊಡನೆಯೂ ತನ್ನ ಗಣಗಳೊಡನೆಯೂ ಕೂಡಿ ಕೈಲಾಸಪರ್ವತಕ್ಕೆ ತೆರಳಿದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿನ ರುದ್ರಸಂಹಿತೆಯ ಕುಮಾರಖಂಡದಲ್ಲಿ
ತಾರಕಾಸುರ ವಧದೇವೋತ್ಸವ ವರ್ಣನವೆಂಬ ಹತ್ತನೆಯ ಅಧ್ಯಾಯವು
ಮುಗಿದುದು.





121

॥ ಶ್ರೀಃ ॥

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ರುದ್ರಸಂಹಿತಾಯಾಂ ಕುಮಾರಖಂಡೇ

## ಏಕಾದಶೋಽಧ್ಯಾಯಃ

॥ ಬ್ರಹ್ಮೋವಾಚ ॥

ಏತಸ್ಮಿನ್ನಂತರೇ ತತ್ರ ಕ್ರೌಂಚನಾಮಾಚಲೋ ಮುನೇ ।
ಆಜಗಾಮ ಕುಮಾರಸ್ಯ ಶರಣಂ ಬಾಣಪೀಡಿತಃ ॥ ೧ ॥

ಪಲಾಯಮಾನೋ ಯೋ ಯುದ್ಧಾದಸೋಢಾ ತೇಜ ಐಶ್ವರಂ ।
ಹತೋದಾತೀವ ಸ ಕ್ರೌಂಚಂ ಕೋಟ್ಯಾಯುತಬಲಾನ್ವಿತಃ ॥ ೨ ॥

ಪ್ರಣಿಪತ್ಯ ಕುಮಾರಸ್ಯ ಸ ಭಕ್ತ್ಯಾ ಚರಣಾಂಬುಜಂ ।
ಪ್ರೇಮನಿರ್ಭರಯಾ ವಾಚಾ ತುಷ್ಟಾವ ಗುಹಮಾದರಾತ್ ॥ ೩ ॥

---

### ಹನ್ನೊಂದನೆಯ ಅಧ್ಯಾಯವು.

೧. ಬ್ರಹ್ಮನು ಹೇಳಿದನು:—ಎಲೈ ನಾರದನೇ, ಅನಂತರ ಕ್ರೌಂಚವೆಂಬ ಪರ್ವತವು ಬಾಣಾಸುರನಿಂದ ಪೀಡಿತವಾಗಿ ಬಂದು ಅವನನ್ನು ಶರಣುಹೊಂದಿತು.

೨. ತಾರಕನು ಸತ್ತನಂತರ ಅವನ ಕಡೆಯುವನಾದ ಬಾಣಾಸುರನು ಕುಮಾರನ ಪರಾಕ್ರಮವನ್ನು ತಡೆಯಲಾರದೆ ಯುದ್ಧದಿಂದ ಹಿಮ್ಮೆಟ್ಟಿ ಓಡಿಹೋಗಿ ತನ್ನ ಅಪಾರ ವಾದ ಸೇನೆಯೊಡಗೂಡಿ ಕ್ರೌಂಚಪರ್ವತವನ್ನು ಹಿಂಸಿಸಿದನು.

೩. ಆದಕ್ಕೋಸ್ಕರ ಕ್ರೌಂಚಪರ್ವತವು ಕುಮಾರನ ಹತ್ತಿರಕ್ಕೆ ಬಂದು ಅವನ ಪದಕಮಲಗಳಿಗೆ ನಮಸ್ಕರಿಸಿ ಭಕ್ತಿಯಿಂದ ಸ್ತೋತ್ರಮಾಡಿದನು.

॥ ಕ್ರೌಂಚ ಉವಾಚ ॥

ಕುಮಾರ ಸ್ಕಂದ ದೇವೇಶ ತಾರಕಾಸುರನಾಶಕ ।
ಪಾಹಿ ಮಾಂ ಶರಣಾಪನ್ನಂ ಬಾಣಾಸುರನಿಪೀಡಿತಂ ॥ ೪ ॥

ಸಂಗರಾತ್ತೇ ಮಹಾಸೇನ ಸಮುಚ್ಛಿನ್ನಃ ಪಲಾಯಿತಃ ।
ನ್ಯಪೀಡಯಚ್ಚ ಮಾಂ ಗತ್ವಾ ಹಾ ನಾಥ ಕರುಣಾಕರ ॥ ೫ ॥

ಪತ್ಪೀಡಿತಸ್ತೇ ಶರಣಮಾಗತೋऽಹಂ ಸುದುಃಖಿತಃ ।
ಪಲಾಯಮಾನೋ ದೇವೇಶ ಶರಜನ್ಮನ್ದಯಾಂ ಕುರು ॥ ೬ ॥

ದೈತ್ಯಂ ತಂ ನಾಶಯ ವಿಭೋ ಬಾಣಾಹ್ವಂ ಮಾಂ ಸುಖೀ ಕುರು ।
ದೈತ್ಯಘ್ನಸ್ತ್ವಂ ವಿಶೇಷೇಣ ದೇವಾವನಕರಸ್ಸ್ವರಾಟ್ ॥ ೭ ॥

॥ ಬ್ರಹ್ಮೋವಾಚ ॥

ಇತಿ ಕ್ರೌಂಚಸ್ತುತಃ ಸ್ಕಂದಃ ಪ್ರಸನ್ನೋ ಭಕ್ತಪಾಲಕಃ ।
ಗೃಹೀತ್ವಾ ಶಕ್ತಿಮತುಲಾಂ ಸ್ವಾಂ ಸಸ್ಮಾರ ಶಿವೋ ಧಿಯಾ ॥ ೮ ॥

---

೪-೬. ಕ್ರೌಂಚನು ಹೇಳಿದನು :—ಎಲೈ ಸ್ಕಂದನೇ, ನೀನು ದೇವತೆಗಳಿಗೆ ಪ್ರಭುವು. ತಾರಕಾಸುರನನ್ನು ಕೊಂದವನು. ದೇವಾಸುರರ ಯುದ್ಧದಲ್ಲಿ ನಿನ್ನ ಏಟನ್ನು ತಾಳಲಾರದೆ ಬಾಣಾಸುರನು ಓಡಿದನಷ್ಟೆ? ಅವನು ನನ್ನಲ್ಲಿಗೆ ಬಂದು ನನ್ನನ್ನು ಹಿಂಸಿಸುತ್ತಿರುವನು. ನಾನು ಅತ್ಯಂತ ದುಃಖವನ್ನನುಭವಿಸುತ್ತಿರುವೆನು. ಅದಕ್ಕೋಸ್ಕರ ನಿನ್ನನ್ನು ಶರಣುಹೊಂದಿರುವೆನು. ನನ್ನನ್ನು ಕಾಪಾಡು. ಕರುಣಾಕರನಾದ ನೀನು ನನ್ನಲ್ಲಿ ದಯವಿಡು.

೭. ಆ ಬಾಣಾಸುರನನ್ನು ಕೊಂದು ನನಗೆ ಉಂಟಾಗಿರುವ ಹಿಂಸೆಯನ್ನು ತಪ್ಪಿಸಿ ಸುಖವನ್ನುಂಟುಮಾಡು. ದೈತ್ಯಘಾತುಕನಾದ ನಿನಗೆ ದೇವತೆಗಳನ್ನು ಕಾಪಾಡುವುದು ಕರ್ತವ್ಯವಲ್ಲವೇ ಎಂದನು.

೮-೯. ಬ್ರಹ್ಮನು ಹೇಳಿದನು:—ಕ್ರೌಂಚನು ಕುಮಾರನನ್ನು ಈ ರೀತಿಯಾಗಿ ಸ್ತುತಿಸಲು, ಭಕ್ತಪಾಲಕನಾದ ಕುಮಾರನು ಶಿವನನ್ನು ಮನದಲ್ಲಿ ಧ್ಯಾನಿಸಿ, ಮಹತ್ತರವಾದ ಶಕ್ತ್ಯಾಯುಧವನ್ನು ತೆಗೆದುಕೊಂಡು ಬಾಣಾಸುರನನ್ನು ಉದ್ದೇಶಿಸಿ ಅದ

ಚಿಕ್ಷೇಪ ತಾಂ ಸಮುದ್ದಿಶ್ಯ ಸ ಬಾಣಂ ಶಂಕರಾತ್ಮಜಃ ।
ಮಹಾಶಬ್ದೋ ಬಭೂವಾಥ ಜಜ್ವಲುಶ್ಚ ದಿಶೋ ನಭಃ ॥ ೯ ॥

ಸಬಲಂ ಭಸ್ಮಸಾತ್ಕೃತ್ವಾಸುರಂ ತಂ ಕ್ಷಣಮಾತ್ರತಃ ।
ಗುಹೋಪಕಂಠಂ ಶಕ್ತಿಸ್ಸಾ ಜಗಾಮ ಪರಮಾ ಮುನೇ ॥ ೧೦ ॥

ತತಃ ಕುಮಾರಃ ಪ್ರೋವಾಚ ಕ್ರೌಂಚಂ ಗಿರಿವರೇಶ್ವರಂ ।
ನಿರ್ಭಯಃ ಸ್ವಗೃಹಂ ಗಚ್ಛ ನಷ್ಟಸ್ಸ ಸಬಲೋಽಸುರಃ ॥ ೧೧ ॥

ತಚ್ಛ್ರುತ್ವಾ ಸ್ವಾಮಿವಚನಂ ಮುದಿತೋ ಗಿರಿರಾಟ್ ತದಾ ।
ಸ್ತುತ್ವಾ ಗುಹಂ ತದಾರಾತಿಂ ಸ್ವಧಾಮ ಪ್ರತಿಪದ್ಯತ ॥ ೧೨ ॥

ತತಃ ಸ್ಕಂದೋ ಮಹೇಶಸ್ಯ ಮುದಾ ಸ್ಥಾಪಿತವಾನ್ಮುನೇ ।
ತ್ರೀಣಿ ಲಿಂಗಾನಿ ತತ್ರೈವ ಪಾಪಘ್ನಾನಿ ವಿಧಾನತಃ ॥ ೧೩ ॥

ಪ್ರತಿಜ್ಞೇಶ್ವರನಾಮಾದೌ ಕಪಾಲೇಶ್ವರಮಾದರಾತ್ ।
ಕುಮಾರೇಶ್ವರಮೇವಾಥ ಸರ್ವಸಿದ್ಧಿಪ್ರದಂ ತ್ರಯಂ ॥ ೧೪ ॥

---

ರಿಂದ ಹೊಡೆದನು. ಆಗ ಮಹಾಶಬ್ದವಾಯಿತು. ದಶದಿಕ್ಕುಗಳೂ, ಆಕಾಶವೂ ಜ್ವಲಿಸಿದವು.

೧೦. ಆ ಶಕ್ತ್ಯಾಯುಧವು ಬಾಣಾಸುರನನ್ನೂ ಅವನ ಸೈನಿಕರನ್ನೂ ಸುಟ್ಟು ಭಸ್ಮಮಾಡಿ ಪುನಃ ಗುಹನ ಸಮೀಪಕ್ಕೆ ಬಂದಿತು.

೧೧-೧೨. ಆ ಮೇಲೆ ಕುಮಾರನು ಆ ಕ್ರೌಂಚಪರ್ವತವನ್ನು ಕುರಿತು ನೀನು ನಿರ್ಭಯನಾಗಿ ನಿನ್ನ ಮನೆಗೆ ಹೋಗು. ಬಾಣಾಸುರನೂ ಅವನ ಸೈನಿಕರೂ ಸತ್ತುಹೋದರು. ಎಂದು ಹೇಳಲು ಆ ಗಿರಿರಾಜನು ಅದನ್ನು ಕೇಳಿ ಸಂತೋಷಪಟ್ಟು ಗುಹನನ್ನು ಸ್ತುತಿಸಿ ತನ್ನ ಮನೆಗೆ ಹೊರಟುಹೋದನು.

೧೩-೧೪. ಅನಂತರ ಸ್ಕಂದನು ಆ ಸ್ಥಳದಲ್ಲಿ ಪ್ರತಿಜ್ಞೇಶ್ವರ, ಕಪಾಲೇಶ್ವರ, ಕುಮಾರೇಶ್ವರ ಎಂಬ ಮೂರು ಲಿಂಗಗಳನ್ನು ಪ್ರತಿಷ್ಠಿಸಿದನು. ಇವು ಪಾಪವನ್ನು ನಾಶಮಾಡಿ ಸರ್ವೇಷ್ಟಾರ್ಥಗಳನ್ನೂ ಕೊಡುವುದು.

ಪುನಸ್ಸರ್ವೇಶ್ವರಸ್ತತ್ರ ಜಯಸ್ತಂಭಸಮೀಪತಃ ।
ಸ್ತಂಭೇಶ್ವರಾಭಿಧಂ ಲಿಂಗಂ ಗುಹಃ ಸ್ಥಾಪಿತವಾನ್ಮುದಾ ॥ ೧೫ ॥

ತತಃ ಸರ್ವೇ ಸುರಾಸ್ತತ್ರ ವಿಷ್ಣುಪ್ರಭೃತಯೋ ಮುದಾ ।
ಲಿಂಗಂ ಸ್ಥಾಪಿತವಂತಸ್ತೇ ದೇವದೇವಸ್ಯ ಶೂಲಿನಃ ॥ ೧೬ ॥

ಸರ್ವೇಷಾಂ ಶಿವಲಿಂಗಾನಾಂ ಮಹಿಮಾಭೂತ್ತದಾದ್ಭುತಃ ।
ಸರ್ವಕಾಮಪ್ರದಶ್ಚಾಪಿ ಮುಕ್ತಿದೋ ಭಕ್ತಿಕಾರಿಣಾಂ ॥ ೧೭ ॥

ತತಸ್ಸರ್ವೇ ಸುರಾ ವಿಷ್ಣುಪ್ರಮುಖಾಃ ಪ್ರೀತಮಾನಸಾಃ ।
ಐಚ್ಛನ್ ಗಿರಿವರಂ ಗಂತುಂ ಪುರಸ್ಕೃತ್ಯ ಗುರುಂ ತದಾ ॥ ೧೮ ॥

ತಸ್ಮಿನ್ನವಸರೇ ಶೇಷಪುತ್ರಃ ಕುಮುದನಾಮಕಃ ।
ಆಜಗಾಮ ಕುಮಾರಸ್ಯ ಶರಣಂ ದೈತ್ಯಪೀಡಿತಃ ॥ ೧೯ ॥

---

೧೫. ಪುನಃ ಸರ್ವೇಶ್ವರನಾದ ಕುಮಾರನು ಸ್ತಂಭೇಶ್ವರವೆಂಬ ಲಿಂಗವನ್ನು ಜಯಸ್ತಂಭದ ಸಮೀಪದಲ್ಲಿ ಸ್ಥಾಪಿಸಿದನು.

೧೬. ವಿಷ್ಣುವೇ ಮೊದಲಾದ ದೇವತೆಗಳೂ ಸಹ ದೇವದೇವನಾದ ಪರಮೇಶ್ವರನ ಲಿಂಗವನ್ನು ಅಲ್ಲಿ ಸ್ಥಾಪಿಸಿದರು.

೧೭. ಅಲ್ಲಿ ಪ್ರತಿಷ್ಠೆಮಾಡಿದ ಶಿವಲಿಂಗಗಳೆಲ್ಲಾ ಅದ್ಭುತ ಮಹಿಮೆಯಿಂದ ಕೂಡಿ ಇಷ್ಟಾರ್ಥದಾಯಕವಾಗಿದ್ದುವು. ಭಕ್ತರಿಗೆ ಮುಕ್ತಿಯನ್ನೂ ಉಂಟುಮಾಡುತ್ತಿದ್ದವು.

೧೮-೧೯. ಎಲ್ಲವೂ ಮುಗಿದನಂತರ ವಿಷ್ಣುವೇ ಮೊದಲಾದ ದೇವತೆಗಳೆಲ್ಲರೂ ಸಂತೋಷಪಟ್ಟು ಗುಹನನ್ನು ಕರೆದುಕೊಂಡು ಕೈಲಾಸಪರ್ವತಕ್ಕೆ ಹೋಗಬೇಕೆಂದಿರುವಷ್ಟರಲ್ಲಿ ಆದಿಶೇಷನ ಮಗನಾದ ಕುಮುದನೆಂಬುವನು ರಾಕ್ಷಸರ ಬಾಧೆಯನ್ನು ತಾಳಲಾರದೆ ಓಡಿಬಂದು ಕುಮಾರನನ್ನು ಶರಣುಹೊಂದಿದನು.

ಪ್ರಲಂಬಾಖ್ಯೋಽಸುರೋ ಯೋ ಹಿ ರಣಾದಸ್ಮಾತ್ಪಲಾಯಿತಃ ।
ಸ ತತ್ರೋಪದ್ರವಂ ಚಕ್ರೇ ಪ್ರಬಲಸ್ತಾರಕಾನುಗಃ ॥ ೨೦ ॥

ಸೋಽಥ ಶೇಷಸ್ಯ ತನಯಃ ಕುಮುದೋಽಹಿಪತೇರ್ಮಹಾನ್ ।
ಕುಮಾರಂ ಶರಣಂ ಪ್ರಾಪ್ತಸ್ತುಷ್ಟಾವ ಗಿರಿಜಾತ್ಮಜಂ ॥ ೨೧ ॥

॥ ಕುಮುದ ಉವಾಚ ॥

ದೇವದೇವ ಮಹಾದೇವ ವರತಾತ ಮಹಾಪ್ರಭೋ ।
ಪೀಡಿತೋಽಹಂ ಪ್ರಲಂಬೇನ ತ್ವಾಹಂ ಶರಣಮಾಗತಃ ॥ ೨೨ ॥

ಪಾಹಿ ಮಾಂ ಶರಣಾಪನ್ನಂ ಪ್ರಲಂಬಾಸುರಪೀಡಿತಂ ।
ಕುಮಾರ ಸ್ಕಂದ ದೇವೇಶ ತಾರಕಾರೇ ಮಹಾಪ್ರಭೋ ॥ ೨೩ ॥

ತ್ವಂ ದೀನಬಂಧುಃ ಕರುಣಾಸಿಂಧುರಾನತವತ್ಸಲಃ ।
ಖಲನಿಗ್ರಹಕರ್ತಾ ಹಿ ಶರಣ್ಯಶ್ಚ ಸತಾಂ ಗತಿಃ ॥ ೨೪ ॥

ಕುಮುದೇನ ಸ್ತುತಶ್ಚೇತ್ಥಂ ವಿಜ್ಞಪ್ತಸ್ತದ್ವಧಾಯ ಹಿ ।
ಸ್ವಾಂ ಚ ಶಕ್ತಿಂ ಸ ಜಗ್ರಾಹ ಸ್ಮೃತ್ವಾ ಶಿವಪದಾಂಬುಜೌ ॥ ೨೫ ॥

---

೨೦-೨೧. ದೇವಾಸುರರ ಯುದ್ಧದಲ್ಲಿ ತಾರಕನು ಮೃತನಾಗಲು ಪ್ರಲಂಬನೆಂಬ ರಾಕ್ಷಸನು ಹೆದರಿ ಓಡಿ ಹೋಗಿ ಕುಮುದನನ್ನು ಹಿಂಸಿಸುತ್ತಿದ್ದನು. ಅವನು ಫಣೀಂದ್ರನಾದ ಆದಿಶೇಷನ ಮಗನು. ಈಗ ಕುಮಾರನನ್ನು ಶರಣುಹೊಂದಿ ಸ್ತೋತ್ರ ಮಾಡಿದನು.

೨೨-೨೪. ಕುಮುದನು ಹೇಳಿದನು :—ದೇವದೇವನಾದ ಕುಮಾರನೇ, ಪ್ರಲಂಬಾಸುರನು ನನ್ನನ್ನು ಹಿಂಸಿಸುತ್ತಿರುವನು. ಮಹಾಪ್ರಭುವಾದ ನಿನ್ನನ್ನು ಮರೆ ಹೊಕ್ಕಿರುವೆನು. ನನ್ನನ್ನು ಕಾಪಾಡು. ನೀನು ತಾರಕನನ್ನು ಕೊಂದ ವೀರನು, ದೀನಬಂಧುವು, ಕರುಣಾಸಾಗರನು, ಭಕ್ತವತ್ಸಲನು, ದುಷ್ಟರನ್ನು ನಾಶಮಾಡಿ ಸತ್ಪುರುಷರನ್ನು ರಕ್ಷಿಸುವುದು ನಿನಗೆ ಸೇರಿದುದು.

೨೫-೨೬. ಕುಮುದನು ಈರೀತಿಯಾಗಿ ಕುಮಾರನನ್ನು ಸ್ತುತಿಸಿ ತನ್ನ ವಿಷಯವನ್ನು ವಿಜ್ಞಾಪಿಸಿಕೊಳ್ಳಲು, ಅದನ್ನು ಕೇಳಿ ಕುಮಾರನು ಶಿವನ ಚರಣ

ಚಿಕ್ಷೇಪ ತಾಂ ಸಮುದ್ದಿಶ್ಯ ಪ್ರಲಂಬಂ ಗಿರಿಜಾಸುತಃ ।
ಮಹಾಶಬ್ದೋ ಬಭೂವಾಥ ಜಜ್ವಲುಶ್ಚ ದಿಶೋ ನಭಃ ॥ ೨೬ ॥

ತಂ ಸಾಯುತಬಲಂ ಶಕ್ತಿರ್ದ್ರುತಂ ಕೃತ್ವಾ ಚ ಭಸ್ಮಸಾತ್ ।
ಗುಹೋಪಕಂಠಂ ಸಹಸಾ ಜಗಾಮಾಕ್ಲಿಷ್ಟಕಾರಿಣೀ ॥ ೨೭ ॥

ತತಃ ಕುಮಾರಃ ಪ್ರೋವಾಚ ಕುಮುದಂ ನಾಗಬಾಲಕಂ ।
ನಿರ್ಭಯಃ ಸ್ವಗೃಹಂ ಗಚ್ಛ ನಷ್ಟಸ್ಸ ಸಬಲೋಽಸುರಃ ॥ ೨೮ ॥

ತಚ್ಛ್ರುತ್ವಾ ಗುಹವಾಕ್ಯಂ ಸ ಕುಮುದೋಽಹಿಪತೇಸ್ಸುತಃ ।
ಸ್ತುತ್ವಾ ಕುಮಾರಂ ನತ್ವಾ ಚ ಪಾತಾಲಂ ಮುದಿತೋ ಯಯೌ ॥ ೨೯ ॥

ಏವಂ ಕುಮಾರವಿಜಯಂ ವರ್ಣಿತಂ ಮೇ ಮುನೀಶ್ವರ ।
ಚರಿತಂ ತಾರಕವಧಂ ಪರಮಾಶ್ಚರ್ಯಕಾರಕಂ ॥ ೩೦ ॥

ಸರ್ವಪಾಪಹರಂ ದಿವ್ಯಂ ಸರ್ವಕಾಮಪ್ರದಂ ನೃಣಾಂ ।
ಧನ್ಯಂ ಯಶಸ್ಯಮಾಯುಷ್ಯಂ ಭುಕ್ತಿಮುಕ್ತಿಪ್ರದಂ ಸತಾಂ ॥ ೩೧ ॥

---

ಕಮಲವನ್ನು ಧ್ಯಾನಮಾಡಿ ಶಕ್ತ್ಯಾಯುಧವನ್ನು ತೆಗೆದುಕೊಂಡು ಪ್ರಲಂಬಾಸುರನ ಕಡೆಗೆ ಹೊಡೆದನು. ಆಗ ಮಹಾಶಬ್ದವುಂಟಾಗಿ ದಶದಿಕ್ಕುಗಳೂ ಪ್ರಜ್ವಲಿಸಿದವು.

೨೭. ಆ ಶಕ್ತ್ಯಾಯುಧವು ಪ್ರಲಂಬಾಸುರನನ್ನು ಸೈನ್ಯಸಮೇತವಾಗಿ ಸುಟ್ಟು ಭಸ್ಮಮಾಡಿ ಜಾಗ್ರತೆಯಾಗಿ ಗುಹನ ಸಮೀಪಕ್ಕೆ ಬಂದು ಸೇರಿತು.

೨೮-೨೯. ಆಮೇಲೆ ಕುಮಾರನು ಕುಮುದನನ್ನು ಕುರಿತು ಆ ಪ್ರಲಂಬಾಸುರನು ಸೈನ್ಯಸಮೇತನಾಗಿ ಮಡಿದನು. ನೀನು ನಿರ್ಭಯನಾಗಿ ನಿನ್ನ ಮನೆಗೆ ಹೋಗು ಎಂದು ಹೇಳಿದನು. ಗುಹನ ವಾಕ್ಯವನ್ನು ಕೇಳಿ ಶೇಷಸುತನಾದ ಕುಮುದನು ಕುಮಾರನನ್ನು ಸ್ತುತಿಸಿ ಸಂತೋಷದಿಂದ ಪಾತಾಳಕ್ಕೆ ಹೊರಟುಹೋದನು.

೩೦-೩೧. ಎಲೈ ಮುನೀಶ್ವರನೇ, ಈ ರೀತಿಯಾಗಿ ಪರಮಾಶ್ಚರ್ಯಕರವಾದ ತಾರಕವಧೆಯನ್ನೂ ಕುಮಾರನ ವಿಜಯವನ್ನೂ ವರ್ಣಿಸಿರುವೆನು. ಇದು ಸರ್ವ ಪಾಪವನ್ನೂ ನಾಶಮಾಡುವುದು. ಇದನ್ನು ಕೇಳಿದವರಿಗೆ ಇಷ್ಟಾರ್ಥಗಳೆಲ್ಲವೂ ನೆರ ವೇರುವುದು. ಸತ್ಪುರುಷರಿಗೆ ಕೀರ್ತಿಯೂ, ಆಯುಸ್ಸು, ಭುಕ್ತಿ, ಮುಕ್ತಿ ಎಲ್ಲವೂ ಉಂಟಾಗುವುದು.

ಶ್ರೋಷ್ಯಂತಿ ಯೇ ಚ ತತ್ಕೀರ್ತಿಂ ಭಕ್ತ್ಯಾ ಶ್ರದ್ಧಾನ್ವಿತಾ ಜನಾಃ ।
ಕುಮಾರಚರಿತಂ ದಿವ್ಯಂ ಶಿವಲೋಕಂ ಪ್ರಯಾಂತಿ ತೇ ॥ ೩೨ ॥

ಯೇ ಕೀರ್ತಯಂತಿ ಸುಯಶೋಽಮಿತಭಾಗ್ಯಯುತಾ ನರಾಃ ।
ಮುಕ್ತಿಂ ಪ್ರಾಪ್ಸ್ಯಂತಿ ತೇ ದಿವ್ಯಾಮಿಹ ಭುಕ್ತ್ವಾ ಪರಂ ಸುಖಂ ॥ ೩೩ ॥

ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಕುಮಾರಖಂಡೇ
ಬಾಣಪ್ರಲಂಬವಧಕುಮಾರವಿಜಯವರ್ಣನಂ ನಾಮ
ಏಕಾದಶೋಽಧ್ಯಾಯಃ

---

೩೨-೩೩. ಯಾರು ದಿವ್ಯವಾದ ಈ ಕುಮಾರನ ಚರಿತ್ರೆಯನ್ನು ಕೇಳುವರೋ, ಮತ್ತು ಶ್ರದ್ಧೆಯಿಂದ ಕೂಡಿ ಅವನ ಕೀರ್ತಿಯನ್ನು ಕೊಂಡಾಡುವರೋ ಅವರು ಈ ಲೋಕದಲ್ಲಿ ಪರಮಸುಖವನ್ನನುಭವಿಸಿ ಪರದಲ್ಲಿ ಶ್ರೇಷ್ಠವಾದ ಶಿವಲೋಕವನ್ನು ಪಡೆಯುವರು.

ಇಲ್ಲಿಗೆ ಶ್ರೀಶಿವಮಹಾಪುರಾಣದಲ್ಲಿನ ರುದ್ರಸಂಹಿತೆಯ ಕುಮಾರಖಂಡದಲ್ಲಿ ಬಾಣ,
ಪ್ರಲಂಬವಧ, ಕುಮಾರವಿಜಯವರ್ಣನವೆಂಬ ಹನ್ನೊಂದನೆಯ
ಅಧ್ಯಾಯವು ಮುಗಿದುದು.



॥ ಶ್ರೀ ॥ ೯:

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಕುಮಾರಖಂಡೇ

## ದ್ವಾದಶೋಽಧ್ಯಾಯಃ

॥ ಬ್ರಹ್ಮೋವಾಚ ॥

ನಿಹತಂ ತಾರಕಂ ದೃಷ್ಟ್ವಾ ದೇವಾ ವಿಷ್ಣುಪುರೋಗಮಾಃ ।
ತುಷ್ಟುವುಶ್ಶಾಂಕರಿಂ ಭಕ್ತ್ಯಾ ಸರ್ವೇಽನ್ಯೇ ಮುದಿತಾನನಾಃ ॥ ೧ ॥

॥ ದೇವಾ ಊಚುಃ ॥

ನಮಃ ಕಲ್ಯಾಣರೂಪಾಯ ನಮಸ್ತೇ ವಿಶ್ವಮಂಗಲ ।
ವಿಶ್ವಬಂಧೋ ನಮಸ್ತೇಽಸ್ತು ನಮಸ್ತೇ ವಿಶ್ವಭಾವನ ॥ ೨ ॥

---

### ಹನ್ನೆರಡನೆಯ ಅಧ್ಯಾಯವು.

೧. ಬ್ರಹ್ಮನು ಹೇಳಿದನು :—ತಾರಕಾಸುರನು ಯುದ್ಧದಲ್ಲಿ ಮಡಿದನಂತರ ವಿಷ್ಣುವೇ ಮೊದಲಾದ ದೇವತೆಗಳು ಸಂತೋಷಗೊಂಡು ಆ ಕುಮಾರನನ್ನು ಭಕ್ತಿಯಿಂದ ಸ್ತುತಿಸಿದರು.

೨-೩. ದೇವತೆಗಳು ಸ್ತುತಿಸಿದರು :—ಮಂಗಳರೂಪನಾದ ಎಲೈ ಕುಮಾರನೆ, ನಿನಗೆ ನಮಸ್ಕಾರವು. ನೀನು ಲೋಕಕ್ಕೆ ಮಂಗಳವನ್ನುಂಟುಮಾಡುವವನು. ವಿಶ್ವಬಂಧುವೂ ವಿಶ್ವಭಾವನನೂ ಆದ ನಿನಗೆ ನಮಸ್ಕಾರವು. ತಾರಕಾಸುರ, ಬಾಣಾಸುರ,

ನಮೋಽಸ್ತು ತೇ ದಾನವವರ್ಯಹಂತ್ರೇ
ಬಾಣಾಸುರಪ್ರಾಣಹರಾಯ ದೇವ ।
ಪ್ರಲಂಬನಾಶಾಯ ಪವಿತ್ರರೂಪಿಣೇ
ನಮೋ ನಮಶ್ಶಂಕರತಾತ ತುಭ್ಯಂ ॥ ೩ ॥

ತ್ವಮೇವ ಕರ್ತಾ ಜಗತಾಂ ಚ ಭರ್ತಾ
ತ್ವಮೇವ ಹರ್ತಾ ಶುಚಿಜ ಪ್ರಸೀದ ।
ಪ್ರಪಂಚಭೂತಸ್ತವ ಲೋಕ ಬಿಂಬಃ
ಪ್ರಸೀದ ಶಂಭ್ವಾತ್ಮಜ ದೀನಬಂಧೋ ॥ ೪ ॥

ದೇವರಕ್ಷಾಕರಸ್ವಾಮಿನ್ ರಕ್ಷ ನಃ ಸರ್ವದಾ ಪ್ರಭೋ ।
ದೇವಪ್ರಾಣಾವನಕರ ಪ್ರಸೀದ ಕರುಣಾಕರ ॥ ೫ ॥

ಹತ್ವಾ ತೇ ತಾರಕಂ ದೈತ್ಯಂ ಪರಿವಾರಯುತಂ ವಿಭೋ ।
ಮೋಚಿತಾಸ್ಸಕಲಾ ದೇವಾ ವಿಪದ್ಭ್ಯಃ ಪರಮೇಶ್ವರ ॥ ೬ ॥

॥ ಬ್ರಹ್ಮೋವಾಚ ॥

ಏವಂ ಸ್ತುತಃ ಕುಮಾರೋಽಸೌ ದೇವೈರ್ವಿಷ್ಣುಮುಖೈಃ ಪ್ರಭುಃ ।
ವರಾನ್ ದದಾವಭಿನವಾನ್ಸರ್ವೇಭ್ಯಃ ಕ್ರಮಶೋ ಮುನೇ ॥ ೭ ॥

---

ಪ್ರಲಂಬಾಸುರ ಮೊದಲಾದ ಅನೇಕ ದೈತ್ಯರನ್ನು ಕೊಂದು ಲೋಕಕ್ಕೆ ಸುಖವನ್ನುಂಟು ಮಾಡಿದ ಪವಿತ್ರರೂಪನಾದ ನಿನಗೆ ನಮಸ್ಕಾರವು.

೪-೫. ಪ್ರಪಂಚದ ಸೃಷ್ಟಿಕರ್ತನೂ ಅದರ ರಕ್ಷಕನೂ ಅದನ್ನು ಸಂಹರಿಸುವವನೂ ನೀನೇ. ಅಗ್ನಿಪುತ್ರನಾದ ನೀನು ನಮಗೆ ಪ್ರಸನ್ನನಾಗು. ಪ್ರಪಂಚಸ್ವರೂಪನೂ ದೀನಬಂಧುವೂ ಆದ ನೀನು ನಮ್ಮನ್ನು ಕಾಪಾಡು. ದೇವತೆಗಳನ್ನು ಯಾವಾಗಲೂ ಕಾಪಾಡುವುದು ನಿನಗೆ ಸೇರಿದುದು. ದೇವತೆಗಳ ಪ್ರಾಣರಕ್ಷಕನಾದ ನೀನು ನಮ್ಮಲ್ಲಿ ದಯವಿಟ್ಟು ಪ್ರಸನ್ನನಾಗು.

೬. ಎಲೈ ಪ್ರಭುವೇ, ನೀನು ಯುದ್ಧದಲ್ಲಿ ತಾರಕನನ್ನು ಅವನ ಸೈನಿಕರೊಡನೆ ವಧೆಮಾಡಿ ನಮ್ಮ ಕಷ್ಟವನ್ನೆಲ್ಲಾ ನಿವಾರಿಸಿದೆ. ನೀನು ಪರಮೇಶ್ವರನು ಮತ್ತು ವ್ಯಾಪಕನು ಎಂದು ಸ್ತೋತ್ರಮಾಡಿದರು.

೭. ಬ್ರಹ್ಮನು ಹೇಳಿದನು :—ದೇವತೆಗಳೆಲ್ಲರೂ ಈರೀತಿಯಾಗಿ ಕುಮಾರನನ್ನು ಸ್ತುತಿಸುತ್ತಿರಲು ಕುಮಾರನು ಎಲ್ಲರಿಗೂ ಕ್ರಮವಾಗಿ ವರಗಳನ್ನು ಕರುಣಿಸಿದನು.

ಶೈಲಾನ್ನಿರೀಕ್ಷ್ಯ ಸ್ತುವತಸ್ತತಸ್ಸ ಗಿರಿಶಾತ್ಮಜಃ ।
ಸುಪ್ರಸನ್ನತರೋ ಭೂತ್ವಾ ಪ್ರೋವಾಚ ಪ್ರದದದ್ವರಾ‌ ॥ ೮ ॥

॥ ಸ್ಕಂದ ಉವಾಚ ॥

ಯೂಯಂ ಸರ್ವೇ ಪರ್ವತಾ ಹಿ ಪೂಜನೀಯಾಸ್ತಪಸ್ವಿಭಿಃ ।
ಕರ್ಮಿಭಿರ್ಜ್ಞಾನಿಭಿಶ್ಚೈವ ಸೇವ್ಯಮಾನಾ ಭವಿಷ್ಯಥ ॥ ೯ ॥

ಶಂಭೋರ್ವಿಶಿಷ್ಟರೂಪಾಣಿ ಲಿಂಗರೂಪಾಣಿ ಚೈವ ಹಿ ।
ಭವಿಷ್ಯಥ ನ ಸಂದೇಹಃ ಪರ್ವತಾ ವಚನಾನ್ಮಮ ॥ ೧೦ ॥

॥ ದೇವಾ ಊಚುಃ ॥

ಯೋಽಯಂ ಮಾತಾಮಹೋ ಮೇಽದ್ಯ ಹಿಮವಾನ್ಪರ್ವತೋತ್ತಮಃ ।
ತಪಸ್ವಿನಾಂ ಮಹಾಭಾಗಃ ಫಲದೋ ಹಿ ಭವಿಷ್ಯತಿ ॥ ೧೧ ॥

ಏವಂ ದತ್ವಾ ವರಾ‌ ಹತ್ವಾ ತಾರಕಂ ಚಾಸುರಾಧಿಪಂ ।
ತ್ವಯಾ ಕೃತಾಶ್ಚ ಸುಖಿನೋ ವಯಂ ಸರ್ವೇ ಚರಾಚರಾಃ ॥ ೧೨ ॥

---

೮. ಮೊದಲು ತನ್ನನ್ನು ಸ್ತುತಿಸುತ್ತಿರುವ ಪರ್ವತಗಳನ್ನು ನೋಡಿ ಅತ್ಯಂತ ಪ್ರಸನ್ನನಾಗಿ ಅವುಗಳಿಗೆ ವರವನ್ನು ಕೊಟ್ಟನು.

೯-೧೦. ಸ್ಕಂದನು ಹೇಳಿದನು:---ಎಲೈ ಪರ್ವತಗಳಿರಾ, ನೀವೆಲ್ಲರೂ ತಪಸ್ವಿಗಳ ಪೂಜೆಗೆ ಅರ್ಹರಾಗಿರಿ. ಕರ್ಮಮಾಡುವವರೂ, ಜ್ಞಾನಿಗಳೂ ನಿಮ್ಮನ್ನು ಸೇವಿಸುವರು. ನನ್ನ ಅನುಗ್ರಹದಿಂದ ಈಶ್ವರನ ವಿಶಿಷ್ಟರೂಪವಾದ ಲಿಂಗರೂಪಗಳನ್ನು ಹೊಂದಿ ಸುಖವಾಗಿರಿ. ಈ ವಿಷಯದಲ್ಲಿ ಸಂದೇಹವಿಲ್ಲ.

೧೧. ನನ್ನ ತಾತನೂ ಪರ್ವತಶ್ರೇಷ್ಠನೂ ಆದ ಹಿಮವಂತನು ತಪಸ್ವಿಗಳಿಗೆ ಆಶ್ರಯಭೂತನಾಗಿ ಫಲದಾಯಕನಾಗಿರುವನು.

೧೨-೧೩. ದೇವತೆಗಳು ಹೇಳಿದರು:—ಎಲೈ ಸ್ಕಂದನೇ, ತಾರಕಾಸುರನನ್ನು ಕೊಂದು ಎಲ್ಲರಿಗೂ ವರಗಳನ್ನು ಕರುಣಿಸಿರುವೆ. ನಾವೂ ಚರಾಚರಗಳೆಲ್ಲವೂ ಸುಖವನ್ನು ಹೊಂದಿರುವೆವು. ಈಗ ನೀನು ಸಂತೋಷದಿಂದ ಕೈಲಾಸಪರ್ವತಕ್ಕೆ ಹೋಗಿ

ಇದಾನೀಂ ಖಲು ಸುಪ್ರೀತ್ಯಾ ಕೈಲಾಸಂ ಗಿರಿಶಾಲಯಂ ।
ಜನನೀಜನಕೌ ದ್ರಷ್ಟುಂ ಶಿವಾಶಂಭೂ ತ್ವಮರ್ಹಸಿ ॥ ೧೩ ॥

॥ ಬ್ರಹ್ಮೋವಾಚ ॥
ಇತ್ಯುಕ್ತ್ವಾ ನಿಖಿಲಾ ದೇವಾ ವಿಷ್ಣ್ವಾದ್ಯಾಃ ಪ್ರಾಪ್ತಶಾಸನಾಃ ।
ಕೃತ್ವಾ ಮಹೋತ್ಸವಂ ಭೂರಿ ಸುಕುಮಾರಾ ಯಯುರ್ಗಿರಿಂ ॥ ೧೪ ॥

ಕುಮಾರೇ ಗಚ್ಛತಿ ವಿಭೌ ಕೈಲಾಸಂ ಶಂಕರಾಲಯಂ ।
ಮಹಾಮಂಗಲಮುತ್ತಸ್ಥೌ ಜಯಶಬ್ದೋ ಬಭೂವ ಹ ॥ ೧೫ ॥

ಆರುರೋಹ ಕುಮಾರೋಽಸೌ ವಿಮಾನಂ ಪರಮಾರ್ಧಿಮತ್ ।
ಸರ್ವತೋಽಲಂಕೃತಂ ರಮ್ಯಂ ಸರ್ವೋಪರಿ ವಿರಾಜಿತಂ ॥ ೧೬ ॥

ಅಹಂ ವಿಷ್ಣುಶ್ಚ ಸಮುದೌ ತದಾ ಚಾಮರಧಾರಿಣೌ ।
ಗುರುಮೂರ್ಧ್ನಿ ಮಹಾಪ್ರೀತ್ಯಾ ಮುನೇಽಭೂವ ಹ್ಯತಂದ್ರಿತೌ ॥ ೧೭ ॥

ಇಂದ್ರಾದ್ಯಾ ಅಮರಾಸ್ಸರ್ವೇ ಕುರ್ವಂತೋ ಗುಹಸೇವನಂ ।
ಯಥೋಚಿತಂ ಚತುರ್ದಿಕ್ಷು ಜಗ್ಮುಶ್ಚ ಪ್ರಮುದಾಸ್ತದಾ ॥ ೧೮ ॥

---

ನಿನ್ನ ಜನನೀಜನಕರಾದ ಪಾರ್ವತೀಪರಮೇಶ್ವರರನ್ನು ನೋಡುವುದು ನಿನಗೆ ಯೋಗ್ಯವಾದುದು. ಆದುದರಿಂದ ನೀನು ಅಲ್ಲಿಗೆ ಹೊರಡಲನುವಾಗು ಎಂದರು.

೧೪. ಬ್ರಹ್ಮನು ಹೇಳಿದನು ;—ಈರೀತಿಯಾಗಿ ವಿಷ್ಣುವೇ ಮೊದಲಾದ ದೇವತೆಗಳು ಕುಮಾರನನ್ನು ಕುರಿತು ಹೇಳಿ ಅವನಪ್ಪಣೆಯಂತೆ ದೊಡ್ಡದೊಂದು ಉತ್ಸವವನ್ನು ಆಚರಿಸಿ ಕೈಲಾಸಪರ್ವತಕ್ಕೆ ಹೋದರು.

೧೫-೧೬. ಮಂಗಳವಾದ್ಯಗಳು ಮೊಳಗುತ್ತಿರಲು, ದೇವತೆಗಳು ಜಯಶಬ್ದವನ್ನುಚ್ಚರಿಸುತ್ತಿರಲು, ಕುಮಾರನು ವಿಮಾನವನ್ನೇರಿ ಕೈಲಾಸಪರ್ವತಕ್ಕೆ ಹೊರಟನು. ಆ ವಿಮಾನವು ಎಲ್ಲಾಕಡೆಯಲ್ಲಿಯೂ ರಮ್ಯವಾಗಿ ಅಲಂಕರಿಸಲ್ಪಟ್ಟಿದ್ದಿತು. ಬಹಳವಾಗಿ ಪ್ರಕಾಶಿಸುತ್ತಾ ಅಂತರಿಕ್ಷದಲ್ಲಿ ಹೋಗುತ್ತಿತ್ತು.

೧೭-೧೮. ನಾನೂ (ಬ್ರಹ್ಮನು) ವಿಷ್ಣುವೂ ಅಕ್ಕಪಕ್ಕಗಳಲ್ಲಿ ನಿಂತು ಸಂತೋಷದಿಂದ ಚಾಮರವನ್ನು ಬೀಸುತ್ತಿದ್ದೆವು. ಇಂದ್ರಾದಿ ದೇವತೆಗಳೆಲ್ಲರೂ ಆ ಕುಮಾರನ ಸೇವೆಯನ್ನು ಮಾಡುತ್ತಿದ್ದರು. ಈರೀತಿಯಾಗಿ ಸಂತೋಷದಿಂದ ಪ್ರಯಾಣಮಾಡುತ್ತಿದ್ದರು.

ಶಂಭೋರ್ಜಯಂ ಪ್ರಭಾಷಂತಃ ಪ್ರಾಪುಸ್ತೇ ಶಂಭುಪರ್ವತಂ ।
ಸಾನಂದಾ ವಿವಿಶುಸ್ತತ್ರೋಚ್ಚರಿತೋ ಮಂಗಲಧ್ವನಿಃ ॥ ೧೯ ॥

ದೃಷ್ಟ್ವಾ ಶಿವಂ ಶಿವಾಂ ಚೈವ ಸರ್ವೇ ವಿಷ್ಣ್ವಾದಯೋ ದ್ರುತಂ ।
ಪ್ರಣಮ್ಯ ಶಂಕರಂ ಭಕ್ತ್ಯಾ ಕರೌ ಬಧ್ವಾ ವಿನಮ್ರಕಾಃ ॥ ೨೦ ॥

ಕುಮಾರೋಽಪಿ ವಿನೀತಾತ್ಮಾ ವಿಮಾನಾದವತೀರ್ಯ ಚ ।
ಪ್ರಣನಾಮ ಮುದಾ ಶಂಭುಂ ಶಿವಾಂ ಸಿಂಹಾಸನಸ್ಥಿತಾಂ ॥ ೨೧ ॥

ಅಥ ದೃಷ್ಟ್ವಾ ಕುಮಾರಂ ತಂ ತನಯಂ ಪ್ರಾಣವಲ್ಲಭಂ ।
ತೌ ದಂಪತೀ ಶಿವೌ ದೇವೌ ಮುಮುದಾತೇಽತಿ ನಾರದ ॥ ೨೨ ॥

ಮಹಾಪ್ರಭುಸ್ಸಮುತ್ಥಾಯ ತಮುತ್ಸಂಗೇ ನ್ಯವೇಶಯತ್ ।
ಮೂರ್ಧ್ನಿ ಜಘ್ರೌ ಮುದಾ ಸ್ನೇಹಾತ್ತಂ ಪಸ್ಪರ್ಶ ಕರೇಣ ಹ ॥ ೨೩ ॥

ಮಹಾನಂದಭರಃ ಶಂಭುಶ್ಚಕಾರ ಮುಖಚುಂಬನಂ ।
ಕುಮಾರಸ್ಯ ಮಹಾಸ್ನೇಹಾತ್ ತಾರಕಾರೇರ್ಮಹಾಪ್ರಭೋಃ ॥ ೨೪ ॥

---

೧೯-೨೦ ಎಲ್ಲರೂ ಕುಮಾರನ ವಿಜಯ ವಿಷಯವನ್ನು ಮಾತನಾಡುತ್ತಾ ಕೈಲಾಸಪರ್ವತವನ್ನು ಸೇರಿದರು. ಆಗ ಮಂಗಳಧ್ವನಿಯಾಯಿತು. ಅನಂತರ ವಿಷ್ಣುವೇ ಮೊದಲಾದ ದೇವತೆಗಳು ಅಲ್ಲಿ ಪಾರ್ವತೀಪರಮೇಶ್ವರರನ್ನು ನೋಡಿ ಆನಂದದಿಂದ ಕೈಗಳನ್ನು ಮುಗಿದು ನಮಸ್ಕರಿಸಿದರು.

೨೧. ಕುಮಾರನೂ ಕೂಡ ವಿಮಾನದಿಂದಿಳಿದು ವಿನೀತನಾಗಿ ಸಿಂಹಾಸನದಲ್ಲಿ ಕುಳಿತಿರುವ ಪಾರ್ವತೀಪರಮೇಶ್ವರರನ್ನು ನಮಸ್ಕರಿಸಿದನು.

೨೨-೨೩. ಪ್ರಾಣಕ್ಕಿಂತಲೂ ಪ್ರೀತಿಕರನಾದ ಕುಮಾರನನ್ನು ನೋಡಿ ಪಾರ್ವತೀ ಪರಮೇಶ್ವರರು ಅತ್ಯಂತ ಸಂತೋಷಪಟ್ಟರು. ಮಹಾಪ್ರಭುವಾದ ಶಿವನು ಸ್ಕಂದನನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ವಾತ್ಸಲ್ಯದಿಂದ ತಲೆಯನ್ನು ಮೂಸಿನೋಡಿ ಸ್ನೇಹದಿಂದ ಕುಮಾರನ ಮೈಯ್ಯನ್ನು ತಡವಿದನು.

೨೪-೨೫. ಅತ್ಯಾನಂದದಿಂದ ಕುಮಾರನ ಮುಖವನ್ನು ಚುಂಬಿಸಿದನು.

ಶಿವಾಪಿ ತಂ ಸಮುತ್ಥಾಪ್ಯ ಸ್ವೋತ್ಸಂಗೇ ಸಂನ್ಯವೇಶಯತ್ ।
ಕೃತ್ವಾ ಮೂರ್ಧ್ನಿ ಮಹಾಸ್ನೇಹಾತ್ತನ್ಮುಖಾಬ್ಜಂ ಚುಚುಂಬ ಹಿ ॥ ೨೫ ॥

ತಯೋಸ್ತದಾ ಮಹಾನೋದೋ ವವೃಧೇಽತೀವ ನಾರದ ।
ದಂಪತ್ಯೋಃ ಶಿವಯೋಸ್ತತ್ರ ಭವಾಚಾರಂ ಪ್ರಕುರ್ವತೋಃ ॥ ೨೬ ॥

ತದೋತ್ಸವೋ ಮಹಾನಾಸೀನ್ನಾನಾವಿಧಃ ಶಿವಾಲಯೇ ।
ಜಯಶಬ್ದೋ ನಮಶ್ಶಬ್ದೋ ಬಭೂವಾತೀವ ಸರ್ವತಃ ॥ ೨೭ ॥

ತತಸ್ಸುರಗಣಾಸ್ಸರ್ವೇ ವಿಷ್ಣ್ವಾದ್ಯಾ ಮುನಯಸ್ತಥಾ ।
ಸುಪ್ರಣಮ್ಯ ಮುದಾ ಶಂಭುಂ ತುಷ್ಟುವುಸ್ಸಶಿವಂ ಮುನೇ ॥ ೨೮ ॥

॥ ದೇವಾ ಊಚುಃ ॥

ದೇವದೇವ ಮಹಾದೇವ ಭಕ್ತಾನಾಮಭಯಪ್ರದ ।
ನಮೋ ನಮಸ್ತೇ ಬಹುಶಃ ಕೃಪಾಕರ ಮಹೇಶ್ವರ ॥ ೨೯ ॥

ಅದ್ಭುತಾ ತೇ ಮಹಾದೇವ ಮಹಾಲೀಲಾ ಸುಖಪ್ರದಾ ।
ಸರ್ವೇಷಾಂ ಶಂಕರ ಸತಾಂ ದೀನಬಂಧೋ ಮಹಾಪ್ರಭೋ ॥ ೩೦ ॥

---

ಪಾರ್ವತಿಯೂ ಸಹ ತಾರಕಾರಿಯಾದ ಸ್ಕಂದನನ್ನು ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡು ಶಿರವನ್ನಾಘ್ರಾಣಿಸಿ ಮುಖವನ್ನು ಚುಂಬಿಸಿದಳು.

೨೬-೨೭. ಅವರಿಬ್ಬರಿಗೂ ಆನಂದವು ಬೆಳೆಯಿತು. ದಂಪತಿಗಳು ಅತಿಯಾಗಿ ಆನಂದಪಟ್ಟು ಕುಮಾರನ ಉತ್ಸವವನ್ನು ಆಚರಿಸಿದರು. ಶಿವಾಲಯದಲ್ಲಿ ಅನೇಕ ವಿಧವಾದ ಉತ್ಸವಗಳು ನಡೆದುವು. ಎಲ್ಲೆಲ್ಲಿಯೂ ಜಯಜಯಾಕಾರವೂ ನಮಸ್ಕಾರ ಎಂಬ ಶಬ್ದವೂ ಅತ್ಯಂತವಾಗಿ ಹಬ್ಬಿತು.

೨೮. ಅನಂತರ ದೇವತೆಗಳೂ ಮುನಿಗಳೂ ಸಂತೋಷಪಟ್ಟು ಶಿವನನ್ನೂ ಕುಮಾರನನ್ನೂ ನಮಸ್ಕರಿಸಿ ಸ್ತೋತ್ರಮಾಡಿದರು.

೨೯-೩೦. ದೇವತೆಗಳು ಹೇಳಿದರು :—ಎಲೈ ಮಹೇಶ್ವರನೇ, ನಿನಗೆ ನಮಸ್ಕಾರವು. ಭಕ್ತರಿಗೆ ಅಭಯವನ್ನುಂಟುಮಾಡುವ ನಿನ್ನ ಮಹಿಮೆಯು ಅದ್ಭುತವಾದುದು. ನೀನು ಕರುಣಾಕರನು. ಸುಖವನ್ನುಂಟುಮಾಡುವವನು. ಸತ್ಪುರುಷರಿಗೆ ಮಂಗಳಪ್ರದನು.

ಏವಂ ಮೂಢಧಿಯಶ್ಚಾಜ್ಞಾಃ ಪೂಜಾಯಾಂ ತೇ ಸನಾತನಂ ।
ಆವಾಹನಂ ನ ಜಾನೀಮೋ ಗತಿಂ ನೈವ ಪ್ರಭೋದ್ಭುತಾಂ ॥ ೩೧ ॥

ಗಂಗಾಸಲಿಲಧಾರಾಯ ಹ್ಯಾಧಾರಾಯ ಗುಣಾತ್ಮನೇ ।
ನಮಸ್ತೇ ತ್ರಿದಿಶೇಶಾಯ ಶಂಕರಾಯ ನಮೋ ನಮಃ ॥ ೩೨ ॥

ವೃಷಾಂಕಾಯ ಮಹೇಶಾಯ ಗಣಾನಾಂ ಪತಯೇ ನಮಃ ।
ಸರ್ವೇಶ್ವರಾಯ ದೇವಾಯ ತ್ರಿಲೋಕಪತಯೇ ನಮಃ ॥ ೩೩ ॥

ಸಂಹರ್ತ್ರೇ ಜಗತಾಂ ನಾಥ ಸರ್ವೇಷಾಂ ತೇ ನಮೋ ನಮಃ ।
ಭರ್ತ್ರೇ ಕರ್ತ್ರೇ ಚ ದೇವೇಶ ತ್ರಿಗುಣೇಶಾಯ ಶಾಶ್ವತೇ ॥ ೩೪ ॥

ನಿಸಂಗಾಯ ಪರೇಶಾಯ ಶಿವಾಯ ಪರಮಾತ್ಮನೇ ।
ನಿಷ್ಪ್ರಪಂಚಾಯ ಶುದ್ಧಾಯ ಪರಮಾಯಾವ್ಯಯಾಯ ಚ ॥ ೩೫ ॥

ದಂಡಹಸ್ತಾಯ ಕಾಲಾಯ ಪಾಶಹಸ್ತಾಯ ತೇ ನಮಃ ।
ವೇದಮಂತ್ರಪ್ರಧಾನಾಯ ಶತಜಿಹ್ವಾಯ ತೇ ನಮಃ ॥ ೩೬ ॥

---

೩೧-೩೨. ಏನೂ ತಿಳಿಯದ ಮೂಢರಾದ ನಾವು ನಿನ್ನನ್ನು ಪೂಜಿಸುವಾಗ ಆವಾಹನಾದಿಗಳನ್ನೂ ತಿಳಿಯದೆ ಇರುವೆವು. ನಿನ್ನ ಅದ್ಭುತವಾದ ಲೀಲೆಯನ್ನು ಯಾರುತಾನೆ ತಿಳಿದಿರುವರು ? ಗಂಗೆಯನ್ನು ತಲೆಯಲ್ಲಿ ಧರಿಸಿ ಶುದ್ಧನೂ ಸತ್ತ್ವ ರಜಸ್ತಮೋಗುಣಾತ್ಮನೂ ಆದ ನಿನ್ನನ್ನು ನಮಸ್ಕರಿಸುವೆವು. ನೀನು ದೇವೇಶ್ವರನು. ನಾಶರಹಿತನು.

೩೩-೩೫. ವೃಷಾಂಕನು. ಪ್ರಮಥಗಣಗಳಿಗೆ ಅಧಿಪತಿಯಾದ ಮಹೇಶನಾದ ನಿನಗೆ ನಮಸ್ಕಾರವು. ಸರ್ವೇಶ್ವರನೂ ತ್ರಿಲೋಕಾಧಿಪತಿಯೂ ಆದ ನಿನಗೆ ನಮಸ್ಕಾರವು. ಜಗತ್ಕರ್ತೃವೂ ಜಗತ್ಸಂಹಾರಕನೂ ಆದ ನಿನ್ನನ್ನು ನಮಿಸುವೆವು. ನೀನು ಜಗತ್ತನ್ನು ಕಾಪಾಡುವವನು, ತ್ರಿಗುಣಾತ್ಮಕನು, ಶಾಶ್ವತನು, ಸಂಗರಹಿತನು. ನೀನು ಪರಮಪುರುಷನು, ಪರಮಾತ್ಮನು, ಶುದ್ಧನು, ನಾಶರಹಿತನು, ಇಂತಹ ನಿನಗೆ ನಮಸ್ಕಾರವು.

೩೬-೩೭. ನೀನು ದಂಡಹಸ್ತನು, ಪಾಶಾಯುಧವನ್ನು ಧರಿಸಿರುವವನು, ವೇದ ಮಂತ್ರದಿಂದ ಸಂತುಷ್ಟಿಪಡುವವನು, ಶತಜಿಹ್ವನು, ಇಂತಹ ನಿನಗೆ ನಮಸ್ಕಾರವು.

ಭೂತಂ ಭವ್ಯಂ ಭವಿಷ್ಯಚ್ಚ ಸ್ಥಾವರಂ ಜಂಗಮಂ ಚ ಯತ್ ।
ತವ ದೇಹಾತ್ಸಮುತ್ಪನ್ನಂ ಸರ್ವಥಾ ಪರಮೇಶ್ವರ ॥ ೩೭ ॥

ಪಾಹಿ ನಸ್ಸರ್ವದಾ ಸ್ವಾಮಿನ್ಪ್ರಸೀದ ಭಗವನ್ಪ್ರಭೋ ।
ವಯಂ ತೇ ಶರಣಾಪನ್ನಾಃ ಸರ್ವಥಾ ಪರಮೇಶ್ವರ ॥ ೩೮ ॥

ಶಿತಿಕಂಠಾಯ ರುದ್ರಾಯ ಸ್ವಾಹಾಕಾರಾಯ ತೇ ನಮಃ ।
ಅರೂಪಾಯ ಸ್ವರೂಪಾಯ ವಿಶ್ವರೂಪಾಯ ತೇ ನಮಃ ॥ ೩೯ ॥

ಶಿವಾಯ ನೀಲಕಂಠಾಯ ಚಿತಾಭಸ್ಮಾಂಗಧಾರಿಣೇ ।
ನಿತ್ಯಂ ನೀಲಶಿಖಂಡಾಯ ಶ್ರೀಕಂಠಾಯ ನಮೋ ನಮಃ ॥ ೪೦ ॥

ಸರ್ವಪ್ರಣತದೇಹಾಯ ಸಂಯಮಪ್ರಣತಾಯ ಚ ।
ಮಹಾದೇವಾಯ ಶರ್ವಾಯ ಸರ್ವಾರ್ಚಿತಪದಾಯ ಚ ॥ ೪೧ ॥

ತ್ವಂ ಬ್ರಹ್ಮಾ ಸರ್ವದೇವಾನಾಂ ರುದ್ರಾಣಾಂ ನೀಲಲೋಹಿತಃ ।
ಆತ್ಮಾ ಚ ಸರ್ವಭೂತಾನಾಂ ಸಾಂಖ್ಯೈಃ ಪುರುಷ ಉಚ್ಯಸ್ಯೇ ॥ ೪೨ ॥

---

ಭೂತಭವಿಷ್ಯದ್ವರ್ತಮಾನ, ಸ್ಥಾವರ, ಜಂಗಮ, ಇವೆಲ್ಲವೂ ನಿನ್ನ ದೇಹದಿಂದ ಹುಟ್ಟಿದವುಗಳು. ಇಂತಹ ನಿನಗೆ ನಮಸ್ಕಾರವು.

೩೮-೩೯. ಎಲೈ ಸ್ವಾಮಿಯೇ, ನಮ್ಮನ್ನು ಯಾವಾಗಲೂ ಕಾಪಾಡು. ನಾವೆಲ್ಲರೂ ನಿನ್ನನ್ನು ಶರಣುಹೊಂದಿರುವೆವು. ನಮ್ಮನ್ನು ರಕ್ಷಿಸು. ನೀನು ಶಿತಿಕಂಠನು, ರುದ್ರನು, ಸ್ವಾಹಾಕಾರನು, ರೂಪರಹಿತನೂ ನೀನೇ, ರೂಪವುಳ್ಳವನೂ ನೀನೇ. ವಿಶ್ವರೂಪನಾದ ನಿನಗೆ ನಮಸ್ಕಾರವು.

೪೦-೪೨. ಚಿತಾಭಸ್ಮವನ್ನು ಧರಿಸಿರುವ ಶಿವನಿಗೆ ನಮಸ್ಕಾರವು. ನೀನು ನೀಲಕಂಠನು, ಶ್ರೀಕಂಠನು, ಇಂತಹ ನಿನಗೆ ನಮಸ್ಕಾರವು. ಮುನಿಗಳು ನಿನ್ನನ್ನು ನಮಸ್ಕರಿಸುವರು. ಮಹಾದೇವನೂ ಶರ್ವನೂ ಆದ ನಿನ್ನ ಚರಣಗಳನ್ನು ಎಲ್ಲರೂ ಭಕ್ತಿಯಿಂದ ನಮಸ್ಕರಿಸುವರು. ನೀನು ದೇವತೆಗಳಿಗೆ ಬ್ರಹ್ಮನು, ರುದ್ರರಿಗೆ ನೀಲಲೋಹಿತನು ಪ್ರಪಂಚದ ಪ್ರಾಣಿಗಳಿಗೆ ಪ್ರಾಣಸ್ವರೂಪನು. ನಿನ್ನನ್ನು ಸಾಂಖ್ಯರು ಪುರುಷನೆಂದು ಕರೆಯುವರು. ಇಂತಹ ನಿನಗೆ ನಮಸ್ಕಾರವು.

ಪರ್ವತಾನಾಂ ಸುಮೇರುಸ್ತ್ವಂ ನಕ್ಷತ್ರಾಣಾಂ ಚ ಚಂದ್ರಮಾಃ ।
ಋಷೀಣಾಂ ಚ ವಸಿಷ್ಠಸ್ತ್ವಂ ದೇವಾನಾಂ ವಾಸವಸ್ತಥಾ ॥ ೪೩ ॥

ಓಂಕಾರಸ್ಸರ್ವವೇದಾನಾಂ ತ್ರಾತಾ ಭವ ಮಹೇಶ್ವರ ।
ತ್ವಂ ಚ ಲೋಕಹಿತಾರ್ಥಾಯ ಭೂತಾನಿ ಪರಿಷಿಂಚಸಿ ॥ ೪೪ ॥

ಮಹೇಶ್ವರ ಮಹಾಭಾಗ ಶುಭಾಶುಭನಿರೀಕ್ಷಕ ।
ಆಪಯಾಸ್ಮಾನ್ ಹಿ ದೇವೇಶ ಕರ್ತ್ಯಾನ್ನೈ ವಚನಂ ತವ ॥ ೪೫ ॥

ರೂಪಕೋಟಿಸಹಸ್ರೇಷು ರೂಪಕೋಟಿಶತೇಷು ತೇ ।
ಅಂತಂ ಗಂತುಂ ನ ಶಕ್ತಾಃ ಸ್ಮ ದೇವದೇವ ನಮೋಽಸ್ತು ತೇ ॥ ೪೬ ॥

॥ ಬ್ರಹ್ಮೋವಾಚ ॥

ಇತಿ ಸ್ತುತ್ವಾಖಿಲಾ ದೇವಾ ವಿಷ್ಣ್ವಾದ್ಯಾಃ ಪ್ರಮುಖಾ ಸ್ಥಿತಾಃ ।
ಮುಹುರ್ಮುಹುಸ್ಸಪ್ರಣಮ್ಯ ಸ್ಕಂದಂ ಕೃತ್ವಾ ಪುರಸ್ಸರಂ ॥ ೪೭ ॥

---

೪೩-೪೪. ಪರ್ವತಗಳಲೆಲ್ಲಾ ಮೇರುಪರ್ವತದಂತೆ ಪುರುಷರಲ್ಲೆಲ್ಲಾ ಶ್ರೇಷ್ಠನು. ನೀನು ನಕ್ಷತ್ರಗಳಿಗೆಲ್ಲಾ ಚಂದ್ರನು. ಋಷಿಗಳಿಗೆಲ್ಲಾ ವಸಿಷ್ಠನು ದೇವತೆಗಳಲ್ಲೆಲ್ಲಾ ಇಂದ್ರನು. ವೇದಗಳಿಗೆ ಓಂಕಾರಸ್ವರೂಪನು. ಇಂತಹ ನೀನು ನಮ್ಮನ್ನು ಕಾಪಾಡು. ನೀನು ಲೋಕಹಿತಾರ್ಥವಾಗಿ ಪ್ರಾಣಿಗಳನ್ನು ಕಾಪಾಡುವೆ.

೪೫-೪೬. ಎಲೈ ಮಹೇಶ್ವರನೇ, ನೀನು ಮಹಾತ್ಮನು. ಶುಭಾಶುಭವನ್ನು ತಿಳಿದವನು. ನಮ್ಮನ್ನು ನೀನ್ನ ಅನುಗ್ರಹಕ್ಕೆ ಪಾತ್ರರನ್ನಾಗಿ ಮಾಡಿಕೋ. ನೀನು ಕೋಟಿರೂಪಳ್ಳವುವನು. ಸಹಸ್ರಕೋಟಿರೂಪಗಳುಳ್ಳವನೂ ಆಗಿರುವೆ. ಆದರೆ ನಾವು ಆ ರೂಪಗಳನ್ನು ಎಣಿಸುವುದರಲ್ಲಾಗಲೀ ಅಥವ ಅದರ ಕೊನೆಯನ್ನು ತಿಳಿಯುವುದರಲ್ಲಾಗಲೀ ಅಶಕ್ತರಾಗಿರುವೆವು.

೪೭. ಬ್ರಹ್ಮನು ಹೇಳಿದನು:—ಈರೀತಿಯಾಗಿ ವಿಷ್ಣುವೇ ಮುಂತಾದ ದೇವತೆಗಳು ಈಶ್ವರನನ್ನು ಸ್ತುತಿಸುತ್ತಾ ಸ್ಕಂದನೊಡನೆ ಬಾರಿಬಾರಿಗೂ ನಮಸ್ಕರಿಸಿದರು.

ದೇವಸ್ತುತಿಂ ಸಮಾಕರ್ಣ್ಯ ಶಿವಸ್ಸರ್ವೇಶ್ವರಸ್ಸ್ವರಾಟ್ ।
ಸುಪ್ರಸನ್ನೋ ಬಭೂವಾಥ ವಿಜಹಾಸ ದಯಾಪರಃ ॥ ೪೮ ॥

ಉವಾಚ ಸುಪ್ರಸನ್ನಾತ್ಮಾ ವಿಷ್ಣ್ವಾದೀನ್ಸುರಸತ್ತಮಾನ್ ।
ಶಂಕರಃ ಪರಮೇಶಾನೋ ದೀನಬಂಧುಸ್ಸತಾಂ ಗತಿಃ ॥ ೪೯ ॥

॥ ಶಿವ ಉವಾಚ ॥

ಹೇ ಹರೇ ಹೇ ವಿಧೇ ದೇವಾ ವಾಕ್ಯಂ ಮೇ ಶೃಣುತಾದರಾತ್ ।
ಸರ್ವಥಾಹಂ ಸತಾಂ ತ್ರಾತಾ ದೇವಾನಾಂ ವಃ ಕೃಪಾನಿಧಿಃ ॥ ೫೦ ॥

ದುಷ್ಟಹಂತಾ ತ್ರಿಲೋಕೇಶಶ್ಶಂಕರೋ ಭಕ್ತವತ್ಸಲಃ ।
ಕರ್ತಾ ಭರ್ತಾ ಚ ಹರ್ತಾ ಚ ಸರ್ವೇಶಾಂ ನಿರ್ವಿಕಾರವಾನ್ ॥ ೫೧ ॥

ಯದಾ ಯದಾ ಭವೇದ್ದುಃಖಂ ಯುಷ್ಮಾಕಂ ದೇವಸತ್ತಮಾಃ ।
ತದಾ ತದಾ ಮಾಂ ಯೂಯಂ ವೈ ಭಜಂತು ಸುಖಹೇತವೇ ॥ ೫೨ ॥

---

೪೮-೪೯. ದೇವತೆಗಳು ಸ್ತೋತ್ರಮಾಡಿದುದನ್ನು ಕೇಳಿ ಸರ್ವೇಶ್ವರನಾದ ಆ ಪರಮೇಶ್ವರನು ಪ್ರಸನ್ನನಾಗಿ ನಗುತ್ತಾ ವಿಷ್ಣುವೇ ಮೊದಲಾದ ದೇವತೆಗಳನ್ನು ಕುರಿತು ಮಂಗಲವನ್ನುಂಟುಮಾಡಲು ಈರೀತಿ ಹೇಳಿದನು.

೫೦-೫೧. ದೀನಬಂಧುವಾದ ಶಿವನು ಹೇಳಿದನು ;—ಎಲೈ ವಿಷ್ಣುವೇ, ಬ್ರಹ್ಮನೇ, ದೇವತೆಗಳಿರಾ, ನನ್ನ ಮಾತನ್ನು ಆದರದಿಂದ ಲಾಲಿಸಿರಿ. ನಾನು ಸತ್ಪುರುಷರನ್ನು ಕಾಪಾಡುವೆನು. ದೇವತೆಗಳಲ್ಲಿ ದಯವನ್ನಿಟ್ಟಿರುವೆನು. ನಾನು ತ್ರಿಲೋಕಾಧಿಪತಿಯಾದುದರಿಂದ ದುಷ್ಟರನ್ನೆಲ್ಲಾ ಸಂಹರಿಸಿ ಸತ್ಪುರುಷರಲ್ಲಿ ವಾತ್ಸಲ್ಯವಿಡುವೆನು. ಜಗತ್ಕರ್ತೃವಾದುದರಿಂದ ಅದರ ರಕ್ಷಣೆಯೂ ನನಗೆ ಸೇರಿರುವುದು. ಜಗತ್ತಿನ ಸಂಹಾರಕನೂ ನಾನೇ. ವಿಕಾರರಹಿತನೂ ನಾನೇ ಆಗಿರುವೆನು

೫೨. ಎಲೈ ದೇವತೆಗಳಿರಾ, ನಿಮಗೆ ಯಾವಾಗ ದುಃಖವುಂಟಾಗುವುದೋ ಆಗ ನನ್ನನ್ನು ಬಂದು ಕಾಣಿರಿ. ನಿಮಗೆ ಸುಖವನ್ನುಂಟುಮಾಡುವೆನು ಎಂದನು.

॥ ಬ್ರಹ್ಮೋವಾಚ ॥

ಇತ್ಯಾಜ್ಞಪ್ತಸ್ತದಾ ದೇವಾ ವಿಷ್ಣ್ವಾದ್ಯಾಸ್ಸಮುನೀಶ್ವರಾಃ ।
ಶಿವಂ ಪ್ರಣಮ್ಯ ಸಶಿವಂ ಕುಮಾರಂ ಚ ಮುದಾನ್ವಿತಾಃ ॥ ೫೪ ॥

ಕಥಯಂತೋ ಯಶೋ ರಮ್ಯಂ ಶಿವಯೋಶ್ಯಾಂಕರೇಶ್ಚ ತತ್ ।
ಆನಂದಂ ಪರಮಂ ಪ್ರಾಪ್ಯ ಸ್ವಧಾಮಾನಿ ಯಯುರ್ಮುನೇ ॥ ೫೫ ॥

ಇತ್ಯೇವಂ ಕಥಿತಂ ಸರ್ವಂ ಕೌಮಾರಂ ಚರಿತಂ ಮುನೇ ।
ಶೈವಂ ಚ ಸುಖದಂ ದಿವ್ಯಂ ಕಿಮನ್ಯಚ್ಛ್ರೋತುಮಿಚ್ಛಸಿ ॥ ೫೬ ॥

ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಕುಮಾರಖಂಡೇ ಸ್ವಾಮಿಕಾರ್ತಿಕಚರಿತಗರ್ಭಿತ ಶಿವಾಶಿವಚರಿತವರ್ಣನಂ ನಾಮ ದ್ವಾದಶೋಽಧ್ಯಾಯಃ

---

೫೪-೫೫. ಬ್ರಹ್ಮನು ಹೇಳಿದನು ;—ಎಲೈ ನಾರದನೇ, ಅನಂತರ ದೇವತೆಗಳೂ ಋಷಿಗಳೂ ಶಿವನ ಅನುಜ್ಞೆಯನ್ನು ಪಡೆದು, ಪಾರ್ವತೀಪರಮೇಶ್ವರರನ್ನೂ ಸ್ಕಂದನನ್ನೂ ನಮಸ್ಕರಿಸಿ, ಶಿವನ ಮತ್ತು ಷಣ್ಮುಖನ ರಮ್ಯವಾದ ಕೀರ್ತಿಯನ್ನು ಹೊಗಳುತ್ತಾ ಆನಂದದಿಂದ ತಮ್ಮತಮ್ಮ ಮನೆಗಳಿಗೆ ತೆರಳಿದರು.

೫೬. ಎಲೈ ಮುನಿಯೇ, ಷಣ್ಮುಖನ ಚರಿತ್ರೆಯನ್ನು ಇದುವರೆವಿಗೂ ತಿಳಿಸಿರುವೆನು. ಇದು ಶಿವಸಂಬಂಧವಾದುದರಿಂದ ದಿವ್ಯವೂ ಸುಖವನ್ನು ಕೊಡುವುದಾಗಿಯೂ ಇರುವುದು. ಮುಂದೇನನ್ನು ಕೇಳಲು ಬಯಸುವೆ ? ಕೇಳುಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿನ ರುದ್ರಸಂಹಿತೆಯ ಕುಮಾರಖಂಡದಲ್ಲಿ ಸ್ವಾಮಿಕಾರ್ತಿಕಚರಿತಗರ್ಭಿತ ಶಿವಾಶಿವಚರಿತವರ್ಣನವೆಂಬ ಹನ್ನೆರಡನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿ ವ ಮ ಹಾ ಪು ರಾ ಣೇ

## ರುದ್ರಸಂಹಿತಾಯಾಂ ಕುಮಾರಖಂಡೇ

## ತ್ರಯೋದಶೋಽಧ್ಯಾಯಃ

॥ ಸೂತ ಉವಾಚ ॥

ತಾರಕಾರೇರಿತಿ ಶ್ರುತ್ವಾ ವೃತ್ತಮದ್ಭುತಮುತ್ತಮಂ ।
ನಾರದಸ್ಸುಪ್ರಸನ್ನೋಽಥ ಪಪ್ರಚ್ಛ ಪ್ರೀತಿತೋ ವಿಧಿಂ ॥ ೧ ॥

॥ ನಾರದ ಉವಾಚ ॥

ದೇವದೇವ ಪ್ರಜಾನಾಥ ಶಿವಜ್ಞಾನನಿಧೇ ಮಯಾ ।
ಶ್ರುತಂ ಕಾರ್ತಿಕಸದ್ವೃತ್ತಮಮೃತಾದಪಿ ಚೋತ್ತಮಂ ॥ ೨ ॥

---

### ಹದಿಮೂರನೆಯ ಅಧ್ಯಾಯವು.

೧. ಸೂತನು ಹೇಳಿದನು :—ತಾರಕಾಸುರನನ್ನು ನಾಶಮಾಡಿದ ಕುಮಾರನ ಅದ್ಭುತವಾದ ಚರಿತ್ರೆಯನ್ನು ಕೇಳಿ ನಾರದನು ಆನಂದಭರಿತನಾಗಿ ಪ್ರೀತಿಯಿಂದ ಪುನಃ ಪ್ರಶ್ನೆ ಮಾಡಿದನು.

೨-೩. ನಾರದನು ಬ್ರಹ್ಮನನ್ನು ಪ್ರಶ್ನಿಸಿದನು :—ಎಲೈ ದೇವದೇವನಾದ ಬ್ರಹ್ಮನೇ, ಶಿವನ ತತ್ತ್ವವನ್ನು ನೀನು ಚೆನ್ನಾಗಿ ತಿಳಿದಿರುವೆ. ನೀನು ಪ್ರಜೆಗಳಿಗೆ ಒಡೆಯನು. ನಾನು ಇದುವರೆವಿಗೂ ಕಾರ್ತಿಕೇಯನ ವೃತ್ತಾಂತವನ್ನು ಕೇಳಿದೆನು. ಅದು ಅಮೃತಕ್ಕಿಂತಲೂ ಅತ್ಯಂತ ರುಚಿಕರವಾಗಿದ್ದಿತು. ಈಗ ಗಣಪತಿಯ ಚರಿತ್ರೆ

ಅಧುನಾ ಶ್ರೋತುಮಿಚ್ಛಾಮಿ ಗಣೇಶಂ ವೃತ್ತಮುತ್ತಮಂ ।
ತಜ್ಜನ್ಮ ಚರಿತಂ ದಿವ್ಯಂ ಸರ್ವಮಂಗಲಮಂಗಲಂ ॥ ೩ ॥

॥ ಸೂತ ಉವಾಚ ॥
ಇತ್ಯಾಕರ್ಣ್ಯ ವಚಸ್ತಸ್ಯ ನಾರದಸ್ಯ ಮಹಾಮುನೇಃ ।
ಪ್ರಸನ್ನಮಾನಸೋ ಬ್ರಹ್ಮಾ ಪ್ರತ್ಯುವಾಚ ಶಿವಂ ಸ್ಮರನ್ ॥ ೪ ॥

॥ ಬ್ರಹ್ಮೋವಾಚ ॥
ಕಲ್ಪಭೇದಾದ್ಗಣೇಶಸ್ಯ ಜನಿಃ ಪ್ರೋಕ್ತಾ ವಿಧೇಃ ಪರಾತ್ ।
ಶನಿದೃಷ್ಟಂ ಶಿರಶ್ಛಿನ್ನಂ ಸಂಚಿತಂ ಗಜಮಾನನಂ ॥ ೫ ॥

ಇದಾನೀಂ ಶ್ವೇತಕಲ್ಪೋಕ್ತಾ ಗಣೇಶೋತ್ಪತ್ತಿರುಚ್ಯತೇ ।
ಯತ್ರ ಛಿನ್ನಂ ಶಿರಸ್ತಸ್ಯ ಶಿವೇನ ಚ ಕೃಪಾಲುನಾ ॥ ೬ ॥

ಸಂದೇಹೋ ನಾತ್ರ ಕರ್ತವ್ಯಃ ಶಂಕರಸ್ಸೂನುತಿಕೃನ್ಮುನೇ ।
ಸ ಹಿ ಸರ್ವಾಧಿಪಃ ಶಂಭುರ್ನಿರ್ಗುಣಸ್ಸಗುಣೋಽಪಿ ಹಿ ॥ ೭ ॥

---

ಯನ್ನೂ ಅವನು ಹುಟ್ಟಿದ ರೀತಿಯನ್ನೂ ಕೇಳಬೇಕೆಂದಿರುವೆನು. ಈ ಚರಿತ್ರೆಯು ಶ್ರೇಷ್ಠವಾಗಿಯೂ ಮಂಗಳವನ್ನುಂಟುಮಾಡುವುದಾಗಿಯೂ ಇರುವುದು ಎಂದನು.

೪. ಸೂತನು ಹೇಳಿದನು.—ಮಹಾಮುನಿಯಾದ ನಾರದನ ಮಾತನ್ನು ಕೇಳಿ ಬ್ರಹ್ಮನು ಸಂತುಷ್ಟನಾಗಿ ಶಿವನನ್ನು ಧ್ಯಾನಿಸುತ್ತಾ ನಾರದನನ್ನು ಕುರಿತು ಇಂತೆಂದನು.

೫-೬. ಬ್ರಹ್ಮನು ಹೇಳಿದನು.—ಕಲ್ಪಭೇದವಾದಂತೆಲ್ಲಾ ಗಣಪತಿಯ ಉತ್ಪತ್ತಿಯೂ ಬೇರೆಯಾಗಿರುವುದು. ಶನಿಯ ದೃಷ್ಟಿಯಿಂದ ಗಣಪತಿಯ ತಲೆಯು ಕತ್ತರಿಸಿಹೋಗಲು ಆಗ ಆನೆಯ ತಲೆಯನ್ನು ಕೂಡಿಸಿದರು, ಎಂದು ಪರಬ್ರಹ್ಮನು ಹೇಳಿರುವನು. ಈಗ ನಾನು ಶ್ವೇತವರಾಹಕಲ್ಪಕ್ಕನುಸಾರವಾಗಿ ಗಣಪತಿಯ ಉತ್ಪತ್ತಿಯನ್ನು ಹೇಳುವೆನು. ಕೃಪಾಳುವಾದ ಈಶ್ವರನು ಗಣಪತಿಯ ತಲೆಯನ್ನು ಕತ್ತರಿಸಿದ ವಿಷಯವನ್ನೂ ಹೇಳುವೆನು.

೭-೮. ಗಣಪತಿಯು ಈಶ್ವರನ ಮಗನೆಂಬುದರಲ್ಲಿ ಸಂದೇಹವಿಲ್ಲ. ಅವನು ಸರ್ವಾಧಿಪನು. ನಿರ್ಗುಣನೂ, ಸಗುಣನೂ ಆಗಿರುವನು. ಅವನ ಲೀಲೆಯಿಂದಲೇ

ತಲ್ಲೀಲಯಾಖಿಲಂ ವಿಶ್ವಂ ಸೃಜ್ಯತೇ ಪಾಲ್ಯತೇ ತಥಾ ।
ವಿನಾಶ್ಯತೇ ಮುನಿಶ್ರೇಷ್ಠ ಪ್ರಸ್ತುತಂ ಶೃಣು ಚಾದರಾತ್ ॥ ೮ ॥

ಉದ್ವಾಹಿತೇ ಶಿವೇ ಚಾತ್ರ ಕೈಲಾಸಂ ಚ ಗತೇ ಸತಿ ।
ಕಿಯತಾ ಚೈವ ಕಾಲೇನ ಜಾತೋ ಗಣಪತೇರ್ಭವಃ ॥ ೯ ॥

ಏಕಸ್ಮಿನ್ನೇವ ಕಾಲೇ ಚ ಜಯಾ ಚ ವಿಜಯಾ ಸಖೀ ।
ಪಾರ್ವತ್ಯಾ ಚ ಮಿಲಿತ್ವಾ ವೈ ವಿಚಾರೇ ತತ್ಪರಾಭವತ್ ॥ ೧೦ ॥

ರುದ್ರಸ್ಯ ಚ ಗಣಾಸ್ಸರ್ವೇ ಶಿವಸ್ಯಾಜ್ಞಾಪರಾಯಣಾಃ ।
ತೇ ಸರ್ವೇಽಪ್ಯಸ್ಮದೀಯಾಶ್ಚ ನಂದೀಭೃಂಗಿಪುರಸ್ಸರಾಃ ॥ ೧೧ ॥

ಪ್ರಮಥಾಸ್ತೇ ಹ್ಯಸಂಖ್ಯಾತಾ ಅಸ್ಮದೀಯೋ ನ ಕಶ್ಚನ ।
ದ್ವಾರಿ ತಿಷ್ಠಂತಿ ತೇ ಸರ್ವೇ ಶಂಕರಾಜ್ಞಾಪರಾಯಣಾಃ ॥ ೧೨ ॥

---

ಪ್ರಪಂಚವು ಸೃಷ್ಟಿಯಾಗಿರುವುದು. ಮತ್ತು ರಕ್ಷಿಸಲ್ಪಡುತ್ತಿರುವುದು. ಅವನ ಲೀಲೆಯಿಂದಲೇ ಪ್ರಪಂಚದ ಸಂಹಾರವೂ ಆಗುವುದು. ಈಗ ಅವನ ಉತ್ಪತ್ತಿಯನ್ನು ಹೇಳುವೆನು ಕೇಳು.

೯. ಶಿವನು ಪಾರ್ವತಿಯನ್ನು ಮದುವೆಯಾದ ನಂತರ ಕೈಲಾಸಕ್ಕೆ ಪಾರ್ವತಿಯೊಡನೆ ಹೋಗಿ ವಾಸಿಸುತ್ತಿರುವಾಗ ಕೆಲವು ಕಾಲದನಂತರ ಗಣಪತಿಯು ಹುಟ್ಟಿದನು.

೧೦. ಆ ಸಮಯದಲ್ಲಿ ಜಯಾ, ವಿಜಯಾ ಎಂಬ ಇಬ್ಬರು ಸಖಿಯರೊಡನೆ ಪಾರ್ವತಿಯು ನಾನಾವಿಧವಾದ ವಿಚಾರಗಳನ್ನೂ ಮಾತನಾಡುತ್ತಾ ಸುಖದಿಂದಿದ್ದಳು. ಆ ಸಮಯದಲ್ಲಿ ಸಖಿಯರು ಈರೀತಿ ಹೇಳಿದರು.

೧೧. ಶಿವನ ಪ್ರಮಥಗಣಗಳಾದ ನಂದಿ, ಭೃಂಗಿ, ಇವರೆಲ್ಲರೂ ನಮ್ಮವರೇ ಆಗಿದ್ದರೂ ಶಿವನು ಹೇಳಿದಂತೆ ಕೇಳುತ್ತಿರುವರು.

೧೨-೧೩. ಶಿವನ ಸಮೀಪದಲ್ಲಿ ಅಸಂಖ್ಯಾತರಾದ ಪ್ರಮಥಗಣದವರಿರುವರು. ಒಬ್ಬನೂ ನಮ್ಮವನಿಲ್ಲ. ಅವರೆಲ್ಲರೂ ಬಾಗಿಲಿನಲ್ಲಿ ನಿಂತುಕೊಂಡು ಶಂಕರನ ಆಜ್ಞೆಯನ್ನು ಪಾಲಿಸುತ್ತಿರುವರು. ಅವರೆಲ್ಲರೂ ನಮ್ಮವರಾದರೂ ನಮ್ಮೊಡನೆ ಅವರು

ತೇ ಸರ್ವೇऽಪ್ಯಸ್ಮದೀಯಾಶ್ಚ ತಥಾಪಿ ನ ಮಿಲೇನ್ಮನಃ ।
ಏಕಶ್ಚೈವಾಸ್ಮದೀಯೋ ಹಿ ರಚನೀಯಸ್ತ್ವಯಾನಘೇ ॥ ೧೩ ॥

॥ ಬ್ರಹ್ಮೋವಾಚ ॥
ಇತ್ಯುಕ್ತ್ವಾ ಪಾರ್ವತೀ ದೇವೀ ಸಖೀಭ್ಯಾಂ ಸುಂದರಂ ವಚಃ ।
ಹಿತಂ ಮೇನೇ ತದಾ ತಚ್ಚ ಕರ್ತುಂ ಸ್ವಾಪ್ಯಧ್ಯವಸ್ಯತಿ ॥ ೧೪ ॥

ತತಃ ಕದಾಚಿನ್ಮಜ್ಜಂತ್ಯಾಂ ಪಾರ್ವತ್ಯಾಂ ವೈ ಸದಾಶಿವಃ ।
ನಂದಿನಂ ಪರಿಭರ್ತ್ಸ್ಯಾಥ ಹ್ಯಾಜಗಾಮ ಗೃಹಾಂತರಂ ॥ ೧೫ ॥

ಆಯಾಂತಂ ಶಂಕರಂ ದೃಷ್ಟ್ವಾ ಸಮುಯೇ ಜಗದಂಬಿಕಾ ।
ಉತ್ತಸ್ಥೌ ಮಜ್ಜತೀ ಸಾ ವೈ ಲಜ್ಜಿತಾ ಸುಂದರೀ ತದಾ ॥ ೧೬ ॥

ತಸ್ಮಿನ್ನವಸರೇ ದೇವೀ ಕೌತುಕೇನಾತಿ ಸಂಯುತಾ ।
ತದೀಯಂ ತದ್ವಚಶ್ಚೈವ ಹಿತಂ ಮೇನೇ ಸುಖಾವಹಂ ॥ ೧೭ ॥

---

ಬೆರೆಯುವುದಿಲ್ಲ. ಆದುದರಿಂದ ಎಲೌ ಪಾಪರಹಿತಳಾದ ಪಾರ್ವತಿಯೇ, ನಮ್ಮವನಾಗಿರುವ ಒಬ್ಬನನ್ನು ನೀನು ಸೃಷ್ಟಿಮಾಡು ಎಂದರು.

೧೪. ಬ್ರಹ್ಮನು ಹೇಳಿದನು.—ಸಖಿಯರು ಈ ರೀತಿಯಾಗಿ ಹೇಳಲು ಸುಂದರವಾದ ಆ ಮಾತನ್ನು ಕೇಳಿ ಹಾಗೆ ಮಾಡುವುದೇ ಸರಿ ಎಂದು ನಿಶ್ಚಯ ಮಾಡಿದಳು.

೧೫-೧೬. ಹೀಗೆ ಇರುತ್ತಿರುವಲ್ಲಿ ಒಂದು ದಿನ ಪಾರ್ವತಿಯು ಅಭ್ಯಂಜನವನ್ನು ಮಾಡುತ್ತಿರುವಾಗ ಸದಾಶಿವನು ಬರಲು, ಪಾರ್ವತಿಯ ಮನೆಯ ಬಾಗಿಲನ್ನು ಕಾಯುತ್ತಿರುವ ನಂದಿಯು ಅವನನ್ನು ತಡೆದನು. ಶಿವನು ಅವನನ್ನು ಬೆದರಿಸಿ ಒಳಗೆ ಬಂದನು. ಜಗದಂಬಿಕೆಯಾದ ಪಾರ್ವತಿಯು ಈ ಸಮಯದಲ್ಲಿ ಈಶ್ವರನು ಬಂದುದನ್ನು ನೋಡಿ ಸ್ನಾನಮಾಡುವುದನ್ನು ಬಿಟ್ಟು ನಾಚಿಕೆಯಿಂದ ತಕ್ಷಣ ಮೇಲಕ್ಕೆ ಎದ್ದು ನಿಂತಳು.

೧೭. ಆ ಸಮಯದಲ್ಲಿ ಸುಂದರಿಯಾದ ಪಾರ್ವತಿಗೆ ತನ್ನ ಸಖಿಯರು ಹಿಂದೆ ಹೇಳಿದ ಮಾತು ತಕ್ಷಣ ಜ್ಞಾಪಕಬಂದಿತು.

ಏವಂ ಜಾತೇ ತದಾ ಕಾಲೇ ಕದಾಚಿತ್ಪಾರ್ವತೀ ಶಿವಾ ।
ವಿಚಿಂತ್ಯ ಮನಸಾ ಚೇತಿ ಪರಮಾಯಾ ಪರೇಶ್ವರೀ ॥ ೧೮ ॥

ಮದೀಯಸ್ಸೇವಕಃ ಕಶ್ಚಿದ್ಭವೇಚ್ಛುಭತರಃ ಕೃತೀ ।
ಮದಾಜ್ಞಯಾ ಪರಂ ನಾನ್ಯದ್ರೇಖಾಮಾತ್ರಂ ಚಲೇದಿದಂ ॥ ೧೯ ॥

ವಿಚಾರ್ಯೇತಿ ಚ ಸಾ ದೇವೀ ವಪುಷೋ ಮಲಸಂಭವಂ ।
ಪುರುಷಂ ನಿರ್ಮಮೌ ಸಾ ತು ಸರ್ವಲಕ್ಷಣಸಂಯುತಂ ॥ ೨೦ ॥

ಸರ್ವಾವಯವನಿರ್ದೋಷಂ ಸರ್ವಾವಯವಸುಂದರಂ ।
ವಿಶಾಲಂ ಸರ್ವಶೋಭಾಢ್ಯಂ ಮಹಾಬಲಪರಾಕ್ರಮಂ ॥ ೨೧ ॥

ವಸ್ತ್ರಾಣಿ ಚ ತದಾ ತಸ್ಮೈ ದತ್ವಾ ಸಾ ವಿವಿಧಾನಿ ಚ ।
ನಾನಾಲಂಕರಣಂ ಚೈವ ಬಹ್ವಾಶಿಷಮನುತ್ತಮಂ ॥ ೨೨ ॥

ಮತ್ಪುತ್ರಸ್ತ್ವಂ ಮದೀಯೋಽಸಿ ನಾನ್ಯಃ ಕಶ್ಚಿದಿಹಾಸ್ತಿ ಮೇ ।
ಏವಮುಕ್ತಸ್ಸ ಪುರುಷೋ ನಮಸ್ಕೃತ್ಯ ಶಿವಾಂ ಜಗೌ ॥ ೨೩ ॥

---

೧೮-೨೦. ಹೀಗೆಯೇ ಕೆಲವುಕಾಲ ಕಳೆಯಲು ಮಂಗಳಾಂಗಿಯಾದ ಪಾರ್ವತಿಯು ನನಗೆ ಒಬ್ಬ ಶುಭಕರನಾದ ಸೇವಕನು ಆಗಬೇಕು. ಅವನು ನನ್ನ ಅಪ್ಪಣೆಯನ್ನು ಚಾಚೂ ಮೀರಕೂಡದು ಅಂತವನನ್ನು ಸೃಷ್ಟಿಸಬೇಕು ಎಂದು ಮನಸ್ಸಿನಲ್ಲಿ ಯೋಚಿಸಿ ತನ್ನ ಮೈಯಿನ ಕೊಳೆಯಿಂದ ಒಬ್ಬನನ್ನು ಸೃಷ್ಟಿಮಾಡಿದಳು. ಅವನು ಸರ್ವಲಕ್ಷಣಸಂಪನ್ನನಾಗಿದ್ದನು.

೨೧. ಅವನ ಅಂಗಾಂಗಗಳೆಲ್ಲವೂ ನಿರ್ದೋಷವಾಗಿದ್ದಿತು. ಸರ್ವಾಂಗಸುಂದರನಾದ ಅವನು ಮಹಾಬಲಶಾಲಿಯಾಗಿದ್ದನು. ಬಹಳ ತೇಜಸ್ವಿಯಾಗಿದ್ದನು.

೨೨. ಅವನಿಗೆ ಪಾರ್ವತಿಯು ನಾನಾವಿಧವಾದ ವಸ್ತ್ರಗಳನ್ನುಡಿಸಿದಳು. ಅನೇಕ ಆಭರಣಗಳಿಂದ ಅವನನ್ನಲಂಕರಿಸಿ ಅನೇಕ ಆಶೀರ್ವಾದಗಳನ್ನು ಮಾಡಿದಳು.

೨೩. ನೀನು ನನ್ನ ಮಗನು. ನನಗೆ ಬೇರೆ ಮಕ್ಕಳಾರೂ ಇಲ್ಲ ಎಂದು ಹೇಳಲು ಆ ಪುರುಷನು ಅವಳಿಗೆ ನಮಸ್ಕರಿಸಿ ಅವಳನ್ನು ಕುರಿತು,

॥ ಗಣೇಶ ಉವಾಚ ॥
ಕಿಂ ಕಾರ್ಯಂ ವಿದ್ಯತೇ ತೇಽದ್ಯ ಕರವಾಣಿ ತವೋದಿತಂ ।
ಇತ್ಯುಕ್ತಾ ಸಾ ತದಾ ತೇನ ಪ್ರತ್ಯುವಾಚ ಸುತಂ ಶಿವಾ ॥ ೨೪ ॥

॥ ಶಿವೋವಾಚ ॥
ಹೇ ತಾತ ಶೃಣು ಮದ್ವಾಕ್ಯಂ ದ್ವಾರಪಾಲೋ ಭವಾದ್ಯ ಮೇ ।
ಮತ್ಪುತ್ರಸ್ತ್ವಂ ಮದೀಯೋಽಸಿ ನಾನ್ಯಥಾ ಕಶ್ಚಿದಸ್ತಿ ಮೇ ॥ ೨೫ ॥

ವಿನಾ ಮದಾಜ್ಞಾಂ ಸತ್ಪುತ್ರ ನೈವಾಯಾನ್ಮದ್ಗೃಹಾಂತರಂ ।
ಕೋಽಪಿ ಕ್ವಾಪಿ ಹಠಾತ್ತಾತ ಸತ್ಯಮೇತ್ಮಯೋದಿತಂ ॥ ೨೬ ॥

॥ ಬ್ರಹ್ಮೋವಾಚ ॥
ಇತ್ಯುಕ್ತ್ವಾ ಸಾ ದದೌ ತಸ್ಮೈ ಯಷ್ಟಿಂ ಚಾತಿದೃಢಾಂ ಮುನೇ ।
ತದೀಯಂ ರೂಪಮಾಲೋಕ್ಯ ಸುಂದರಂ ಹರ್ಷಮಾಗತಾ ॥ ೨೭ ॥

ಮುಖಮಾಚುಂಬ್ಯ ಸುಪ್ರೀತ್ಯಾಲಿಂಗ್ಯ ತಂ ಕೃಪಯಾ ಸುತಂ ।
ಸ್ವದ್ವಾರಿ ಸ್ಥಾಪಯಾಮಾಸ ಯಷ್ಟಿಪಾಣಿಂ ಗಣಾಧಿಪಂ ॥ ೨೮ ॥

---

೨೪. ಗಣೇಶನು ಹೇಳಿದನು.—ನಿನಗಾಗಿ ನಾನು ಯಾವ ಕೆಲಸವನ್ನು ಬೇಕಾದರೂ ಮಾಡಲು ಸಿದ್ಧನಾಗಿರುವೆನು. ಅಂತಹ ಕಾರ್ಯವಿದ್ದರೆ ತಿಳಿಸು ಎಂದು ಹೇಳಲು ಆಗ ಪಾರ್ವತಿಯು,

೨೫-೨೬. ಎಲೈ ಮಗುವೇ, ನನ್ನ ಮಾತನ್ನು ಕೇಳು. ನೀನು ನನ್ನ ಮಗನು, ಹಾಗೂ ನನ್ನ ಕಡೆಯವನು, ಈಗ ಇಲ್ಲಿ ನನ್ನ ಕಡೆಯವನಾಗಿ ಯಾವನೂ ಇಲ್ಲ. ನೀನು ನಿನಗೆ ಸತ್ಪುತ್ರನು. ನನ್ನ ಅಪ್ಪಣೆಯಿಲ್ಲದೆ ಮನೆಯೊಳಕ್ಕೆ ಯಾರನ್ನೂ ಬಿಡಬೇಡ. ಬಲಾತ್ಕಾರವಾಗಿ ಬಂದರೂ ತಡೆದುಬಿಡು. ಖಂಡಿತ ಬಿಡಬೇಡ ಎಂದಳು.

೨೭-೨೮. ಬ್ರಹ್ಮನು ಹೇಳಿದನು:—ಈರೀತಿ ಪಾರ್ವತಿಯು ಬಾಲಕನಿಗೆ ಅಪ್ಪಣೆಮಾಡಿ ಒಂದು ಗಟ್ಟಿಯಾದ ಕೋಲನ್ನು ಕೊಟ್ಟು ತನ್ನ ಮನೆಯ ಬಾಗಿಲಿನಲ್ಲಿ ನಿಲ್ಲಿಸಿದಳು. ಅವನ ಸುಂದರವಾದ ರೂಪವನ್ನು ನೋಡಿ ಆನಂದಪಟ್ಟಳು. ಆ ಗಣಪತಿಯನ್ನು ವಾತ್ಸಲ್ಯದಿಂದ ಮುದ್ದಿಟ್ಟು ಆಲಂಗಿಸಿದಳು.

ಅಥ ದೇವೀಸುತಸ್ತಾತ ಗೃಹದ್ವಾರಿ ಸ್ಥಿತೋ ಗಣಃ ।
ಯಷ್ಟಿಪಾಣಿರ್ಮಹಾವೀರಃ ಪಾರ್ವತೀಹಿತಕಾಮ್ಯಯಾ ॥ ೨೯ ॥

ಸ್ವದ್ವಾರಿ ಸ್ಥಾಪಯಿತ್ವಾ ತಂ ಗಣೇಶಂ ಸ್ವಸುತಂ ಶಿವಾ ।
ಸ್ವಯಂ ಚ ಮಜ್ಜತೀ ಸಾ ವೈ ಸಂಸ್ಥಿತಾಸೀತ್ಸಖೀಯುತಾ ॥ ೩೦ ॥

ಏತಸ್ಮಿನ್ನೇವ ಕಾಲೇ ತು ಶಿವೋ ದ್ವಾರಿ ಸಮಾಗತಃ ।
ಕೌತುಕೀ ಮುನಿಶಾರ್ದೂಲ ನಾನಾಲೀಲಾವಿಶಾರದಃ ॥ ೩೧ ॥

ಉವಾಚ ಚ ಶಿವೇಶಂ ತಮವಿಜ್ಞಾಯ ಗಣಾಧಿಪಃ ।
ಮಾತುರಾಜ್ಞಾಂ ವಿನಾ ದೇವ ಗಮ್ಯತಾಂ ನ ತ್ವಯಾಧುನಾ ॥ ೩೨ ॥

ಮಜ್ಜನಾರ್ಥಂ ಸ್ಥಿತಾ ಮಾತಾ ಕ್ವ ಯಾಸೀತಿ ವ್ರಜಾಧುನಾ ।
ಇತ್ಯುಕ್ತ್ವಾ ಯಷ್ಟಿಕಾಂ ತಸ್ಯ ರೋಧನಾಯ ತದಾಗ್ರಹೀತ್ ॥ ೩೩ ॥

---

೨೯. ಅನಂತರ ಪಾರ್ವತಿ ಪುತ್ರನಾದ ಗಣಪತಿಯು ದೇವಿಯ ಮಾತಿನಂತೆ ಆವಳಿಗೆ ಹಿತವನ್ನುಂಟುಮಾಡಲು ಕೈಯ್ಯಲ್ಲಿ ಕೋಲನ್ನು ಹಿಡಿದು ಬಾಗಿಲಿನ ಬಳಿ ನಿಂತುಕೊಂಡನು.

೩೦. ಪಾರ್ವತಿಯೂ, ಗಣಪತಿಯನ್ನು ಬಾಗಿಲಿನಲ್ಲಿ ನಿಲ್ಲಿಸಿ ತಾನು ಅಭ್ಯಂಜನ ಮಾಡಲು ಸಖಿಯರೊಡನೆ ಒಳಕ್ಕೆ ಹೋದಳು.

೩೧-೩೩. ಇದೇ ಸಮಯದಲ್ಲಿ ಈಶ್ವರನು ಅಲ್ಲಿಗೆ ಬಂದನು. ಬಾಗಿಲಿನಲ್ಲಿ ನಿಂತಿರುವ ಗಣಪತಿಯನ್ನು ನೋಡಿ ಆಶ್ಚರ್ಯಗೊಂಡನು. ಅನಂತರ ಗಣಪತಿಯು ಈತನು ಪಾರ್ವತಿಯ ಪತಿಯಾದ ಶಿವನೆಂದು ತಿಳಿಯದೆ ಅವನನ್ನು ತಡೆದನು. ದೇವನೇ! ನಮ್ಮ ತಾಯಿಯ ಅಪ್ಪಣೆಯಿಲ್ಲದೆ ನಾನು ಯಾರನ್ನೂ ಒಳಕ್ಕೆ ಬಿಡ ಲಾರೆನು. ಈಗ ನಮ್ಮ ತಾಯಿಯು ಅಭ್ಯಂಜನಮಾಡಲು ಹೋಗಿರುವಳು. ನೀನಿನ್ನು ಹೊರಡು ಎಂದು ಹೇಳುತ್ತಾ ಶಿವನನ್ನು ತಡೆಯಲು ಕೋಲನ್ನು ಅಡ್ಡ ಹಿಡಿದನು.

ತಂ ದೃಷ್ಟ್ವಾ ತು ಶಿವಃ ಪ್ರಾಹ ಕಿಂ ನಿಷೇಧಸಿ ಮೂಢಧೀಃ ।
ಮಾಂ ನ ಜಾನಾಸ್ಯಸದ್ಬುದ್ಧೇ ಶಿವೋಽಹಮಿತಿ ನಾನ್ಯಥಾ ॥ ೩೪ ॥

ತಾಡಿತಸ್ತೇನ ಯಷ್ಟ್ಯಾ ಹಿ ಗಣೇಶೇನ ಮಹೇಶ್ವರಃ ।
ಪ್ರತ್ಯುವಾಚ ಸ ತಂ ಪುತ್ರಂ ಬಹುಲೀಲಶ್ಚ ಕೋಪಿತಃ ॥ ೩೫ ॥

॥ ಶಿವ ಉವಾಚ ॥

ಮೂರ್ಖೋಽಸಿ ತ್ವಂ ಜನಾಸಿ ಶಿವೋಽಹಂ ಗಿರಿಜಾಪತಿಃ ।
ಸ್ವಗೃಹಂ ಯಾಮಿ ರೇ ಬಾಲ ನಿಷೇಧಸಿ ಕಥಂ ಹಿ ಮಾಂ ॥ ೩೬ ॥

ಇತ್ಯುಕ್ತ್ವಾ ಪ್ರವಿಶಂತಂ ತಂ ಮಹೇಶಂ ಗಣನಾಯಕಃ ।
ಕ್ರೋಧಂ ಕೃತ್ವಾ ತತೋ ವಿಪ್ರ ದಂಡೇನಾತಾಡಯತ್ಪುನಃ ॥ ೩೭ ॥

ತತಶ್ಶಿವಶ್ಚ ಸಂಕ್ರುದ್ಧೋ ಗಣಾನಾಜ್ಞಾಪಯನ್ನಿಜಾನ್ ।
ಕೋಽಯಂ ವರ್ತತೇ ಕಿಂ ಚ ಕ್ರಿಯತೇ ಪಶ್ಯತಾಂ ಗಣಾಃ ॥ ೩೮ ॥

---

೩೪. ಆರೀತಿ ತನ್ನನ್ನು ತಡದಿದ್ದವನ್ನು ನೋಡಿ ಶಿವನು ಎಲೋ ಮೂಢನೇ, ಯಾರನ್ನು ತಡೆಯುತ್ತಿರುವೆ? ನಾನು ಯಾರೆಂಬುದು ನಿನಗೆ ಗೊತ್ತಿಲ್ಲವೋ? ಶಿವನೇ ನಾನು. ನನ್ನನ್ನು ಒಳಕ್ಕೆ ಬಿಡು ಎಂದು ಹೇಳಿದನು.

೩೫. ಅನಂತರ ಗಣಪತಿಯು ಕೈಯಲ್ಲಿರುವ ಕೋಲಿನಿಂದ ಶಿವನನ್ನು ಹೊಡೆದುಬಿಟ್ಟನು. ಆಗ ಶಿವನಿಗೆ ತುಂಬಾ ಕೋಪಬಂದಿತು. ಕೋಪಗೊಂಡು ಗಣಪತಿಯನ್ನು ಕುರಿತು ಹೇಳಿದನು.

೩೬-೩೭. ಶಿವನು ಹೇಳಿದನು:—ಲೋ, ನೀನು ಮೂರ್ಖನು. ನಾನು ಯಾರು ಎಂಬುದು ನಿನಗೆ ಗೊತ್ತಿಲ್ಲ. ನಾನು ಗಿರಿಜೆಯ ಪತಿಯಾದ ಶಿವನು. ಇದುನನ್ನ ಮನೆಯು ಎಂಬುದಾಗಿ ಹೇಳಿ ಬಲಾತ್ಕಾರವಾಗಿ ನುಗ್ಗಲೆತ್ನಿಸಲು ಮಹೇಶ್ವರನನ್ನು ಗಣಪತಿಯು ಕ್ರೋಧದಿಂದ ಪುನಃ ಹೊಡೆದನು.

೩೮-೩೯. ಅನಂತರ ಶಿವನಿಗೂ ಬಹಳ ಕೋಪಬಂದಿತು. ತನ್ನ ಗಣಗಳನ್ನು ಕುರಿತು, ಎಲೈ ಗಣಗಳಿರಾ, ಆ ಪುರುಷನಾವನು? ಇಲ್ಲಿ ಏನು ಮಾಡುತ್ತಿರುವನು?

ಇತ್ಯುಕ್ತ್ವಾ ತು ಶಿವಸ್ತತ್ರ ಸ್ಥಿತಃ ಕ್ರುದ್ಧೋ ಗೃಹಾದ್ಬಹಿಃ ।
ಭವಾಚಾರರತಃ ಸ್ವಾಮೀ ಬಹ್ವದ್ಭುತಸುಲೀಲಕಃ ॥ ೩೯ ॥

ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಕುಮಾರಖಂಡೇ
ಗಣೇಶೋತ್ಪತ್ತಿವರ್ಣನಂ ನಾಮ ತ್ರಯೋದಶೋಽಧ್ಯಾಯಃ



---

ಎಂಬುದನ್ನು ವಿಚಾರಿಸಿ ಎಂದು ಹೇಳಿ, ಸದಾಚಾರವುಳ್ಳವನಾದುದರಿಂದ ಮನೆಯ ಹೊರಗಡೆಯೇ ನಿಂತನು.

ಇಲ್ಲಿಗೆ ಶ್ರೀಶಿವಮಹಾಪುರಾಣದಲ್ಲಿ ರುದ್ರಸಂಹಿತೆಯ ಕುಮಾರಖಂಡದಲ್ಲಿ
ಗಣೇಶೋತ್ಪತ್ತಿವರ್ಣನವೆಂಬ ಹದಿಮೂರನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅ ಥ ಶ್ರೀ ಶಿ ವ ಮ ಹಾ ಪು ರಾ ಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಚತುರ್ದಶೋಽಧ್ಯಾಯಃ

॥ ಬ್ರಹ್ಮೋವಾಚ ॥

ಗಣಾಸ್ತೇ ಕ್ರೋಧಸಂಪನ್ನಾಸ್ತತ್ರ ಗತ್ವಾ ಶಿವಾಜ್ಞಯಾ ।
ಪಪ್ರಚ್ಛುರ್ಗಿರಿಜಾಪುತ್ರಂ ತಂ ತದಾ ದ್ವಾರಪಾಲಕಂ ॥ ೧ ॥

॥ ಶಿವಗಣಾ ಊಚುಃ ॥

ಕೋಽಸಿ ತ್ವಂ ಕುತ ಆಯಾತಃ ಕಿಂ ವಾ ತ್ವಂ ಚ ಚಿಕೀರ್ಷಸಿ ।
ಇತೋಽದ್ಯ ಗಚ್ಛ ದೂರಂ ವೈ ಯದಿ ಜೀವಿತುಮಿಚ್ಛತಿ ॥ ೨ ॥

---

### ಹದಿನಾಲ್ಕನೆಯ ಅಧ್ಯಾಯವು.

೧. ಬ್ರಹ್ಮನು ಹೇಳಿದನು :—ಶಿವನ ಅಪ್ಪಣೆಯನ್ನು ಶಿರಸಾವಹಿಸಿ ಗಣಗಳೆಲ್ಲರೂ ಕೋಪದಿಂದ ಗಣಪತಿಯಿರುವ ಸ್ಥಳಕ್ಕೆ ಹೋಗಿ ಆ ದ್ವಾರಪಾಲಕನನ್ನು ಕುರಿತು.

೨. ಶಿವಗಣದವರು ಹೇಳಿದರು :—ಎಲೈ ನೀನಾರು ? ಏತಕ್ಕೋಸ್ಕರ ಇಲ್ಲಿಗೆ ಬಂದಿರುವೆ ? ಇಲ್ಲಿ ನಿನಗೇನು ಕೆಲಸ ? ನಿನಗೆ ಜೀವದಮೇಲೆ ಆಸೆಯಿದ್ದ ಪಕ್ಷದಲ್ಲಿ ಇಲ್ಲಿಂದ ಬೇಗನೆ ದೂರ ತೊಲಗು ಎಂದರು.

॥ ಬ್ರಹ್ಮೋವಾಚ ॥

ತದೀಯಂ ತದ್ವಚಃ ಶ್ರುತ್ವಾ ಗಿರಿಜಾತನಯಸ್ಸ ವೈ ।
ನಿರ್ಭಯೋ ದಂಡಪಾಣಿಶ್ಚ ದ್ವಾರಪಾನಬ್ರವೀದಿದಂ ॥ ೧ ॥

॥ ಗಣೇಶ ಉವಾಚ ॥

ಯೂಯಂ ಕೇ ಕುತ ಆಯಾತಾ ಭವಂತಸ್ಸುಂದರಾ ಇಮೇ ।
ಯಾತ ದೂರಂ ಕಿಮರ್ಥಂ ವೈ ಸ್ಥಿತಾ ಅತ್ರ ವಿರೋಧಿನಃ ॥ ೪ ॥

॥ ಬ್ರಹ್ಮೋವಾಚ ॥

ಏವಂ ಶ್ರುತ್ವಾ ವಚಸ್ತಸ್ಯ ಹಾಸ್ಯಂ ಕೃತ್ವಾ ಪರಸ್ಪರಂ ।
ಊಚುಸ್ಸರ್ವೇ ಶಿವಗಣಾ ಮಹಾವೀರಾ ಗತಸ್ಮಯಾಃ ॥ ೫ ॥

ಪರಸ್ಪರಮಿತಿ ಪ್ರೋಚ್ಯ ಸರ್ವೇ ತೇ ಶಿವಪಾರ್ಷದಾಃ ।
ದ್ವಾರಪಾಲಂ ಗಣೇಶಂ ತಂ ಪ್ರತ್ಯೂಚುಃ ಕ್ರುದ್ಧಮಾನಸಾಃ ॥ ೬ ॥

॥ ಶಿವಗಣಾ ಊಚುಃ ॥

ಶ್ರೂಯತಾಂ ದ್ವಾರಪಾಲಾ ಹಿ ವಯಂ ಶಿವಗಣಾ ವರಾಃ ।
ತ್ವಾಂ ನಿವಾರಯಿತುಂ ಪ್ರಾಪ್ತಾಶ್ಶಂಕರಸ್ಯಾಜ್ಞಯಾ ವಿಭೋಃ ॥ ೭ ॥

---

೩. ಬ್ರಹ್ಮನು ಹೇಳಿದನು :—ಗಿರಿಜಾಪುತ್ರನಾದ ಗಣಪತಿಯು ಅವರಾಡಿದ ಮಾತನ್ನು ಕೇಳಿ ದಂಡವನ್ನು ಕೈಯಲ್ಲಿ ಹಿಡಿದು ನಿರ್ಭಯನಾಗಿ ಆ ಗಣಗಳನ್ನು ಕುರಿತು,

೪. ಗಣೇಶನು ಹೇಳಿದನು :—ನೀವೆಲ್ಲರೂ ಯಾರು ? ಇಲ್ಲಿಗೆ ಬರಲು ಕಾರಣವೇನು ? ನಿಮಗಿಲ್ಲೇನು ಕೆಲಸ ? ಮಾತನಾಡದೆ ಸುಮ್ಮನೆ ದೂರ ಹೊರಟು ಹೋಗಿ ಎಂದನು.

೫-೬. ಬ್ರಹ್ಮನು ಹೇಳಿದನು :—ಗಣಪತಿಯಾಡಿದ ಮಾತನ್ನು ಕೇಳಿ ಪರಸ್ಪರ ಹಾಸ್ಯಮಾಡುತ್ತಾ ಮಹಾವೀರರಾದ ಶಿವಗಣಗಳು ಕೋಪಗೊಂಡು ದ್ವಾರ ಪಾಲಕನಾದ ಗಣಪತಿಯನ್ನು ಕುರಿತು ಮತ್ತೆ ಹೇಳಿದರು.

೭-೮. ಶಿವಗಣಗಳು ಹೇಳಿದರು :—ಎಲೈ ದ್ವಾರಪಾಲಕನೇ ಕೇಳು. ನಾವೆಲ್ಲರೂ ಶಿವನ ಪ್ರಮಥಗಣಗಳು. ಶಂಕರನ ಆಜ್ಞೆಯಂತೆ ನಿನ್ನನ್ನು

ತ್ವಾಮುಪೀಹ ಗಣಂ ಮತ್ವಾ ನ ಹನ್ಯಾಮೋಽನ್ಯಥಾ ಹತಃ ।
ತಿಷ್ಠ ದೂರೇ ಸ್ವತಸ್ತ್ವಂ ಚ ಕಿಮರ್ಥಂ ಮೃತ್ಯುಮಿಚ್ಛಸೇ ॥ ೮ ॥

॥ ಬ್ರಹ್ಮೋವಾಚ ॥

ಇತ್ಯುಕ್ತೋಽಪಿ ಗಣೇಶಶ್ಚ ಗಿರಿಜಾತನಯೋಽಭಯಃ ।
ನಿರ್ಭರ್ತ್ಸ್ಯ ಶಂಕರಗಣಾನ್ ನ ದ್ವಾರಂ ಮುಕ್ತವಾಂಸ್ತದಾ ॥ ೯ ॥

ತೇ ಸರ್ವೇಽಪಿ ಗಣಾಶ್ಶೈವಾಸ್ತತ್ರತ್ಯಾ ವಚನಂ ತದಾ ।
ಶ್ರುತ್ವಾ ತತ್ರ ಶಿವಂ ಗತ್ವಾ ತದ್ವೃತ್ತಾಂತಮಥಾಬ್ರುವನ್ ॥ ೧೦ ॥

ತತಶ್ಚ ತದ್ವಚಃ ಶ್ರುತ್ವಾದ್ಭುತಲೀಲೋ ಮಹೇಶ್ವರಃ ।
ವಿನಿರ್ಭರ್ತ್ಸ್ಯ ಗಣಾನೂಚೇ ನಿಜಾಂಲ್ಲೋಕಗತಿರ್ಮುನೇ ॥ ೧೧ ॥

॥ ಮಹೇಶ್ವರ ಉವಾಚ ॥

ಕಶ್ಚಾಯಂ ವರ್ತತೇ ಕಿಂ ಚ ಬ್ರವೀತ್ಯರಿವದುಚ್ಛ್ರಿತಃ ।
ಕಿಂ ಕರಿಷ್ಯತ್ಯಸದ್ಬುದ್ಧಿಃ ಸ್ವ ಮೃತ್ಯುಂ ವಾಂಛತಿ ಧ್ರುವಂ ॥ ೧೨ ॥

---

ಇಲ್ಲಿಂದ ಆಚೆಗೆ ಕಳುಹಿಸಲು ಬಂದಿರುವೆವು. ನಿನ್ನನ್ನೀಗಲೆ ಕೊಲ್ಲುತ್ತಿದ್ದೆವು. ಆದರೆ ನೀನೂ ನಮ್ಮಂತೆ ಶಿವಗಣದವನು. ಅದಕ್ಕೋಸ್ಕರ ಸುಮ್ಮನಿರುವೆವು. ದೂರ ನಡೆ. ಸುಮ್ಮನೆ ಏಕೆ ಜಗಳವಾಡಿ ಸಾಯುವೆ ಎಂದರು.

೯. ಬ್ರಹ್ಮನು ಹೇಳಿದನು :—ಶಿವಗಣಗಳ ಮಾತನ್ನು ಕೇಳಿ ಗಣಪತಿಯು ಹೆದರಲಿಲ್ಲ. ಅವರೆಲ್ಲರನ್ನೂ ಚೆನ್ನಾಗಿ ನಿಂದಿಸಿ ಕದವನ್ನು ಮುಚ್ಚಿದನು.

೧೦. ಅನಂತರ ಶಿವನ ಗಣಗಳೆಲ್ಲಾ ಅವನ ಮಾತನ್ನು ಕೇಳಿ ಶಿವನ ಸಮೀಪಕ್ಕೆ ಹೋಗಿ ಅಲ್ಲಿ ನಡೆದ ವೃತ್ತಾಂತವನ್ನೆಲ್ಲಾ ತಿಳಿಸಿದರು.

೧೧. ಅವರು ಅರಿಕೆಮಾಡಿದುದನ್ನು ಕೇಳಿ ಅದ್ಭುತಲೀಲನಾದ ಮಹೇಶ್ವರನು ಅವರನ್ನೆಲ್ಲಾ ನಿಂದಿಸಿ ಲೋಕರೀತಿಯನ್ನನುಸರಿಸಿ ಮಾತನಾಡಿದನು.

೧೨-೧೩. ಮಹೇಶ್ವರನು ನುಡಿದನು :—ಅವನು ಯಾರು ? ಏನೆಂದು ಹೇಳಿದನು ? ಅವನೆಲ್ಲೋ ಏನೂ ತಿಳಿಯದ ಮೂಢನಾಗಿರಬೇಕು. ಅವನಿಗೆ ಖಂಡಿತ ಮೃತ್ಯುವೇ ಬೇಕಾಗಿರುವುದೆಂದು ತೋರುವುದು. ಅವನ ಅಭಿಪ್ರಾಯವೂ ಹಾಗೆಯೇ

ದೂರತಃ ಕ್ರಿಯತಾಂ ಹ್ಯೇಷ ದ್ವಾರಪಾಲೋ ನವೀನಕಃ ।
ಕ್ಲೀಬಾ ಇವ ಸ್ಥಿತಾಸ್ತಸ್ಯ ವೃತ್ತಂ ವದಥ ಮೇ ಕಥಂ ॥ ೧೩ ॥

ಸ್ವಾಮಿನೋಕ್ತಾ ಗಣಾಸ್ತೇ ಚಾದ್ಭುತಲೀಲೇನ ಶಂಭುನಾ ।
ಪುನರಾಗತ್ಯ ತತ್ರೈವ ತಮೂಚುರ್ದ್ವಾರಪಾಲಕಂ ॥ ೧೪ ॥

॥ ಶಿವಗಣಾ ಊಚುಃ ॥

ರೇ ರೇ ದ್ವಾರಪ ಕಸ್ತ್ವಂ ಹಿ ಸ್ಥಿತಿಶ್ಚ ಸ್ಥಾಪಿತಃ ಕುತಃ ।
ನೈವಾಸ್ಮಾನ್ಗಣಯಸ್ಯೇವಂ ಕಥಂ ಜೀವಿತುಮಿಚ್ಛಸಿ ॥ ೧೫ ॥

ದ್ವಾರಪಾಲಾ ವಯಂ ಸರ್ವೇ ಸ್ಥಿತಾಃ ಕಿಂ ಪರಿಭಾಷಸೇ ।
ಸಿಂಹಾಸನಗೃಹೀತಶ್ಚ ಶೃಗಾಲಃ ಶಿವಮೀಹತೇ ॥ ೧೬ ॥

ತಾವದ್ಗರ್ಜಸಿ ಮೂರ್ಖ ತ್ವಂ ಯಾವದ್ಗಣಪರಾಕ್ರಮಃ ।
ನಾನುಭೂತಸ್ತ್ವಯಾತ್ರೈವ ಹ್ಯನುಭೂತಃ ಪತಿಷ್ಯತಿ ॥ ೧೭ ॥

---

ಇರುವಂತೆ ಕಾಣಿಸುತ್ತದೆ. ಆ ಹೊಸಬನನ್ನು ದೂರವಾಗಿ ಕಳುಹಿಸಲಾರದೆ ಹೇಡಿಗಳಂತೆ ಹಿಂತಿರುಗಿ ಬಂದು ನನ್ನೆದುರಿಗೆ ಮಾತನಾಡುತ್ತಿರುವಿರಲ್ಲಾ ? ಎಂದನು.

೧೪-೧೬. ಅದ್ಭುತಲೀಲೆಯುಳ್ಳ ಆ ಶಿವನ ಅನುಜ್ಞೆಯನ್ನು ಪಡೆದು ಶಿವನ ಗಣಗಳೆಲ್ಲವೂ ಪುನಃ ಗಣಪತಿಯ ಹತ್ತಿರಕ್ಕೆ ಬಂದು ಆ ದ್ವಾರಪಾಲಕನನ್ನು ಕುರಿತು ಹೇಳಿದರು :—ಎಲೈ ದ್ವಾರಪಾಲಕನೇ, ನೀನು ಯಾರು ? ಏತಕ್ಕಾಗಿ ಇಲ್ಲಿ ನಿಂತಿರುವೆ ? ನಾವಾರೆಂಬುದನ್ನು ತಿಳಿಯದೆ ನಮ್ಮನ್ನು ತಿರಸ್ಕರಿಸುತ್ತಿರುವೆಯಲ್ಲಾ. ಹೀಗಾದರೆ ನಿನ್ನ ಪ್ರಾಣ ಉಳಿಯವುದೆಂದು ತಿಳಿದಿರುವೆಯಾ ? ನಾವೂ ಸಹ ಶಿವನ ದ್ವಾರಪಾಲಕರು. ಏನನ್ನೂ ತಿಳಿಯದೆ ಮಾತನಾಡುತ್ತಿರುವೆ. ನರಿಯು ಸಿಂಹಾಸನವನ್ನು ಹತ್ತಿದಮಾತ್ರಕ್ಕೆ ಅದಕ್ಕೆ ಸುಖವುಂಟಾದೀತೇನು ?

೧೭. ನಮ್ಮ ಪರಾಕ್ರಮುವಿನ್ನೂ ನಿನಗೆ ತಿಳಿದಿಲ್ಲ. ಅದಕ್ಕೋಸ್ಕರಲೇ ನೀನು ಸುಮ್ಮನೆ ಹರಟುತ್ತಿರುವೆ. ನಮ್ಮ ಪರಾಕ್ರಮುವನ್ನು ತಿಳಿದಮೇಲೆ ಭೂಮಿಗೆ ಬೀಳುವೆ.

ಇತ್ಯುಕ್ತಸ್ತ್ರೈಸ್ಸಸಂಕ್ರುದ್ಧೋ ಹಸ್ತಾಭ್ಯಾಂ ಯಷ್ಟಿಕಾಂ ತದಾ ।
ಗೃಹೀತ್ವಾ ತಾಡಯಾಮಾಸ ಗಣಾಂಸ್ತಾನ್ಪರಿಭಾಷಿಣಃ ॥ ೧೮ ॥

ಉವಾಚಾಥ ಶಿವಾಪುತ್ರಃ ಪರಿಭರ್ತ್ಸ್ಯ ಗಣೇಶ್ವರಾನ್ ।
ಶಂಕರಸ್ಯ ಮಹಾವೀರಾನ್ನಿರ್ಭಯಸ್ತಾನ್ಗಣೇಶ್ವರಃ ॥ ೧೯ ॥

॥ ಶಿವಾಪುತ್ರ ಉವಾಚ ॥

ಯಾತ ಯಾತ ತತೋ ದೂರೇ ನೋ ಚೇದ್ವೋ ದರ್ಶಯಾಮಿ ಹ ।
ಸ್ವಪರಾಕ್ರಮಮುತ್ಯುಗ್ರಂ ಯಾಸ್ಯಥಾತ್ಯುಪಹಾಸ್ಯತಾಂ ॥ ೨೦ ॥

ಇತ್ಯಾಕರ್ಣ್ಯ ವಚಸ್ತಸ್ಯ ಗಿರಿಜಾತನಯಸ್ಯ ಹಿ ।
ಪರಸ್ಪರಮಥೋಚುಸ್ತೇ ಶಂಕರಸ್ಯ ಗಣಾಸ್ತದಾ ॥ ೨೧ ॥

॥ ಶಿವಗಣಾ ಊಚುಃ ॥

ಕಿಂ ಕರ್ತವ್ಯಂ ಕ್ವ ಗಂತವ್ಯಂ ಕ್ರಿಯತೇ ಸ ನ ಕಿಂ ಪುನಃ ।
ಮರ್ಯಾದಾ ರಕ್ಷ್ಯತೇಽಸ್ಮಾಭಿರನ್ಯಥಾ ಕಿಂ ಬ್ರವೀತಿ ಚ ॥ ೨೨ ॥

---

೧೮. ಈರೀತಿಯಾಗಿ ಹೇಳುತ್ತಿರುವುದನ್ನು ಕೇಳಿ ಗಣಪತಿಯು ಅತ್ಯಂತ ಸಿಟ್ಟಿನಿಂದ ತನ್ನ ಕೈಯಲ್ಲಿರುವ ಕೋಲಿನಿಂದ ಅವರನ್ನು ಹೊಡೆಯಲು ಪ್ರಾರಂಭಿಸಿದನು.

೧೯-೨೦. ಮಹಾವೀರರಾದ ಆ ಗಣಗಳೆಲ್ಲವನ್ನೂ ಬೈಯ್ಯುತ್ತಾ ಗಣಪತಿಯು ಅವರನ್ನು ಕುರಿತು:—ನೀವೆಲ್ಲರೂ ದೂರ ತೊಲಗಿರಿ. ಇಲ್ಲದಿದ್ದರೆ ನನ್ನ ಪ್ರಚಂಡ ಪರಾಕ್ರಮವನ್ನು ಎದುರಿಸಬೇಕಾದೀತು. ಅದರಿಂದ ನೀವು ಬಹಳ ಅವಮಾನ ಗೊಳ್ಳುವಿರಿ ಎಂದನು.

೨೧-೨೨. ಗಣಪತಿಯಾಡಿದ ಮಾತನ್ನು ಕೇಳಿ ಆ ಶಿವಗಣಗಳು ಪರಸ್ಪರವಾಗಿ ಮಾತನಾಡಿಕೊಂಡರು. ಈಗ ನಾವೇನು ಮಾಡೋಣ ? ಎಲ್ಲಿ ಹೋಗೋಣ? ಆ ದ್ವಾರಪಾಲಕನು ಏನನ್ನು ಮಾಡುವುದಕ್ಕೂ ಹೇಸುವುದಿಲ್ಲ. ನಮ್ಮ ಮರ್ಯಾದೆಯನ್ನು ನಾವು ಉಳಿಸಿಕೊಳ್ಳಬೇಕು. ನಾವಂತೂ ಶಿವನ ಅಪ್ಪಣೆಯನ್ನು ನಡೆಸಿರುವೆವು. ಈ ಬಾಲಕನು ಏನನ್ನೋ ಹೇಳುತ್ತಿರುವನು.

॥ ಬ್ರಹ್ಮೋವಾಚ ॥

ತತಶ್ಶಂಭುಗಣಾಸ್ಸರ್ವೇ ಶಿವಂ ದೂರೇ ವ್ಯವಸ್ಥಿತಂ ।
ಕ್ರೋಶಮಾತ್ರಂ ತು ಕೈಲಾಸಾದ್ಗತ್ವಾ ತೇ ಚ ತಥಾಬ್ರುವನ್ ॥ ೨೩ ॥

ಶಿವೋ ವಿಹಸ್ಯ ತಾನ್ ಸರ್ವಾನ್ ತ್ರಿಶೂಲಕರ ಉಗ್ರಧೀಃ ।
ಉವಾಚ ಪರಮೇಶೋ ಹಿ ಸ್ವಗಣಾನ್ವೀರಸಮ್ಮತಾನ್ ॥ ೨೪ ॥

॥ ಶಿವ ಉವಾಚ ॥

ರೇ ರೇ ಗಣಾಃ ಕ್ಲೀಬಮುತಾ ನ ವೀರಾ ವೀರಮಾನಿನಃ ।
ಮದಗ್ರೇ ನೋದಿತಂ ಯೋಗ್ಯಾ ಭರ್ತ್ಸಿತಃ ಕಿಂ ಪುನರ್ವದೇತ್ ॥ ೨೫ ॥

ಗಮ್ಯತಾಂ ತಾಡ್ಯತಾಂ ಚೈಷ ಯಃ ಕಶ್ಚಿತ್ಪ್ರಭವೇದಿಹ ।
ಬಹುನೋಕ್ತೇನ ಕಿಂ ಚಾತ್ರ ದೂರೀಕರ್ತವ್ಯ ಏವ ಸಃ ॥ ೨೬ ॥

॥ ಬ್ರಹ್ಮೋವಾಚ ॥

ಇತಿ ಸರ್ವೇ ಮಹೇಶೇನ ಜಗ್ಮುಸ್ತತ್ರ ಮುನೀಶ್ವರ ।
ಭರ್ತ್ಸಿತಾ ತೇನ ದೇವೇನ ಪ್ರೋಚುಶ್ಚ ಗಣಸತ್ತಮಾಃ ॥ ೨೭ ॥

---

೨೩. ಬ್ರಹ್ಮನು ಹೇಳಿದನು.—ಹೀಗೆ ಯೋಚಿಸಿ ಶಿವಗಣಗಳೆಲ್ಲವೂ ಕೈಲಾಸ ದಿಂದ ಒಂದು ಹರಿದಾರಿಯಲ್ಲಿರುವ ಶಿವನ ಹತ್ತಿರಕ್ಕೆ ಹೋಗಿ ಗಣಪತಿಯಾಡಿದ ಮಾತನ್ನು ನಿವೇದಿಸಿದರು.

೨೪. ಶಿವನು ಅವರಾಡಿದ ಮಾತುಗಳನ್ನು ಕೇಳಿ ನಗುತ್ತಾ ತ್ರಿಶೂಲವನ್ನು ಹಿಡಿದು ಅತ್ಯಂತ ಕೋಪಗೊಂಡು ವೀರರೆಂದೆನ್ನಿಸಿಕೊಳ್ಳುವ ತನ್ನ ಗಣಗಳನ್ನು ಕುರಿತು,

೨೫-೨೬. ಶಿವನು ಹೇಳಿದನು :-ಎಲೈ ನೀಚರೇ, ನೀವೆಲ್ಲರೂ ನಪುಂಸಕರು. ವೀರರಲ್ಲ. ವೀರರೆಂದು ನನ್ನೆದುರಿಗೆ ಕೊಚ್ಚಿಕೊಳ್ಳುವಿರಿ. ಅಷ್ಟೇ ಹೊರತು ನೀವೇನು ಯೋಗ್ಯರಾದವರಲ್ಲ. ನಿಮ್ಮನ್ನು ನಿಂದಿಸಿದರೇನು ಪ್ರಯೋಜನ ? ನಡೆಯಿರಿ. ಅವ ನನ್ನು ಹೊಡೆಯಿರಿ. ಏನಾದರೂ ಸರಿಯೇ ಅವನನ್ನು ಓಡಿಸಲೇಬೇಕು ಎಂದನು.

೨೭. ಬ್ರಹ್ಮನು ಹೇಳಿದನು.—ಎಲೈ ಮುನಿವರನೇ, ಈಶ್ವರನಾಡಿದುದನ್ನು ಕೇಳಿ ಪ್ರಮಥಗಣಗಳೆಲ್ಲರೂ ಗಣಪತಿಯ ಹತ್ತಿರಕ್ಕೆ ಹೋಗಿ ಅವನನ್ನು ಕುರಿತು ಈ ರೀತಿ ಹೇಳಿದರು.

॥ ಶಿವಗಣಾ ಊಚುಃ ॥

ರೇ ರೇ ತ್ವಂ ಶೃಣು ವೈ ಬಾಲ ಬಲಾತ್ಕಿಂ ಪರಿಭಾಷಸೇ ।
ಇತಸ್ತ್ವಂ ದೂರತೋ ಯಾಹಿ ನೋ ಚೇನ್ಮೃತ್ಯುರ್ಭವಿಷ್ಯತಿ ॥ ೨೮ ॥

॥ ಬ್ರಹ್ಮೋವಾಚ ॥

ಇತಿ ಶ್ರುತ್ವಾ ವಚಸ್ತೇಷಾಂ ಶಿವಾಜ್ಞಾಕಾರಿಣಾಂ ಧ್ರುವಂ ।
ಶಿವಾಸುತಸ್ತದಾಭೂತ್ಸ ಕಿಂ ಕರೋಮೀತಿ ದುಃಖಿತಃ ॥ ೨೯ ॥

ಏತಸ್ಮಿನ್ನಂತರೇ ದೇವೀ ತೇಷಾಂ ತಸ್ಯ ಚ ವೈ ಪುನಃ ।
ಶ್ರುತ್ವಾ ತು ಕಲಹಂ ದ್ವಾರಿ ಸಖೀಂ ಪಶ್ಯೇತಿ ಸಾಬ್ರವೀತ್ ॥ ೩೦ ॥

ಸಮಾಗತ್ಯ ಸಖೀ ತತ್ರ ವೃತ್ತಾಂತಂ ಸಮಬುಧ್ಯತ ।
ಕ್ಷಣಮಾತ್ರಂ ತದಾ ದೃಷ್ಟ್ವಾ ಗತಾ ಹೃಷ್ಟಾ ಶಿವಾಂತಿಕಂ ॥ ೩೧ ॥

ತತ್ರ ಗತ್ವಾ ತು ತತ್ಸರ್ವಂ ವೃತ್ತಂ ತದ್ಯದಭೂನ್ಮುನೇ ।
ಅಶೇಷೇಣ ತಯಾ ಸಖ್ಯಾ ಕಥಿತಂ ಗಿರಿಜಾಗ್ರತಃ ॥ ೩೨ ॥

---

೨೮. ಶಿವಗಣಗಳು ಹೇಳಿದರು.--ಎಲೈ ನೀಚನಾದ ಬಾಲಕನೇ, ನಮ್ಮ ಮಾತನ್ನು ಕೇಳು. ಸುಮ್ಮನೇ ಏಕೆ ಮಾತನಾಡುವೆ? ಸುಮ್ಮನೆ ದೂರ ಹೋಗು. ಇಲ್ಲದಿದ್ದರೆ ಮೃತ್ಯುವನ್ನು ಎದುರು ನೋಡುವೆ ಎಂದರು.

೨೯-೩೦. ಬ್ರಹ್ಮನು ಹೇಳಿದನು.—ಶಿವನ ಅಪ್ಪಣೆಯಂತೆ ಗಣಗಳು ಆಡಿದ ಮಾತನ್ನು ಕೇಳಿ ಇದು ಶಿವನ ಅಪ್ಪಣೆಯೇ ಸರಿ ಎಂದು ತಿಳಿದು ಗಣಪತಿಯು ಈಗೇನುಮಾಡಲಿ? ಎಂಬುದಾಗಿ ಯೋಚಿಸುತ್ತಾ ದುಃಖಿಸಿದನು. ಆಗ ಪಾರ್ವತಿಯು ಬಾಗಿಲಿನಲ್ಲಿ ಜಗಳವಾಗುತ್ತಿರುವುದನ್ನು ಕೇಳಿ ತನ್ನ ಸಖಿಯನ್ನು ಕುರಿತು ಅದೇನು ನೋಡು ಎಂದು ಹೇಳಿದಳು.

೩೧-೩೨. ಸಖಿಯು ಬಾಗಿಲಿಗೆ ಬಂದು ಅಲ್ಲಿ ನಡೆಯುತ್ತಿರುವ ವೃತ್ತಾಂತವನ್ನು ತಿಳಿದು ಪಾರ್ವತಿಯು ಹತ್ತಿರಕ್ಕೆ ಹೋಗಿ ಎಲ್ಲಾ ವಿಷಯವನ್ನೂ ಸ್ವಲ್ಪವೂ ಬಿಡದಂತೆ ತಿಳಿಸಿದಳು.

॥ ಸಖ್ಯುವಾಚ ॥
ಅಸ್ಮದೀಯೋ ಗಣೋ ಯೋ ಹಿ ಸ್ಥಿತೋ ದ್ವಾರಿ ಮಹೇಶ್ವರಿ ।
ನಿರ್ಭರ್ತ್ಸಯಂತಿ ತಂ ವೀರಾಶ್ಶಂಕರಸ್ಯ ಗಣಾ ಧ್ರುವಂ ॥ ೩೩ ॥

ಶಿವಶ್ಚೈವ ಗಣಾಸ್ಸರ್ವೇ ವಿನಾ ತೇಽವಸರಂ ಕಥಂ ।
ಪ್ರವಿಶಂತಿ ಹಠಾದ್ಗೇಹೇ ನೈತುಚ್ಛಭತರಂ ತವ ॥ ೩೪ ॥

ಸಮ್ಯಕ್ಕೃತಂ ಹ್ಯನೇನೈವ ನ ಹಿ ಕೋಽಪಿ ಪ್ರವೇಶಿತಃ ।
ದುಃಖಂ ಚೈವಾನುಭೂಯಾತ್ರ ತಿರಸ್ಕಾರಾದಿಕಂ ತಥಾ ॥ ೩೫ ॥

ಅತಃ ಪರಂತು ವಾಗ್ವಾದಃ ಕ್ರಿಯತೇ ಚ ಪರಸ್ಪರಂ ।
ವಾಗ್ವಾದೇ ಚ ಕೃತೇ ನೈವ ತಹ್ಯಾರ್ಯಾಂತು ಸುಖೇನ ವೈ ॥ ೩೬ ॥

ಕೃತಶ್ಚೈವಾತ್ರ ವಾಗ್ವಾದಸ್ತಂ ಜಿತ್ವಾ ವಿಜಯೇನ ಚ ।
ಪ್ರವಿಶಂತು ತಥಾ ಸರ್ವೇ ನಾನ್ಯಥಾ ಕರ್ಹಿಚಿತ್ಪ್ರಿಯೇ ॥ ೩೭ ॥

ಅಸ್ಮಿನ್ನೇವಾಸ್ಮದೀಯೇ ವೈ ಸರ್ವೇ ಸಂಭರ್ತ್ಸಿತಾ ವಯಂ ।
ತಸ್ಮಾದ್ದೇವಿ ತ್ವಯಾ ಭದ್ರೇ ನ ತ್ಯಾಜ್ಯೋ ಮಾನ ಉತ್ತಮಃ ॥ ೩೮ ॥

---

೩೩. ಸಖಿಯು ಹೇಳಿದಳು.—ಎಲೌ ದೇವಿಯೇ, ಶಿವಗಣಗಳೆಲ್ಲವೂ ಬಂದು ಬಾಗಿಲಿನಲ್ಲಿ ನಿಂತಿರುವ ನಮ್ಮ ಗಣಪತಿಯನ್ನು ನಿಂದಿಸುತ್ತಿರುವರು.

೩೪-೩೫. ಈರೀತಿ ನಿಂದಿಸಿ ಹಿಂಸಿಸುತ್ತಿದ್ದರೂ ಆ ಗಣಪತಿಯು ಶಿವನ ಗಣಗಳಲ್ಲಿ ಯಾರನ್ನೂ ಒಳಕ್ಕೆ ಬಿಡುತ್ತಿಲ್ಲ. ಅವರೆಲ್ಲರೂ ಬಲಾತ್ಕಾರದಿಂದ ನುಗ್ಗುತ್ತಿದ್ದರೂ ನಿನ್ನ ಅಪ್ಪಣೆಯಿಲ್ಲದೆ ಹೇಗೆ ತಾನೆ ಬಿಟ್ಟಾನು ? ಇವನೀಗ ಮಾಡುತ್ತಿರುವುದು ಒಳ್ಳೆಯಕೆಲಸವೇ ಆಗಿದೆ.

೩೬-೩೭. ಈಗವರು ಪರಸ್ಪರ ಜಗಳವನ್ನು ಮಾಡುತ್ತಿರುವರು. ಆದರೂ ಯಾರೂ ಒಳಗೆ ಬರಲು ಸಾಧ್ಯವಿಲ್ಲ. ನಮ್ಮ ಗಣಪತಿಯನ್ನು ಜಯಿಸಿದ ಹೊರತು ಯಾರೂ ಖಂಡಿತ ಒಳಗೆ ಬರಲಾರರು.

೩೮. ಎಲೌ ದೇವಿ, ಗಣಪತಿಯನ್ನು ನಿಂದಿಸುವುದೂ ಅಲ್ಲದೆ ನಮ್ಮನ್ನೂ ನಿಂದಿಸುತ್ತಿರುವರು ಆದದರಿಂದ ಒಂದು ವೇಳೆ ಮಾನಹೋಗುವ ಪ್ರಸಂಗಬಂದರೆ

ಶಿವೋ ಮರ್ಕಟವತ್ತ್ಯೇsದ್ಯ ವರ್ತತೇ ಸರ್ವದಾ ಸತಿ ।
ಕಿಂ ಕರಿಷ್ಯತ್ಯಹಂಕಾರಮಾನುಕೂಲ್ಯಂ ಭವಿಷ್ಯತಿ ॥ ೩೯ ॥

॥ ಬ್ರಹ್ಮೋವಾಚ ॥

ಅಹೋ ಕ್ಷಣಂ ಸ್ಥಿತಾ ತತ್ರ ಶಿವೇಚ್ಛಾವಶತಸ್ಸತೀ ॥ ೪೦ ॥

ಮನಸ್ಯುವಾಚ ಸಾ ಭೂತ್ವಾ ಮಾನಿನೀ ಪಾರ್ವತೀ ತದಾ ॥ ೪೧ ॥

॥ ಶಿವೋವಾಚ ॥

ಅಹೋ ಕ್ಷಣಂ ಸ್ಥಿತೋ ನೈವ ಹಠಾತ್ಕಾರಃ ಕಥಂ ಕೃತಃ ।
ಕಥಂ ಚೈವಾತ್ರ ಕರ್ತವ್ಯಂ ವಿನಯೇನಾಥವಾ ಪುನಃ ॥ ೪೨ ॥

ಭವಿಷ್ಯತಿ ಭವತ್ಯೇವ ಕೃತಂ ನೈವಾನ್ಯಥಾ ಪುನಃ ।
ಇತ್ಯುಕ್ತ್ವಾ ತು ಸಖೀ ತತ್ರ ಪ್ರೇಷಿತಾ ಪ್ರಿಯಯಾ ತದಾ ॥ ೪೩ ॥

---

ಅದಕ್ಕೆ ತಕ್ಕ ಉಪಾಯವನ್ನು ಯೋಚಿಸಬೇಕು. ಮಾನವನ್ನು ಮಾತ್ರ ಬಿಡಕೂಡದು.

೩೯. ಶಿವನೇನೋ ಪತಿವ್ರತೆಯಾದ ನೀನು ಹೇಳಿದಂತೆ ಕೇಳುತ್ತಿರುವನು. ಕಪಿಯಂತೆ ನಿನ್ನ ಇಚ್ಛಾನುಸಾರವಾಗಿ ನಡೆಯುವನು. ಅವನು ಅಹಂಕಾರದಿಂದ ಏನು ಮಾಡಿದರೂ ಅದರಿಂದ ನಿನಗೆ ಅನುಕೂಲವೇ ಆಗುವುದು ಎಂದರು.

೪೦-೪೧. ಬ್ರಹ್ಮನು ಹೇಳಿದನು:—ಶಿವನ ಅನುಜ್ಞೆಯಂತೆ ನಡೆಯುತ್ತಿರುವ ಪತಿವ್ರತೆಯಾದ ಪಾರ್ವತಿಯು ಒಂದು ಕ್ಷಣಕಾಲ ಸುಮ್ಮನಿದ್ದಳು. ಆ ಮೇಲೆ ಮನಸ್ಸಿನಲ್ಲಿ ಹೀಗೆ ಯೋಚಿಸಿದಳು.

೪೨-೪೩. ಇನ್ನು ಕ್ಷಣಕಾಲವು ಮುಗಿದಿಲ್ಲ. ಆಗಲೆ ಒಳಗೆ ನುಗ್ಗಲು ಬಲಾತ್ಕರಿಸುತ್ತಿರುವರು. ಈಗ ಏನು ಮಾಡೋಣ? ನಮ್ರತೆಯಿಂದ ಸುಮ್ಮನಿರಲೆ ಹೇಗೆ ? ಆಗಬೇಕಾದುದು ಆಗಿಯೇ ಆಗುವುದು. ಏನು ಮಾಡಿದರೂ ನಿಲ್ಲುವುದಿಲ್ಲ. ಈ ರೀತಿಯಾಗಿ ಯೋಚಿಸಿ ತನ್ನ ಸಖಿಯನ್ನು ಅಲ್ಲಿಗೆ ಕಳುಹಿಸಿದಳು.

ಸಮಾಗತ್ಯಾಬ್ರವೀತ್ಸಾ ಚ ಪ್ರಿಯಯಾ ಕಥಿತಂ ಹಿ ಯತ್ ।
ಸಮಾಚಷ್ಟ ಗಣೇಶಂ ತಂ ಗಿರಿಜಾತನಯಂ ತದಾ ॥ ೪೪ ॥

॥ ಸಖ್ಯುವಾಚ ॥
ಸಮ್ಯಕ್ಕೃತಂ ತ್ವಯಾ ಭದ್ರ ಬಲಾತ್ತೇ ಪ್ರವಿಶಂತು ನ ।
ಭವದಗ್ರೇ ಗಣಾ ಹ್ಯೇತೇ ಕಿಂ ಜಯಂತು ಭವಾದೃಶಂ ॥ ೪೫ ॥

ಕೃತಂ ಚೇದ್ವಾಕೃತಂ ಚೈವ ಕರ್ತವ್ಯಂ ಕ್ರಿಯತಾಂ ತ್ವಯಾ ।
ಜಿತೋ ಯಸ್ತು ಪುನರ್ವಾಪಿ ನ ವೈರಮಥವಾ ಧ್ರುವಂ ॥ ೪೬ ॥

॥ ಬ್ರಹ್ಮೋವಾಚ ॥
ಇತಿ ಶ್ರುತ್ವಾ ವಚಸ್ತಸ್ಯಾ ಮಾತುಶ್ಚೈವ ಗಣೇಶ್ವರಃ ।
ಆನಂದಂ ಪರಮಂ ಪ್ರಾಪ ಬಲಂ ಭೂರಿ ಮಹೋನ್ನತಿಂ ॥ ೪೭ ॥

ಬದ್ಧಕಕ್ಷಸ್ತಥೋಷ್ಣೀಷಂ ಬಧ್ವಾ ಜಂಘೋರು ಸಂಸ್ಪೃಶನ್ ।
ಉವಾಚ ತಾನ್ಗಣಾನ್ಸರ್ವಾನ್ ನಿರ್ಭಯಂ ವಚನಂ ಮುದಾ ॥ ೪೮ ॥

---

೪೪. ಸಖಿಯು ಅಲ್ಲಿಗೆ ಹೋಗಿ ಗಣಪತಿಯನ್ನು ಕುರಿತು ಪಾರ್ವತಿಯು ಹೇಳಿದುದನ್ನು ಅವನಿಗೆ ಹೇಳಿದಳು.

೪೫-೪೬. ಎಲೈ ಮಂಗಳಕರನೇ ನೀನು ಒಳ್ಳೆಯ ಕೆಲಸವನ್ನೇ ಮಾಡಿರುವೆ. ಶಿವನ ಗಣಗಳು ಯಾರೂ ಒಳಗೆ ಬರಕೂಡದು. ನಿನ್ನಂತಹ ಶೂರನನ್ನು ಯಾರು ತಾನೇ ಜಯಿಸುವರು? ಅವರೆಲ್ಲರೂ ಏನು ಬೇಕಾದರೂ ಮಾಡಲಿ ಅಥವಾ ಮಾಡದಿರಲಿ ನೀನಂತೂ ನಿನ್ನ ಕೆಲಸವನ್ನು ಮಾಡು. ಯಾರನ್ನು ಯಾರು ಜಯಿಸುವರೋ ಏನೋ? ಅಂತೂ ಖಂಡಿತ ದ್ವೇಷವು ಮಾತ್ರ ಉಂಟಾಗುವುದಿಲ್ಲ ಎಂದಳು.

೪೭-೪೮. ಬ್ರಹ್ಮನು ಹೇಳಿದನು ;—ತನ್ನ ತಾಯಿಯು ಹೇಳಿ ಕಳುಹಿಸಿದಂತೆ ಸಖಿಯಾಡಿದ ಮಾತನ್ನು ಕೇಳಿ ಗಣಪತಿಯು ಪರಮಾನಂದದಿಂದ ಸೊಂಟವನ್ನು ಕಟ್ಟಿ ಪೇಟವನ್ನೂ ಬಿಗಿಯಾಗಿಟ್ಟುಕೊಂಡು ತೊಡೆಗಳನ್ನು ತಟ್ಟುತ್ತಾ ಬಲು ಪರಾಕ್ರಮದಿಂದ ಕೂಡಿ ನಿರ್ಭಯದಿಂದ ಆ ಗಣಗಳನ್ನು ಕುರಿತು,

॥ ಗಣೇಶ ಉವಾಚ ॥

ಅಹಂ ಚ ಗಿರಿಜಾಸೂನುರ್ಯೂಯಂ ಶಿವಗಣಾಸ್ತಥಾ ।
ಉಭಯೇ ಸಮತಾಂ ಪ್ರಾಪ್ತಾಃ ಕರ್ತವ್ಯಂ ಕ್ರಿಯತಾಂ ಪುನಃ ॥ ೪೯ ॥

ಭವಂತೋ ದ್ವಾರಪಾಲಾಶ್ಚ ದ್ವಾರಪೋಽಹಂ ಕಥಂ ನ ಹಿ ।
ಭವಂತಶ್ಚ ಸ್ಥಿತಾಸ್ತತ್ರಾಽಹಂ ಸ್ಥಿತೋಽತ್ರೇತಿ ನಿಶ್ಚಿತಂ ॥ ೫೦ ॥

ಭವದ್ಭಿಶ್ಚ ಸ್ಥಿತಂ ಹ್ಯತ್ರ ಯದಾ ಭವತಿ ನಿಶ್ಚಿತಂ ।
ತದಾ ಭವದ್ಭಿಃ ಕರ್ತವ್ಯಂ ಶಿವಾಜ್ಞಾಪರಿಪಾಲನಂ ॥ ೫೧ ॥

ಇದಾನೀಂ ತು ಮಯಾ ಚಾತ್ರ ಶಿವಾಜ್ಞಾಪರಿಪಾಲನಂ ।
ಸತ್ಯಂ ಚ ಕ್ರಿಯತೇ ವೀರಾ ನಿರ್ಣೀತಂ ಮೇ ಯಥೋಚಿತಂ ॥ ೫೨ ॥

ತಸ್ಮಾಚ್ಛಿವಗಣಾಸ್ಸರ್ವೇ ವಚನಂ ಶೃಣುತಾದರಾತ್ ।
ಹಠಾದ್ವಾ ವಿನಯಾದ್ವಾ ನ ಗಂತವ್ಯಂ ಮಂದಿರೇ ಪುನಃ ॥ ೫೩ ॥

---

೪೯-೫೦. ಗಣಪತಿಯು ಹೇಳಿದನು :—ನಾನು ಪಾರ್ವತಿಯ ಮಗನು. ನೀವೂ ಶಿವನ ಗಣಗಳು. ಆದುದರಿಂದ ನಾವಿಬ್ಬರೂ ಸಮಬಲರಾದವರು. ನೀವೂ ದ್ವಾರಪಾಲಕರು. ನಾನೂ ದ್ವಾರಪಾಲಕನೇ. ಆದರೆ ನೀವು ಶಿವನ ಮನೆಯಲ್ಲಿ ಇರುವವರು. ನಾನು ಪಾರ್ವತಿಯ ಮನೆಯ ಬಾಗಿಲಿನಲ್ಲಿ ಇರುವವನು. ಇದು ನಿಜವಷ್ಟೆ ?

೫೧-೫೩. ಶಿವನ ಅಪ್ಪಣೆಯಂತೆ ನೀವಿಲ್ಲಿಗೆ ಬಂದಿರುವಿರಿ. ಆದುದರಿಂದ ಶಿವನ ಅಪ್ಪಣೆಯನ್ನು ಪರಿಪಾಲಿಸಿರಿ. ನಾನೂ ಕೂಡ ಪಾರ್ವತಿಯ ಆಜ್ಞೆಯಂತೆ ನಡೆಯುವೆನು. ಖಂಡಿತವಾಗಿಯೂ ನಡೆಸೇ ನಡೆಸುವೆನು. ಆದುದರಿಂದ ಎಲೈ ಗಣಗಳೇ, ನನ್ನ ಮಾತನ್ನು ಕೇಳಿರಿ. ನೀವು ಬಲಾತ್ಕಾರದಿಂದಲಾದರೂ ಸರಿಯೇ ವಿನಯದಿಂದಲಾದರೂ ಸರಿಯೇ ಒಳಕ್ಕೆ ಹೋಗಲಾರಿರಿ. ನಿಮ್ಮನ್ನು ಒಳಕ್ಕೆ ಬಿಡುವುದಿಲ್ಲ ಎಂದನು.

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾಸ್ತೇ ಗಣೇನೈವ ಸರ್ವೇ ತೇ ಲಜ್ಜಿತಾ ಗಣಾಃ ।
ಯಯುಶ್ಶಿವಾಂತಿಕಂ ತೇ ವೈ ನಮಸ್ಕೃತ್ಯ ಪುರಃ ಸ್ಥಿತಾಃ ॥ ೫೪ ॥

ಸ್ಥಿತ್ವಾ ನ್ಯವೇದಯನ್ಸರ್ವೇ ವೃತ್ತಾಂತಂ ಚ ತದದ್ಭುತಂ ।
ಕರೌ ಬಧ್ವಾ ನತಸ್ಕಂಧಾಶ್ಶಿವಂ ಸ್ತುತ್ವಾ ಪುರಃ ಸ್ಥಿತಾಃ ॥ ೫೫ ॥

ತತ್ಸರ್ವಂ ತು ತದಾ ಶ್ರುತ್ವಾ ವೃತ್ತಂ ತತ್ಸ್ವಗಣೋದಿತಂ ।
ಲೌಕಿಕೀಂ ವೃತ್ತಿಮಾಶ್ರಿತ್ಯ ಶಂಕರೋ ವಾಕ್ಯಮಬ್ರವೀತ್ ॥ ೫೬ ॥

॥ ಶಂಕರ ಉವಾಚ ॥

ಶ್ರೂಯತಾಂ ಚ ಗಣಾಸ್ಸರ್ವೇ ಯುದ್ಧಂ ಯೋಗ್ಯಂ ಭವೇನ್ನ ಹಿ ।
ಯೂಯಂ ಚಾತ್ರಾಸ್ಮದೀಯಾ ವೈ ಸ ಚ ಗೌರೀಗಣಸ್ತಥಾ ॥ ೫೭ ॥

ವಿನಯಃ ಕ್ರಿಯತೇ ಚೇದ್ವೈ ವಶ್ಯಶ್ಶಂಭುಃ ಸ್ತ್ರಿಯಾ ಸದಾ ।
ಇತಿ ಖ್ಯಾತಿರ್ಭವೇಲ್ಲೋಕೇ ಗರ್ಹಿತಾ ಮೇ ಗಣಾ ಧ್ರುವಂ ॥ ೫೮ ॥

ಕೃತೇ ಚೈವಾತ್ರ ಕರ್ತವ್ಯಮಿತಿ ನೀತಿರ್ಗರೀಯಸೀ ।
ಏಕಾಕೀ ಸ ಗಣೋ ಬಾಲಃ ಕಿಂ ಕರಿಷ್ಯತಿ ವಿಕ್ರಮಂ ॥ ೫೯ ॥

---

೫೪-೫೫. ಬ್ರಹ್ಮನು ಹೇಳಿದನು ;—ಗಣಪತಿಯಾಡಿದ ಮಾತನ್ನು ಕೇಳಿ ತುಂಬಾ ನಾಚಿಕೆಯಿಂದ ಶಿವನ ಸಮೀಪಕ್ಕೆ ಹೋದರು. ಅಲ್ಲಿ ಶಿವನಿಗೆ ನಮಸ್ಕರಿಸಿ ಕೈಗಳನ್ನು ಕಟ್ಟಿಕೊಂಡು ಕತ್ತನ್ನು ಬಗ್ಗಿಸಿ ಅಲ್ಲಿ ನಡೆದ ಅದ್ಭುತವಾದ ವಿಷಯಗಳನ್ನೆಲ್ಲಾ ವಿಜ್ಞಾಪಿಸಿದರು.

೫೬. ಆ ವಿಷಯಗಳನ್ನೆಲ್ಲಾ ಕೇಳಿ ಶಿವನು ತನ್ನ ಗಣಗಳನ್ನು ಕುರಿತು ಲೋಕಾಭಿರಾಮವಾಗಿ ಮಾತನಾಡಿದನು.

೫೭-೫೮. ಶಂಕರನು ಹೇಳಿದನು—ಎಲೈ ಗಣಗಳಿರಾ, ಕೇಳಿರಿ. ಈಗ ನೀವು ಯುದ್ಧಮಾಡುವುದು ಸರಿಯಲ್ಲ. ನೀವೆಲ್ಲರೂ ನನ್ನ ಗಣದವರು. ಆ ಹುಡುಗನು ಪಾರ್ವತಿಯ ಗಣವು. ಈಗ ನೀವೆಲ್ಲರೂ ನಮ್ರರಾಗಿ ಹಿಂತಿರುಗಿದರೆ ಶಿವನು ಸ್ತ್ರೀಗೆ ವಶನಾಗಿರುವನು ಎಂದು ಲೋಕದಲ್ಲಿ ಅಪಖ್ಯಾತಿಯು ಬರುವುದು ಇದು ನಿಶ್ಚಯವು.

೫೯-೬೦. ಮಾಡಿದುದಕ್ಕೆ ಪ್ರತಿಮಾಡಬೇಕೆಂದು ನೀತಿಯು ಇರುವುದು. ನೀವೆಲ್ಲರೂ ಯುದ್ಧವಿಶಾರದರೆಂದು ಲೋಕಪ್ರಸಿದ್ಧವಾಗಿರುವುದು ಅವಾನದರೋ

ಭವಂತಶ್ಚ ಗಣಾಲೋಕೇ ಯುದ್ಧೇ ಚಾತಿವಿಶಾರದಾಃ ।
ಮದೀಯಾಶ್ಚ ಕಥಂ ಯುದ್ಧಂ ಹಿತ್ವಾ ಯಾಸ್ಯಥ ಲಾಘವಂ ॥ ೬೦ ॥

ಸ್ತ್ರಿಯಾ ಗ್ರಹಃ ಕಥಂ ಕಾರ್ಯೋ ಪತ್ಯುರಗ್ರೇ ವಿಶೇಷತಃ ।
ಕೃತ್ವಾ ಸಾ ಗಿರಿಜಾ ತಸ್ಯ ನೂನಂ ಫಲಮವಾಪ್ಸ್ಯತಿ ॥ ೬೧ ॥

ತಸ್ಮಾತ್ಸರ್ವೇ ಚ ಮದ್ವೀರಾ ಶೃಣುತಾದರತೋ ವಚಃ ।
ಕರ್ತವ್ಯಂ ಸರ್ವಥಾ ಯುದ್ಧಂ ಭಾವಿ ಯತ್ತದ್ಭವಿಷ್ಯತಿ ॥ ೬೨ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ಶಂಕರೋ ಬ್ರಹ್ಮನ್ ನಾನಾಲೀಲಾವಿಶಾರದಃ ।
ವಿರರಾಮ ಮುನಿಶ್ರೇಷ್ಠ ದರ್ಶಯನ್ ಲೌಕಿಕೀಂ ಗತಿಂ ॥ ೬೩ ॥

ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಕುಮಾರಖಂಡೇ
ಗಣವಿವಾದವರ್ಣನಂ ನಾಮ ಚತುರ್ದಶೋಽಧ್ಯಾಯಃ

---

ಒಬ್ಬನೇ ಒಬ್ಬನು. ಅದರಲ್ಲಿಯೂ ಬಾಲಕನು. ಇಂತಹ ಶೂರರಾದ ನೀವು ಅವನೊಡನೆ ಯುದ್ಧಮಾಡದೆ ಹಿಂದಕ್ಕೆ ಬಂದಿರುವಿರಲ್ಲಾ? ಇದರಿಂದ ನಿಮಗೆ ನಿಂದೆಯುಂಟಾಗುವುದಿಲ್ಲವೇ?

೬೧-೬೨. ಆ ಬಾಲಕನನ್ನು ಪಾರ್ವತಿಯು ಸೃಷ್ಟಿಮಾಡಿರುವಳು. ಹೀಗಿರುವಲ್ಲಿ ಪತಿಯಾದ ನಾನು ಎದುರಿಗೆ ನಿಂತು ಸ್ತ್ರೀಯನ್ನು ಹೇಗೆ ತಾನೆ ಹಿಡಿಯುವುದು? ಈ ಕೆಲಸವೆಲ್ಲವೂ ಅವಳದೇ ಆದುದರಿಂದ ಅದರ ಫಲವನ್ನು ಜಾಗ್ರತೆಯಾಗಿ ಅನುಭವಿಸುವಳು. ಆದುದರಿಂದ ವೀರರಾದ ನೀವೆಲ್ಲರೂ ಯುದ್ಧವನ್ನು ಮಾಡಿಯೇ ಮಾಡಬೇಕು. ಮುಂದಾಗುವುದನ್ನು ನೋಡಿಕೊಳ್ಳೋಣ ಎಂದನು.

೬೩. ಬ್ರಹ್ಮನು ಹೇಳಿದನು:—ಎಲೈ ನಾರದನೇ, ನಾನಾಲೀಲಾವಿಶಾರದನಾದ ಶಂಕರನು ತನ್ನ ಗಣಗಳನ್ನು ಕುರಿತು ಲೋಕಾರೀತಿಯಾಗಿ ಮಾತನ್ನಾಡಿ ಸುಮ್ಮನಾದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿನ ರುದ್ರಸಂಹಿತೆಯ ಕುಮಾರಖಂಡದಲ್ಲಿ
ಗಣವಿವಾದವರ್ಣನವೆಂಬ ಹದಿನಾಲ್ಕನೆಯ ಅಧ್ಯಾಯವು
ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ರುದ್ರಸಂಹಿತಾಯಾಂ ಕುಮಾರಖಂಡೇ.

## ಪಂಚಾದಶೋಽಧ್ಯಾಯಃ

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ವಿಭುನಾ ತೇನ ನಿಶ್ಚಯಂ ಪರಮಂ ಗತಾಃ ।
ಸನ್ನದ್ಧಾಸ್ತು ತದಾ ತತ್ರ ಜಗ್ಮುಶ್ಚ ಶಿವಮಂದಿರಂ ॥ ೧ ॥

ಗಣೇಶೋಪಿ ತಥಾ ದೃಷ್ಟ್ವಾ ಹ್ಯಾಯಾಂತಾನ್ಗಣಸತ್ತಮಾನ್ ।
ಯುದ್ಧಾಟೋಪಂ ವಿಧಾಯೈವ ಸ್ಥಿತಾಂಶ್ಚೈವಾಬ್ರವೀದಿದಂ ॥ ೨ ॥

॥ ಗಣೇಶ ಉವಾಚ ॥

ಆಯಾಂತು ಗಣಪಾಸ್ಸರ್ವೇ ಶಿವಾಜ್ಞಾಪರಿಪಾಲಕಾಃ ।
ಅಹಮೇಕಶ್ಚ ಬಾಲಶ್ಚ ಶಿವಾಜ್ಞಾಪರಿಪಾಲಕಃ ॥ ೩ ॥

---

ಹದಿನೈದನೆಯ ಅಧ್ಯಾಯವು,

೧. ಬ್ರಹ್ಮನು ಹೇಳಿದನು ;—ಶಿವನು ಹೇಳಿದುದನ್ನು ಕೇಳಿ ಶಿವನ ಗಣಗಳೆಲ್ಲಾ ಯುದ್ಧಸನ್ನದ್ಧರಾಗಿ ಹೊರಟರು.

೨. ಶಿವಗಣಗಳು ಯುದ್ಧಸನ್ನದ್ಧರಾಗಿ ತನ್ನ ಕಡೆಗೆ ಬರುತ್ತಿರುವುದನ್ನು ಕಂಡು ಗಣಪತಿಯು ಅವರನ್ನು ಕುರಿತು ಹೇಳಿದನು.

೩-೪. ಗಣೇಶನು ಹೇಳಿದನು :—ಎಲೈ ಗಣಗಳೇ, ನೀವೆಲ್ಲರೂ ಶಿವನ ಅಪ್ಪಣೆಯನ್ನು ನಡೆಸಲು ಬಂದಿರುವಿರಿ. ನಾನು ಒಬ್ಬನೇ, ಅದರಲ್ಲೂ ಬಾಲಕನು. ನಾನೂ

ತಥಾಪಿ ಪಶ್ಯತಾಂ ದೇವೀ ಪಾರ್ವತೀಸೂನುಜಂ ಬಲಂ ।
ಶಿವಶ್ಚ ಸ್ವಗಣಾನಾಂ ತು ಬಲಂ ಪಶ್ಯತು ವೈ ಪುನಃ ॥ ೪ ॥

ಬಲವದ್ಬಾಲಯುದ್ಧಂ ಚ ಭವಾನೀಶಿವಪಕ್ಷಯೋಃ ।
ಬವದ್ಭಿಶ್ಚ ಕೃತಂ ಯುದ್ಧಂ ಪೂರ್ವಂ ಯುದ್ಧವಿಶಾರದೈಃ ॥ ೫ ॥

ಮಯಾ ಪೂರ್ವಂ ಕೃತಂ ನೈವ ಬಾಲೋಽಸ್ಮಿ ಕ್ರಿಯತೇಽಧುನಾ ।
ತಥಾಪಿ ಭವತಾಂ ಲಜ್ಜಾ ಗಿರಿಜಾಶಿವಯೋರಿಹ ॥ ೬ ॥

ಮಮೈವಂ ತು ಭವೇನ್ನೈವ ವೈಪರಿತ್ಯಂ ಭವಿಷ್ಯತಿ ।
ಮಮೈವ ಭವತಾಂ ಲಜ್ಜಾ ಗಿರಿಜಾಶಿವಯೋರಿಹ ॥ ೭ ॥

ಏವಂ ಜ್ಞಾತ್ವಾ ಚ ಕರ್ತವ್ಯಃ ಸಮರಶ್ಚ ಗಣೇಶ್ವರಾಃ ।
ಭವದ್ಭಿಸ್ಸ್ವಾಮಿನಂ ದೃಷ್ಟ್ವಾ ಮಯಾ ಚ ಮಾತರಂ ತದಾ ॥ ೮ ॥

---

ಪಾರ್ವತಿಯ ಅನುಜ್ಞೆಯಂತೆ ನಡೆಯುವೆನು. ಗಿರಿಜೆಯು ಪುತ್ರನಾದ ನನ್ನ ಬಲವನ್ನು ನೋಡಲಿ. ಶಿವನೂ ತನ್ನ ಗಣಗಳ ಬಲವನ್ನು ನೋಡಲಿ.

೫-೬. ಪಾರ್ವತೀ ಪಕ್ಷದಲ್ಲಿ ಬಾಲಕನಾದ ನಾನು ಒಬ್ಬನು ಮಾತ್ರ. ಶಿವನ ಪಕ್ಷದಲ್ಲಿ ಬಲಿಷ್ಠರಾದ ನೀವೆಲ್ಲರೂ ಇರುವಿರಿ. ಇಂತಹ ನಮ್ಮಿಬ್ಬರಿಗೂ ಯುದ್ಧವಾಗಬೇಕು. ನೀವಾದರೆ ಯುದ್ಧದಲ್ಲಿ ವಿಶಾರದರು. ಹಿಂದೆ ಎಷ್ಟೋ ಯುದ್ಧವನ್ನು ಮಾಡಿರುವಿರಿ. ನಾನೂ ಹಿಂದೆಂದೂ ಯುದ್ಧವಮಾಡಿಲ್ಲ. ಬಾಲಕನಾದರೂ ಈಗ ಯುದ್ಧಮಾಡುವೆನು. ಆದುದರಿಂದ ಪಾರ್ವತಿಪರಮೇಶ್ವರರ ಪಕ್ಷದಲ್ಲಿ ನಿಮಗೆ ನಾಚಿಕೆಯಾಗಬೇಕು

೭-೮. ನನಗೇನೂ ನಿಮ್ಮಂತೆ ವಿಪರೀತವು ಸಂಭವಿಸಲಾರದು. ನಿಮ್ಮಗಳಿಗೂ ಪಾರ್ವತಿಪರಮೇಶ್ವರರಿಗೂ ನಾಚಿಕೆ ಮಾತ್ರ ಉಂಟಾಗುವುದು. ಆದುದರಿಂದ ಎಲೈ ಗಣಗಳಿರಾ, ಈ ರೀತಿಯಾಗಿ ತಿಳಿದುಕೊಂಡು ನಿಮ್ಮ ಸ್ವಾಮಿಯಾದ ಶಿವನ ಪಕ್ಷವಾಗಿ ಯುದ್ಧಮಾಡಿರಿ. ನಾನು ನನ್ನ ತಾಯಿಯಾದ ಭವಾನಿಯ ಪಕ್ಷವಾಗಿ ಯುದ್ಧಮಾಡುವೆನು.

ಕ್ರಿಯತೇ ಕೀದೃಶಂ ಯುದ್ಧಂ ಭವಿತವ್ಯಂ ಭವತ್ವಿತಿ ।
ತಸ್ಯ ವೈ ವಾರಣೇ ಕೋಽಪಿ ನ ಸಮರ್ಥಸ್ತ್ರಿಲೋಕಕೇ ॥ ೯ ॥

॥ ಬ್ರಹ್ಮೋವಾಚ ॥

ಇತ್ಯೇವಂ ಭರ್ತ್ಸಿತಾಸ್ತೇ ತು ದಂಡಭೂಷಿತಬಾಹವಃ ।
ವಿವಿಧಾನ್ಯಾಯುಧಾನ್ಯೇವಂ ಧೃತ್ವಾ ತೇ ಚ ಸಮಾಯಯುಃ ॥ ೧೦ ॥

ಘರ್ಷಯಂತಸ್ತಥಾ ದಂತಾನ್ ಹುಂಕೃತ್ಯ ಚ ಪುನಃ ಪುನಃ ।
ಪಶ್ಯ ಪಶ್ಯ ಬ್ರುವಂತಶ್ಚ ಗಣಾಸ್ತೇ ಸಮುಪಾಗತಾಃ ॥ ೧೧ ॥

ನಂದೀ ಪ್ರಥಮಮಾಗತ್ಯ ಧೃತ್ವಾ ಪಾದಂ ವ್ಯಕರ್ಷಯನ್ ।
ಧಾವನ್ ಭೃಂಗೀ ದ್ವಿತೀಯಂ ಚ ಪಾದಂ ಧೃತ್ವಾ ಗಣಸ್ಯ ಚ ॥ ೧೨ ॥

ಯಾವತ್ಪಾದೇ ವಿಕರ್ಷಂತೌ ತಾವದ್ಧಸ್ತೇನ ವೈ ಗಣಃ ।
ಆಹತ್ಯ ಹಸ್ತಯೋಸ್ತಾಭ್ಯಾಮುತ್ಕ್ಷಿಪ್ತೌ ಪಾದಕೌ ಸ್ವಯಂ ॥ ೧೩ ॥

---

೯. ಎಂತಹ ಯುದ್ಧವು ನಡೆಯುವುದೋ ನಡೆಯಲಿ, ಆಗುವುದು ಆಗಿಯೇ ತೀರಬೇಕಷ್ಟೆ? ಈ ಯುದ್ಧವನ್ನು ನಿಲ್ಲಿಸಲು ಮೂರು ಲೋಕದಲ್ಲಿ ಯಾರೂ ಸಮರ್ಥರಿಲ್ಲ ಎಂದನು.

೧೦. ಬ್ರಹ್ಮನು ಹೇಳಿದನು ;—ಗಣಪತಿಯು ಈ ರೀತಿಯಾಗಿ ನಿಂದಿಸಲು ಶಿವಗಣಗಳು ಅನೇಕ ಆಯುಧಗಳನ್ನು ತೆಗೆದುಕೊಂಡು ಯುದ್ಧಸನ್ನದ್ಧರಾಗಿ ಬಂದರು.

೧೧-೧೨. ಹಲ್ಲುಗಳನ್ನು ಕಡಿಯುತ್ತಾ ಹುಂಕಾರವನ್ನು ಮಾಡುತ್ತಾ, ಅಲ್ಲಿ ನೋಡು ಅಲ್ಲಿ ನೋಡು ಎಂದು ಹೇಳುತ್ತಾ ಗಣಪತಿಯ ಹತ್ತಿರಕ್ಕೆ ಬಂದರು. ಅವರಲ್ಲಿ ನಂದಿಯು ಮೊದಲು ಬಂದು ಆ ಗಣಪತಿಯ ಒಂದು ಕಾಲನ್ನು ಹಿಡಿದೆಳೆದನು. ಭೃಂಗಿಯು ಓಡಿಬಂದು ಗಣಪತಿಯ ಮತ್ತೊಂದು ಪಾದವನ್ನು ಹಿಡಿದೆಳೆದನು.

೧೩. ಅವರಿಬ್ಬರೂ ಗಣಪತಿಯ ಕಾಲನ್ನು ಹಿಡಿದೆಳೆಯುತ್ತಿರಲು ಆ ಗಣಪತಿಯು ಎರಡು ಕೈಗಳಿಂದಲೂ ಅವರಿಬ್ಬರನ್ನು ಬಲವಾಗಿ ತಳ್ಳಿದನು. ಅದರಿಂದ ಅವರುತಾವೇ ಕಾಲನ್ನು ಬಿಡಬೇಕಾಯಿತು.

ಅಥ ದೇವೀಸುತೋ ವೀರಸ್ಸಂಗೃಹ್ಯ ಪರಿಘಂ ಬೃಹತ್ ।
ದ್ವಾರಿಸ್ಥಿತೋ ಗಣಪಃ ಸರ್ವಾನಾಪೋಥಯತ್ತದಾ ॥ ೧೪ ॥

ಕೇಷಾಂಚಿತ್ಪಾಣಯೋ ಭಿನ್ನಾಃ ಕೇಷಾಂಚಿತ್ಪೃಷ್ಠಕಾನಿ ಚ ।
ಕೇಷಾಂಚಿಚ್ಚ ಶಿರಾಂಸ್ಯೇವ ಕೇಷಾಂಚಿನ್ಮಸ್ತಕಾನಿ ಚ ॥ ೧೫ ॥

ಕೇಷಾಂಚಿಜ್ಜಾನುನೀ ತತ್ರ ಕೇಷಾಂಚಿತ್ಸ್ಕಂಧಕಾಸ್ತಥಾ ।
ಸಮ್ಮುಖೇ ಚಾಗತಾ ಯೇ ವೈ ತೇ ಸರ್ವೇ ಹೃದಯೇ ಹತಾಃ ॥ ೧೬ ॥

ಕೇಚಿಚ್ಚ ಪತಿತಾ ಭೂಮೌ ಕೇಚಿಚ್ಚ ವಿದಿಶೋ ಗತಾಃ ।
ಕೇಷಾಂಚಿಚ್ಚರಣೌ ಭಿನ್ನೌ ಕೇಚಿಚ್ಛರ್ವಾಂತಿಕಂ ಗತಾಃ ॥ ೧೭ ॥

ತೇಷಾಂ ಮಧ್ಯೇ ತು ಕಶ್ಚಿದ್ವೈ ಸಂಗ್ರಾಮೇ ಸಮ್ಮುಖೋ ನ ಹಿ ।
ಸಿಂಹಂ ದೃಷ್ಟ್ವಾ ಯಥಾ ಯಾಂತಿ ಮೃಗಾಶ್ಚೈವ ದಿಶೋ ದಶ ॥ ೧೮ ॥

ತಥಾ ತೇ ಚ ಗಣಾಸ್ಸರ್ವೇ ಗತಾಶ್ಚೈವ ಸಹಸ್ರಶಃ ।
ಪರಾವೃತ್ಯ ತಥಾ ಸೋಽಪಿ ಸುದ್ವಾರಿ ಸಮುಪಸ್ಥಿತಃ ॥ ೧೯ ॥

---

೧೪-೧೬. ಬಳಿಕ ವೀರನಾದ ಗಣಪತಿಯು ಪರಿಘಾಯುಧವನ್ನು ಹಿಡಿದುಕೊಂಡು ಬಾಗಿಲಿನಲ್ಲಿ ನಿಂತುಕೊಂಡೇ ಅದನ್ನು ಎಸೆದನು. ಅದರ ಏಟಿನಿಂದ ಕೆಲವರ ಕೈಗಳು ಮುರಿದುಹೋದವು. ಕೆಲವರ ಬೆನ್ನುಗಳು ಮುರಿದವು. ಕೆಲವರ ತಲೆಗಳು ಉರುಳಿದವು. ಕೆಲವರ ಹಣೆಗಳು ಚೂರಾದವು. ಕೆಲವರ ಮಂಡಿಗಳೂ ಕೆಲವರ ಬಾಹುಗಳೂ ಚೂರುಚೂರಾದವು. ಗಣಪತಿಯ ಎದುರಿಗೆ ನುಗ್ಗಿ ಯಾವನು ಮುಂದೆ ಬರುತ್ತಿದ್ದನೋ ಅವನ ಹೃದಯಕ್ಕೆ ಏಟುಬಿದ್ದು ಸಾಯುತ್ತಿದ್ದನು.

೧೭-೧೮. ಕೆಲವರು ಭೂಮಿಯಮೇಲೆ ಬಿದ್ದರು. ಕೆಲವರು ದಿಕ್ಕೆಟ್ಟು ಓಡಿದರು. ಮತ್ತೆ ಕೆಲವರ ಕಾಲುಗಳು ಕತ್ತರಿಸಿಬಿದ್ದವು. ಕೆಲವರು ಹೆದರಿಕೊಂಡು ಶಿವನ ಹತ್ತಿರಕ್ಕೆ ಓಡಿಹೋದರು. ಅವರೊಳಗೆ ಯಾರೂ ಗಣಪತಿಯನ್ನು ಎದುರಿಸಿ ಧೈರ್ಯವಾಗಿ ನಿಲ್ಲಲಿಲ್ಲ. ಜಿಂಕೆಗಳು ಸಿಂಹವನ್ನು ನೋಡಿ ಓಡುವಂತೆ ಅವರೆಲ್ಲರೂ ದಿಕ್ಕುದಿಕ್ಕುಗಳಿಗೆ ಓಡಿಹೋದರು.

೧೯-೨೦. ಸಹಸ್ರ ಸಂಖ್ಯಾತರಾವ ಅವರೆಲ್ಲರೂ ಹಿಮ್ಮೆಟ್ಟಿ ಓಡಿಹೋದರು.

ಕಲ್ಪಾಂತಕರಣೇ ಕಾಲೇ ದೃಶ್ಯತೇ ಚ ಭಯಂಕರಃ ।
ಯಥಾ ತಥೈವ ದೃಷ್ಟಸ್ಸ ಸರ್ವೇಷಾಂ ಪ್ರಲಯಂಕರಃ ॥ ೨೦ ॥

ಏತಸ್ಮಿನ್ಸಮಯೇ ಚೈವ ಪರಮೇಶಸುರೇಶ್ವರಾಃ ।
ಪ್ರೇರಿತಾ ನಾರದೇನೇಹ ದೇವಾಸ್ಸರ್ವೇ ಸಮಾಗಮಂ ॥ ೨೧ ॥

ಸಮುಬ್ರುವಂಸ್ತದಾ ಸರ್ವೇ ಶಿವಸ್ಯ ಹಿತಕಾಮ್ಯಯಾ ।
ಪುರಃ ಸ್ಥಿತ್ವಾ ಶಿವಂ ನತ್ವಾ ಹ್ಯಾಜ್ಞಾಂ ದೇಹಿ ಪ್ರಭೋ ಇತಿ ॥ ೨೨ ॥

ತ್ವಂ ಪರಬ್ರಹ್ಮ ಸರ್ವೇಶಸ್ಸರ್ವೇ ಚ ತವ ಸೇವಕಾಃ ।
ಸೃಷ್ಟೇಃ ಕರ್ತಾ ಸದಾ ಭರ್ತಾ ಸಂಹರ್ತಾ ಪರಮೇಶ್ವರಃ ॥ ೨೩ ॥

ರಜಸ್ಸತ್ವತಮೋರೂಪೋ ಲೀಲಯಾ ನಿರ್ಗುಣಃ ಸ್ವತಃ ।
ಕಾ ಲೀಲಾ ರಚಿತಾ ಚಾದ್ಯ ತಾಮಿದಾನೀಂ ವದ ಪ್ರಭೋ ॥ ೨೪ ॥

---

ಗಣಪತಿಯು ಮಾತ್ರ ಬಾಗಿಲಿನಲ್ಲಿ ನಿಂತೇ ಇದ್ದನು. ಆ ಸಮಯದಲ್ಲಿ ಅವನು ಪ್ರಳಯ ಕಾಲದ ಕಾಲಪುರುಷನಂತೆ ಭಯಂಕರನಾಗಿ ಕಾಣಿಸುತ್ತಿದ್ದನು.

೨೧-೨೨. ಈ ಕಾಲಕ್ಕೆ ಸರಿಯಾಗಿ ವಿಷ್ಣುವೇ ಮೊದಲಾದ ದೇವತೆಗಳು ನಾರದನಿಂದ ಈ ವಿಷಯವವನ್ನು ತಿಳಿದು ಎಲ್ಲರೂ ಶಿವನ ಸಮೀಪಕ್ಕೆ ಬಂದರು. ಆ ಮೇಲೆ ಶಿವನ ಎದುರಿಗೆ ನಿಂತು ಅವನನ್ನು ನಮಸ್ಕರಿಸಿ ಅವನಿಗೆ ಹಿತವನ್ನುಂಟು ಮಾಡುವ ದೃಷ್ಟಿಯಿಂದ ನಮಗೆ ಅಪ್ಪಣೆಯನ್ನು ದಯಪಾಲಿಸು ಎಂಬುದಾಗಿ ಬೇಡಿ ಕೊಂಡರು.

೨೩-೨೪. ಎಲೈ ಸ್ವಾಮಿಯೇ, ನೀನು ಸಾಕ್ಷಾತ್ ಪರಬ್ರಹ್ಮನು. ಸರ್ವರಿಗೂ ಪ್ರಭುವು. ಎಲ್ಲರೂ ನಿನ್ನ ಸೇವಕರು. ಪ್ರಪಂಚದ ಸೃಷ್ಟಿಕರ್ತನು. ಅದನ್ನು ರಕ್ಷಿಸು ವವನು. ಅದನ್ನು ಸಂಹರಿಸುವವನು. ಸತ್ತ್ವರಜಸ್ತಮೋ ಗುಣಸ್ವರೂಪನಾದರೂ ನಿರ್ಗುಣನು. ಈಗ ನೀನು ರಚಿಸಿರುವ ಲೀಲೆಯಾವುದು ? ಅದನ್ನು ನಮಗೆ ತಿಳಿಸು ಎಂದರು.

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ವಚಸ್ತೇಷಾಂ ಮುನಿಶ್ರೇಷ್ಠ ಮಹೇಶ್ವರಃ ।
ಗಣಾನ್ ಭಿನ್ನಾಂಸ್ತದಾ ದೃಷ್ಟ್ವಾ ತೇಭ್ಯಸ್ಸರ್ವಂ ನ್ಯವೇದಯತ್ ॥ ೨೫ ॥

ಅಥ ಸರ್ವೇಶ್ವರಸ್ತತ್ರ ಶಂಕರೋ ಮುನಿಸತ್ತಮ ।
ವಿಹಸ್ಯ ಗಿರಿಜಾನಾಥೋ ಬ್ರಹ್ಮಾಣಂ ಮಾಮುವಾಚ ಹ ॥ ೨೬ ॥

॥ ಶಿವ ಉವಾಚ ॥

ಬ್ರಹ್ಮನ್ ಶೃಣು ಮಮ ದ್ವಾರಿ ಬಾಲ ಏಕಸ್ಸಮಾಸ್ಥಿತಃ ।
ಮಹಾಬಲೋ ಯಷ್ಟಿಪಾಣಿರ್ಗೇಹಾವೇಶನಿವಾರಕಃ ॥ ೨೭ ॥

ಮಹಾಪ್ರಹಾರಕರ್ತಾsಸೌ ಮತ್ಪಾರ್ಷದವಿಘಾತಕಃ ।
ಪರಾಜಯಂ ಕೃತಸ್ತೇನ ಮದ್ಗಣಾನಾಂ ಬಲಾದಿಹ ॥ ೨೮ ॥

ಬ್ರಹ್ಮನ್ ತ್ವಯೈವ ಗಂತವ್ಯಂ ಪ್ರಸಾದ್ಯೋsಯಂ ಮಹಾಬಲಃ ।
ಯಥಾ ಬ್ರಹ್ಮನ್ನಯಃ ಸ್ಯಾತ್ತೈ ತಥಾ ಕಾರ್ಯಂ ತ್ವಯಾ ವಿಧೇ ॥ ೨೯ ॥

---

೨೫. ಬ್ರಹ್ಮನು ಹೇಳಿದನು.—ಮಹೇಶ್ವರನು ದೇವತೆಗಳಾಡಿದ ಮಾತುಗಳನ್ನು ಕೇಳಿ ತನ್ನ ಗಣಗಳೆಲ್ಲವೂ ಹಿಂತಿರುಗಿ ಬರುತ್ತಿರುವುದನ್ನೂ ನೋಡಿ, ಅದರ ವಿಷಯವನ್ನೆಲ್ಲಾ ದೇವತೆಗಳಿಗೆ ತಿಳಿಸಿದನು.

೨೬. ಎಲೈ ಮುನಿವರನೇ, ಗಿರಿಜಾಪತಿಯಾದ ಶಂಕರನು ನಗುತ್ತಾ ಬ್ರಹ್ಮನಾದ ನನ್ನನ್ನುದ್ದೇಶಿಸಿ ಹೀಗೆ ಹೇಳಿದನು.

೨೭-೨೮. ಶಿವನು ಹೇಳಿದನು.—ಎಲೈ ಬ್ರಹ್ಮನೇ, ಪಾರ್ವತಿಯ ಮನೆಯ ಬಾಗಿಲಿನಲ್ಲಿ ಒಬ್ಬ ಹುಡುಗನಿರುವನು. ಅವನು ಕೈಯಲ್ಲಿ ಕೋಲನ್ನು ಹಿಡಿದು ಒಳಕ್ಕೆ ಯಾರನ್ನೂ ಬಿಡದೆ ತಡೆಯುತ್ತಿರುವನು. ನನ್ನ ಗಣಗಳಿಗೆಲ್ಲಾ ಸೋಲು ಉಂಟಾಗಿರುವುದು.

೨೯. ಆದುದರಿಂದ ನೀನು ಆ ಹುಡುಗನಲ್ಲಿಗೆ ಹೋಗಿ ಬಲಶಾಲಿಯಾದ ಆ ಹುಡುಗನನ್ನು ಸಮಾಧಾನಪಡಿಸು ಎಂದನು.

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ಪ್ರಭೋರ್ವಾಕ್ಯಮಜ್ಞಾತ್ವಾ ಜ್ಞಾನಮೋಹಿತಃ ।
ತದೀಯನಿಕಟಂ ತಾತ ಸರ್ವೈರ್ಋಷಿವರೈರಯಾಂ ॥ ೩೦ ॥

ಸಮಾಯಾಂತಂ ಚ ಮಾಂ ದೃಷ್ಟ್ವಾ ಸ ಗಣೇಶೋ ಮಹಾಬಲೀ ।
ಕ್ರೋಧಂ ಕೃತ್ವಾ ಸಮಭ್ಯೇತ್ಯ ಮಮಾಶ್ಮಶ್ರೂಣ್ಯವಾಕಿರತ್ ॥ ೩೧ ॥

ಕ್ಷಮ್ಯತಾಂ ಕ್ಷಮ್ಯತಾಂ ದೇವ ನ ಯುದ್ಧಾರ್ಥಂ ಸಮಾಗತಃ ।
ಬ್ರಾಹ್ಮಣೋಽಹಮನುಗ್ರಾಹ್ಯಃ ಶಾಂತಿಕರ್ತಾನುಪದ್ರವಃ ॥ ೩೨ ॥

ಇತ್ಯೇವಂ ಬ್ರುವತಿ ಬ್ರಹ್ಮನ್ ತಾವತ್ಪರಿಘಮಾದದೇ ।
ಸ ಗಣೇಶೋ ಮಹಾವೀರೋ ಬಾಲೋಽಬಾಲಪರಾಕ್ರಮಃ ॥ ೩೩ ॥

ಗೃಹೀತಪರಿಘಂ ದೃಷ್ಟ್ವಾ ತಂ ಗಣೇಶಂ ಮಹಾಬಲಂ ।
ಪಲಾಯನಪರೋ ಯಾತಸ್ತ್ವಹಂ ದ್ರುತತರಂ ತದಾ ॥ ೩೪ ॥

---

೩೦. ಬ್ರಹ್ಮನು ಹೇಳಿದನು :—ಸ್ವಾಮಿಯಾದ ಶಂಕರನ ಮಾತಿನ ಅಭಿಪ್ರಾಯವನ್ನು ಸರಿಯಾಗಿ ತಿಳಿದುಕೊಳ್ಳದೆ ಅಜ್ಞಾನದಿಂದ ಮೋಹಿತನಾಗಿ ಋಷಿಗಳೆಲ್ಲರನ್ನೂ ಕರೆದುಕೊಂಡು ಗಣಪತಿಯ ಸಮೀಪಕ್ಕೆ ಹೋದೆನು.

೩೧. ನಾನು ಬರುತ್ತಿರುವುದನ್ನು ನೋಡಿದ ಕೂಡಲೇ ಆ ಗಣೇಶನು ಅತ್ಯಂತ ಕೋಪಗೊಂಡು ನನ್ನ ಹತ್ತಿರಕ್ಕೆ ಬಂದು ನನ್ನ ಮೀಸೆಯನ್ನು ಹಿಡಿದೆಳೆದನು.

೩೨-೩೩. ಆಗ ಓ ದೇವನೇ ಕ್ಷಮಿಸು, ನಾನು ಯುದ್ಧಮಾಡಲು ಬಂದವನಲ್ಲ. ನಾನು ಬ್ರಾಹ್ಮಣನು. ಯಾರಿಗೂ ತೊಂದರೆ ಕೊಡುವವನಲ್ಲ. ಶಾಂತಿಸ್ವಭಾವದಿಂದ ಇರುವವನು. ಆದುದರಿಂದ ನನ್ನಲ್ಲಿ ಅನುಗ್ರಹವನ್ನು ತೋರು ಎಂದು ಹೇಳುತ್ತಿದ್ದರೂ ಗಣಪತಿಯು ಪರಿಘಾಯುಧವನ್ನು ತೆಗೆದುಕೊಂಡನು. ಅವನು ಬಾಲಕನಾದರೂ ವೀರರಂತೆ ಪರಾಕ್ರಮಶಾಲಿಯು.

೩೪-೩೬. ಗಣಪತಿಯು ಪರಿಘಾಯುಧವನ್ನು ತೆಗೆದುಕೊಂಡಕ್ಷಣವೇ ಎಲ್ಲರೂ ಜಾಗ್ರತೆಯಾಗಿ ಓಡಿಹೋದರು. ನಾನೂ ಓಡಿದೆನು. ಪರಿಘಾಯುಧದಿಂದ

ಯಾತ ಯಾತ ಬ್ರುವಂತಸ್ತೇ ಪರಿಘೇನ ಹತಾಸ್ತದಾ ।
ಸ್ವಯಂ ಚ ಪಾತಿತಾಃ ಕೇಚಿತ್ಕೇಚಿತ್ತೇನ ನಿಪಾತಿತಾಃ ॥ ೩೫ ॥

ಕೇಚಿಚ್ಚ ಶಿವಸಾಮೀಪ್ಯಂ ಗತ್ವಾ ತತ್‌ಕ್ಷಣಮಾತ್ರತಃ ।
ಶಿವಂ ವಿಜ್ಞಾಪಯಾಂಚಕ್ರುಸ್ತದ್ವೃತ್ತಾಂತಮಶೇಷತಃ ॥ ೩೬ ॥

ತಥಾ ವಿಧಾಂಶ್ಚ ತಾನ್ ದೃಷ್ಟ್ವಾ ತದ್ವೃತ್ತಾಂತಂ ನಿಶಮ್ಯ ಸಃ ।
ಅಪಾರಮಾದಧೇ ಕೋಪಂ ಹರೋ ಲೀಲಾವಿಶಾರದಃ ॥ ೩೭ ॥

ಇಂದ್ರಾದಿಕಾನ್ ದೇವಗಣಾನ್ ಷಣ್ಮುಖಪ್ರವರಾನ್ ಗಣಾನ್ ।
ಭೂತಪ್ರೇಪಪಿಶಾಚಾಂಶ್ಚ ಸರ್ವಾನಾದೇಶಯತ್ತದಾ ॥ ೩೮ ॥

ತೇ ಸರ್ವೇ ಚ ಯಥಾಯೋಗ್ಯಂ ಗತಾಸ್ತೇ ಸರ್ವತೋ ದಿಶಂ ।
ತಂ ಗಣಂ ಹಂತುಕಾಮಾ ಹಿ ಶಿವಾಜ್ಞಾತಾ ಉದಾಯುಧಾಃ ॥ ೩೯ ॥

ಯಸ್ಯ ಯಸ್ಯಾಯುಧಂ ಯಚ್ಚ ತತ್ತತ್ಸರ್ವಂ ವಿಶೇಷತಃ ।
ತದ್ಗಣೇಶೋಪರಿ ಬಲಾತ್ಸಮಾಗತ್ಯ ನಿಮೋಚಿತಂ ॥ ೪೦ ॥

---

ಏಟುತಿಂದು ತತ್ತಳಿಸುತ್ತಾ ಓಡಿರಿ, ಓಡಿಹೋಗಿ ಜೀವವನ್ನುಳಿಸಿಕೊಳ್ಳಿ ಎಂದು ಒಬ್ಬರಿಗೊಬ್ಬರು ಹೇಳುತ್ತಾ ಓಡಿಹೋಗುತ್ತಿದ್ದರು. ಆ ನೂಕುನುಗ್ಗಲಿನಲ್ಲಿ ಒಬ್ಬರ ಮೇಲೊಬ್ಬರು ಬೀಳುತ್ತಿದ್ದರು. ಕೆಲವರು ಗಣಪತಿಯ ಏಟನಿಂದ ಬಿದ್ದರು: ನಾನೂ ಬಿದ್ದೆನು. ಕೆಲವರು ಜಾಗ್ರತೆಯಾಗಿ ಶಿವನ ಸಮೀಪಕ್ಕೆ ಓಡಿ ಬಂದು ಅಲ್ಲಿ ನಡೆದುದನ್ನೆಲ್ಲವನ್ನೂ ಅರಿಕೆಮಾಡಿದರು.

೩೭-೩೮. ದೇವತೆಗಳೆಲ್ಲರೂ ಓಡಿಬಂದುದನ್ನೂ ಅಲ್ಲಿ ನಡೆದುದನ್ನೂ ಕೇಳಿ ಲೀಲಾವಿಶಾರದನಾದ ಆ ಶಂಕರನು ಅತಿಕೋಪಗೊಂಡನು. ಆ ಮೇಲೆ ಇಂದ್ರನೇ ಮೊದಲಾದ ದೇವಗಣಗಳನ್ನೂ, ಷಣ್ಮುಖನೇ ಮುಂತಾದ ಪ್ರಮಥಗಳನ್ನೂ, ಭೂತ, ಪ್ರೇತ, ಪಿಶಾಚಗಳನ್ನೂ ಸಹ ಆ ಬಾಲಕನ ಹತ್ತಿರಕ್ಕೆ ಹೋಗಬೇಕೆಂದು ಅಪ್ಪಣೆ ಮಾಡಿದನು.

೩೯-೪೦. ಶಿವನ ಅಪ್ಪಣೆಯಂತೆ ಆ ಗಣಪತಿಯನ್ನು ಕೊಲ್ಲಲು ಎಲ್ಲರೂ ಅವನೆಡೆಗೆ ಹೊರಟರು. ತಮತಮಗೆ ಬೇಕಾದ ಆಯುಧಗಳನ್ನು ತೆಗೆದುಕೊಂಡು ಆ ಗಣಪತಿಗೆ ಬಲವಾಗಿ ಹೊಡೆಯುತ್ತಿದ್ದರು.

ಹಾಹಾಕಾರೋ ಮಹಾನಾಸೀತ್ತ್ರೈಲೋಕ್ಯೇ ಸಚರಾಚರೇ ।
ತ್ರಿಲೋಕಸ್ಥಾ ಜನಾಸ್ಸರ್ವೇ ಸಂಶಯಂ ಪರಮಂ ಗತಾಃ ॥ ೪೧ ॥

ನ ಯಾತಂ ಬ್ರಹ್ಮಣೋsಪ್ಯಾಯುರ್ಬ್ರಹ್ಮಾಂಡಂ ಕ್ಷಯಮೇತಿ ಹಿ ।
ಅಕಾಲೇ ಚ ತಥಾ ನೂನಂ ಶಿವೇಚ್ಛಾವಶತಃ ಸ್ವಯಂ ॥ ೪೨ ॥

ತೇ ಸರ್ವೇ ಚ ಗತಾಸ್ತತ್ರ ಷಣ್ಮುಖಾದ್ಯಾಶ್ಚ ಯೇ ಪುನಃ ।
ದೇವಾ ವ್ಯರ್ಥಾಯುಧಾ ಜಾತಾ ಆಶ್ಚರ್ಯಂ ಪರಮಂ ಗತಾಃ ॥ ೪೩ ॥

ಏತಸ್ಮಿನ್ನಂತರೇ ದೇವೀ ಜಗದಂಬಾ ವಿಬೋಧನಾ ।
ಜ್ಞಾತ್ವಾ ತಚ್ಚರಿತಂ ಸರ್ವಮಪಾರಂ ಕ್ರೋಧಮಾದಧೇ ॥ ೪೪ ॥

ಶಕ್ತಿದ್ವಯಂ ತದಾ ತತ್ರ ತಯಾ ದೇವ್ಯಾ ಮುನೀಶ್ವರ ।
ನಿರ್ಮಿತಂ ಸ್ವಗಣಸ್ಯೈವ ಸರ್ವಸಾಹಾಯ್ಯಹೇತವೇ ॥ ೪೫ ॥

---

೪೧. ಈರೀತಿ ಯುದ್ಧಮಾಡುತ್ತಿರಲು ಚರಾಚರಾತ್ಮಕವಾದ ಮೂರು ಲೋಕವಲ್ಲಿಯೂ ಹಾಹಾಕಾರವೆದ್ದಿತು. ಮೂರು ಲೋಕದ ಜನರು ಬಹಳ ಕಳವಳಗೊಂಡರು.

೪೨. ಬ್ರಹ್ಮನ ಆಯಸ್ಸಿನ್ನೂ ಮುಗಿದಿರಲಿಲ್ಲವಲ್ಲಾ ? ಕಾಲವಲ್ಲದ ಕಾಲದಲ್ಲಿ ಶಿವನ ಇಚ್ಛೆಯಂತೆ ಬ್ರಹ್ಮಾಂಡವು ತನ್ನಷ್ಟಕ್ಕೆ ತಾನೇ ನಾಶಹೊಂದುವುದೇ ಹೇಗೆ ? ಎಂದು ಎಂದು ಸಂಶಯಪಡುತ್ತಿದ್ದರು.

೪೩. ಷಣ್ಮುಖನೇ ಮೊದಲಾದವರೆಲ್ಲರೂ ಗಣಪತಿಯೊಡನೆ ಯುದ್ಧಮಾಡಲು ಅವರ ಆಯುಧಗಳೆಲ್ಲವೂ ನಾಶವಾದವು. ಅದರಿಂದ ಎಲ್ಲರಿಗೂ ಆಶ್ಚರ್ಯವಾಯಿತು.

೪೪-೪೫. ಜಗನ್ಮಾತೆಯಾದ ಪಾರ್ವತಿಯು ಈ ವೃತ್ತಾಂತವೆಲ್ಲವನ್ನೂ ತಿಳಿದು ತುಂಬಾ ಕೋಪಗೊಂಡು ತನ್ನ ಗಣವಾದ ಗಣಪತಿಗೆ ಸಹಾಯಮಾಡಲು ಇಬ್ಬರು ಶಕ್ತಿದೇವತೆಯರನ್ನು ಸೃಷ್ಟಿಮಾಡಿದಳು.

ಏಕಾ ಪ್ರಚಂಡರೂಪಂ ಚ ಧೃತ್ವಾತಿಷ್ಠನ್ಮಹಾಮುನೇ ।
ಶ್ಯಾಮಪರ್ವತಸಂಕಾಶಂ ವಿಸ್ತೀರ್ಯ ಮುಖಗಹ್ವರಂ ॥ ೪೬ ॥

ಏಕಾ ವಿದ್ಯುತ್ಸ್ವರೂಪಾ ಚ ಬಹುಹಸ್ತಸಮನ್ವಿತಾ ।
ಭಯಂಕರಾ ಮಹಾದೇವೀ ದುಷ್ಟದಂಡವಿಧಾಯಿನೀ ॥ ೪೭ ॥

ಆಯುಧಾನಿ ಚ ಸರ್ವಾಣಿ ಮೋಚಿತಾನಿ ಸುರೈರ್ಗಣೈಃ ।
ಗೃಹೀತ್ವಾ ಸ್ವಮುಖೇ ತಾನಿ ತಾಭ್ಯಾಂ ಶೀಘ್ರಂ ಚ ಚಿಕ್ಷಿಪೇ ॥ ೪೮ ॥

ದೇವಾಯುಧಂ ನ ದೃಶ್ಯೇತ ಪರಿಘಃ ಪರಿತಃ ಪುನಃ ।
ಏವಂ ತಾಭ್ಯಾಂ ಕೃತಂ ತತ್ರ ಚರಿತಂ ಪರಮಾದ್ಭುತಂ ॥ ೪೯ ॥

ಏಕೋ ಬಾಲೋಽಖಿಲಂ ಸೈನ್ಯಂ ಲೋಡಯಾಮಾಸ ದುಸ್ತರಂ ।
ಯಥಾ ಗಿರಿವರೇಣೈವ ಲೋಡಿತಸ್ಸಾಗರಃ ಪುರಾ ॥ ೫೦ ॥

---

೪೬-೪೭. ಎಲೈ ಮುನಿವರನೇ, ಕೇಳು, ಅವರಲ್ಲಿ ಒಬ್ಬಳು ಭಯಂಕರವಾಗಿದ್ದಳು. ಕಪ್ಪಗೆ ಪರ್ವತದಂತೆ ಗಾತ್ರವಾಗಿದ್ದಳು. ಗುಹೆಯಂತಿರುವ ತನ್ನ ಬಾಯನ್ನು ತೆರೆದುಕೊಂಡಿದ್ದಳು. ಮತ್ತೊಬ್ಬಳು ಮಿಂಚಿನಂತೆ ಹೊಳೆಯುತ್ತಿರುವ ರೂಪವುಳ್ಳವಳು. ಅವಳಿಗೆ ಅನೇಕ ಕೈಗಳಿದ್ದುವು. ಭಯಂಕರವಾಗಿಯೂ ದುಷ್ಟರನ್ನು ಶಿಕ್ಷಿಸಲು ಸಮರ್ಥಳಾಗಿಯೂ ಇದ್ದಳು.

೪೮-೪೯. ದೇವತೆಗಳೆಲ್ಲರೂ ತಮ್ಮತಮ್ಮ ಆಯುಧಗಳನ್ನು ಪ್ರಯೋಗಿಸಲು ಆ ಶಕ್ತಿದೇವತೆಯರು ಆ ಆಯುಧಗಳನ್ನು ತೆಗೆದುಕೊಂಡು ತಮ್ಮ ಬಾಯಿಯಲ್ಲಿ ಹಾಕಿಕೊಳ್ಳುತ್ತಿದ್ದರು. ದೇವತೆಗಳು ಪ್ರಯೋಗಿಸಿದ ಆಯುಧಗಳಾವುವೂ ಕಾಣದಂತಾದವು. ಆದರೆ ಗಣೇಶನ ಪರಿಘಾಯುಧವು ಮಾತ್ರ ಎಲ್ಲೆಲ್ಲೂ ಸುತ್ತುತಿದ್ದಿತು. ಈರೀತಿಯಾಗಿ ಆ ಇಬ್ಬರು ಶಕ್ತಿದೇವತೆಯರು ಅತ್ಯಾಶ್ಚರ್ಯಕರವಾದ ಕೆಲಸಗಳನ್ನು ನಡೆಸಿದರು.

೫೦. ಹಿಂದೆ ಮಂದರಪರ್ವತವು ಸಮುದ್ರವನ್ನು ಕಲಕಿದಂತೆ ಬಾಲಕನಾದರೂ, ಗಣಪತಿಯೊಬ್ಬನೇ ಸಮಸ್ತ ಸೈನ್ಯವನ್ನೂ ಅಲ್ಲೋಲಕಲ್ಲೋಲಮಾಡಿದನು.

ಏಕೇನ ನಿಹಿತಾಸ್ಸರ್ವೇ ಶಕ್ರಾದ್ಯಾ ನಿರ್ಜರಾಸ್ತಥಾ ।
ಶಂಕರಸ್ಯ ಗಣಾಶ್ಚೈವ ವ್ಯಾಕುಲಾ ಅಭವಂಸ್ತದಾ ॥ ೫೧ ॥

ಅಥ ಸರ್ವೇ ಮಿಲಿತ್ವಾ ತೇ ನಿಃಶ್ವಸ್ಯ ಚ ಮುಹುರ್ಮುಹುಃ ।
ಪರಸ್ಪರಂ ಸಮೂಚುಸ್ತೇ ತತ್ಪ್ರಹಾರಸಮಾಕುಲಾಃ ॥ ೫೨ ॥

॥ ದೇವಗಣಾ ಊಚುಃ ॥

ಕಿಂ ಕರ್ತವ್ಯಂ ಕ್ವ ಗಂತವ್ಯಂ ನ ಜ್ಞಾಯಂತ ದಿಶೋ ದಶ ।
ಪರಿಘಂ ಭ್ರಾಮಯತ್ಯೇಷ ಸವ್ಯಾಪಸವ್ಯಮೇವ ಚ ॥ ೫೩ ॥

॥ ಬ್ರಹ್ಮೋವಾಚ ॥

ಏತತ್ಕಾಲೇಽಪ್ಸರಸಃ ಶ್ರೇಷ್ಠಾ ಪುಷ್ಪಚಂದನಪಾಣಯಃ ।
ಋಷಯಶ್ಚ ತ್ವದಾದ್ಯಾ ಹಿ ಯೇಽತಿಯುದ್ಧೇಽತಿಲಾಲಸಾಃ ॥ ೫೪ ॥

ತೇ ಸರ್ವೇ ಚ ಸಮಾಜಗ್ಮುರ್ಯುದ್ಧಸಂದರ್ಶನಾಯ ವೈ ।
ಪೂರಿತೋ ವ್ಯೋಮಸನ್ಮಾರ್ಗಸ್ತೈಸ್ತದಾ ಮುನಿಸತ್ತಮ ॥ ೫೫ ॥

---

೫೧. ಇಂದ್ರಾದಿ ದೇವತೆಗಳೆಲ್ಲರೂ ಆ ಬಾಲಕನೊಬ್ಬನಿಂದಲೇ ಪರಾಜಿತರಾದರು. ಶಂಕರನ ಗಣಗಳೆಲ್ಲವೂ ಇದರಿಂದ ಬಹಳ ದುಃಖಪಟ್ಟರು.

೫೨. ಸೋತುಹೋದ ದೇವತೆಗಳೆಲ್ಲರೂ ಒಟ್ಟುಗೂಡಿ ಬಾರಿಬಾರಿಗೂ ನಿಟ್ಟುಸಿರುಬಿಡುತ್ತಾ ಗಣಪತಿಯ ಏಟಿನಿಂದ ದುಃಖಿತರಾಗಿ ಪರಸ್ಪರ ಮಾತನಾಡಿಕೊಂಡರು.

೫೩. ದೇವಗಣಗಳು ಹೇಳಿದರು :—ಈಗೇನು ಮಾಡೋಣ ? ಎಲ್ಲಿಗೆ ಹೋಗೋಣ ? ನಮಗೆ ದಿಕ್ಕೇ ತೋಚದಂತಾಗಿರುವುದು. ಅವನು ಎಡಬಲಗಳಲ್ಲಿ ಪರಿಘಾಯುಧವನ್ನು ತಿರುಗಿಸುತ್ತಾ ನಮ್ಮನ್ನು ಸೋಲಿಸಿರುವನು.

೫೪-೫೫. ಬ್ರಹ್ಮನು ಹೇಳಿದನು :—ಇದೇ ಸಮಯದಲ್ಲಿ ಶ್ರೇಷ್ಠರಾದ ಅಪ್ಸರೆಯರು ಪುಷ್ಪಚಂದನಾದಿ ಮಂಗಳದ್ರವ್ಯಗಳನ್ನು ಕೈಯಲ್ಲಿ ಹಿಡಿದು ಯುದ್ಧವನ್ನು ನೋಡಲು ಬಂದಿದ್ದರು. ಋಷಿಗಳೂ ಯುದ್ಧವನ್ನು ನೋಡುವ ಕುತೂಹಲದಿಂದ ಬಂದಿದ್ದರು. ಎಲ್ಲರೂ ಯುದ್ಧವನ್ನು ನೋಡಲು ಆಕಾಶಮಾರ್ಗವನ್ನು ಆವರಿಸಿ ನಿಂತರು.

ತಾಸ್ತೇ ದೃಷ್ಟ್ವಾ ರಣಂ ತಂ ವೈ ಮಹಾವಿಸ್ಮಯಮಾಗತಾಃ ।
ಈದೃಶಂ ಪರಮಂ ಯುದ್ಧಂ ನ ದೃಷ್ಟಂ ಚೈಕದಾಪಿ ಹಿ ॥ ೫೬ ॥

ಪೃಥಿವೀ ಕಂಪಿತಾ ತತ್ರ ಸಮುದ್ರಸಹಿತಾ ತದಾ ।
ಪರ್ವತಾಃ ಪತಿತಾಶ್ಚೈವ ಚಕ್ರುಸ್ಸಂಗ್ರಾಮಸಂಭವಂ ॥ ೫೭ ॥

ದ್ಯೌರ್ಗ್ರಹರ್ಕ್ಷಗಣೈರ್ಘೂರ್ಣಾ ಸರ್ವೇ ವ್ಯಾಕುಲತಾಂ ಗತಾಃ ।
ದೇವಾಃ ಪಾಲಯಿತಾಸ್ಸರ್ವೇ ಗಣಾಶ್ಚ ಸಕಲಾಸ್ತದಾ ॥ ೫೮ ॥

ಕೇವಲಂ ಷಣ್ಮುಖಸ್ತತ್ರ ನಾಪಲಾಯತ ವಿಕ್ರಮೀ ।
ಮಹಾವೀರಸ್ತದಾ ಸರ್ವಾನಾವಾರ್ಯ ಪುರತಃ ಸ್ಥಿತಃ ॥ ೫೯ ॥

ಶಕ್ತಿದ್ವಯೇನ ತದ್ಯುದ್ಧೇ ಸರ್ವೇ ಚ ನಿಷ್ಫಲೀಕೃತಾಃ ।
ಸರ್ವಾಸ್ತ್ರಾಣಿ ನಿಕೃತ್ತಾನಿ ಸಂಕ್ಷಿಪ್ತಾನ್ಯಮರೈರ್ಗಣೈಃ ॥ ೬೦ ॥

ಯೇsವಸ್ಥಿತಾಶ್ಚ ತೇ ಸರ್ವೇ ಶಿವಸ್ಯಾಂತಿಕಮಾಗತಾಃ ।
ದೇವಾಃ ಪಲಾಯಿತಾಸ್ಸರ್ವೇ ಗಣಾಶ್ಚ ಸಕಲಾಸ್ತದಾ ॥ ೬೧ ॥

---

೫೬. ಅವರೆಲ್ಲರೂ ಮಹಾಶ್ಚರ್ಯವನ್ನುಂಟುಮಾಡುವ ಈ ಘೋರಯುದ್ಧವನ್ನು ಎಂದೂ ನೋಡಿರಲಿಲ್ಲ. ಇದನ್ನು ನೋಡಿ ಆಶ್ಚರ್ಯಪಟ್ಟರು.

೫೭-೫೮. ಭೂಮಿಯು ನಡುಗಿತು. ಸಮುದ್ರವು ಅಲ್ಲೋಲಕಲ್ಲೋಲವಾಯಿತು. ಪರ್ವತಗಳೆಲ್ಲವೂ ಉರುಳಿದುವು. ಆಕಾಶವೂ ಗ್ರಹಗಳೂ ನಕ್ಷತ್ರಗಳೂ ಗರಗರನೆ ತಿರುಗಿದವು. ದೇವತೆಗಳೂ ಗಣಗಳೂ ಎಲ್ಲರೂ ದುಃಖಗೊಂಡರು.

೫೯. ಮಹಾವೀರನಾದ ಷಣ್ಮುಖನು ಮಾತ್ರ ಆ ಯುದ್ಧದಲ್ಲಿ ಹಿಮ್ಮೆಟ್ಟದೆ ದೇವತೆಗಳನ್ನೆಲ್ಲಾ ಹಿಂದಿಟ್ಟುಕೊಂಡು ತಾನು ಧೈರ್ಯವಾಗಿ ಮುಂದೆ ನಿಂತಿದ್ದನು.

೬೦. ಪಾರ್ವತಿಯು ಸೃಷ್ಟಿಮಾಡಿದ ಆ ಶಕ್ತಿದೇವತೆಯರಿಬ್ಬರೂ ದೇವತೆಗಳ ಅಸ್ತ್ರಗಳನ್ನೆಲ್ಲಾ ನಾಶಮಾಡಿದರು. ಎಲ್ಲರೂ ನಿಷ್ಫಲರಾಗಿ ಯುದ್ಧಮಾಡಲಾಗದೆ ಹಿಂತಿರುಗಿದರು. ದೇವತೆಗಳ ಕಡೆಯವರು ಬರುಬರುತ್ತ ಕಡಿಮೆಯಾದರು.

೬೧-೬೪. ಉಳಿದ ದೇವತೆಗಳೆಲ್ಲರೂ ಯುದ್ಧರಂಗದಿಂದ ಶಿವನ ಸಮೀಪಕ್ಕೆ ಓಡಿಬಂದು ಶಿವನನ್ನು ನಮಸ್ಕರಿಸಿ ಎಲೈ ಪ್ರಭುವೇ, ಆ ಗಣಶ್ರೇಷ್ಠನು ಯಾರು ?

ತೇ ಸರ್ವೇ ಮಿಲಿತಾಶ್ಚೈವ ಮುಹುರ್ನತ್ವಾ ಶಿವಂ ತದಾ ।
ಅಬ್ರುವನ್ವಚನಂ ಕ್ಷಿಪ್ರಂ ಕೋsಯಂ ಗಣವರಃ ಪ್ರಭೋ ॥ ೬೨ ॥

ಪುರಾ ಚೈವ ಶ್ರುತಂ ಯುದ್ಧಮಿದಾನೀಂ ಬಹುಧಾ ಪುನಃ ।
ದೃಶ್ಯತೇ ನ ಶ್ರುತಂ ದೃಷ್ಟಮೀದೃಶಂ ತು ಕದಾಚನ ॥ ೬೩ ॥

ಕಿಂಚಿದ್ವಿಚಾರ್ಯತಾಂ ದೇವ ತ್ವನ್ಯಥಾ ನ ಜಯೋ ಭವೇತ್ ।
ತ್ವಮೇವ ರಕ್ಷಕಸ್ಸ್ವಾಮಿ ಬ್ರಹ್ಮಾಂಡಸ್ಯ ನ ಸಂಶಯಃ ॥ ೬೪ ॥

॥ ಬ್ರಹ್ಮೋವಾಚ ॥

ಇತ್ಯೇವಂ ತದ್ವಚಃ ಶ್ರುತ್ವಾ ರುದ್ರಃ ಪರಮಕೋಪನಃ ।
ಕೋಪಂ ಕೃತ್ವಾ ಚ ತತ್ರೈವ ಜಗಾಮ ಸ್ವಗಣೈಸ್ಸಹ ॥ ೬೫ ॥

ದೇವಸೈನ್ಯಂ ಚ ತತ್ಸರ್ವಂ ವಿಷ್ಣುನಾ ಚಕ್ರಿಣಾ ಸಹ ।
ಸಮುತ್ಸವಂ ಮಹತ್ಕೃತ್ವಾ ಶಿವಸ್ಯಾನುಜಗಾಮ ಹ ॥ ೬೬ ॥

---

ಪೂರ್ವದಲ್ಲಿ ನಡೆದ ಅನೇಕ ಯುದ್ಧವನ್ನು ನೋಡಿಯೂ ಇದ್ದೆವು. ಕೇಳಿಯೂ ಇದ್ದೆವು. ಆದರೆ ಇಂತಹ ಯುದ್ಧವನ್ನು ನೋಡಿಯೂ ಇಲ್ಲ. ಕೇಳಿಯೂ ಅರಿಯೆವು. ನೀನು ಸ್ವಲ್ಪ ಯೋಚನೆಮಾಡು. ನಿನ್ನ ಸಹಾಯವಿಲ್ಲದೆ ಜಯವಾಗಲಾರದು. ನೀನೇ ಬ್ರಹ್ಮಾಂಡಕ್ಕೂ ನಮಗೂ ಸ್ವಾಮಿಯು. ಇದು ನಿಸ್ಸಂಶಯವಾದುದು ಎಂದರು.

೬೫-೬೬. ಬ್ರಹ್ಮನು ಹೇಳಿದನು:—ಎಲ್ಲರೂ ಈರೀತಿಯಾಗಿ ಹೇಳಿದ ಮಾತನ್ನು ಕೇಳಿ ರುದ್ರನು ಅತ್ಯಂತ ಕೋಪದಿಂದ ತನ್ನ ಗಣಗಳೊಡನೆ ಆ ಗಣಪತಿ ಯಿದ್ದೆಡೆಗೆ ಹೋದನು. ಚಕ್ರಾಯುಧವನ್ನು ಹಿಡಿದು ವಿಷ್ಣುವೂ ಅವನೊಡನೆ ಹೊರಟನು. ದೇವಸೈನ್ಯವೂ ಬಹಳ ಕೋಲಾಹಲಮಾಡುತ್ತಾ ಶಿವನನ್ನು ಹಿಂಬಾಲಿಸಿದರು.

ಏತಸ್ಮಿನ್ನಂತರೇ ಭಕ್ತ್ಯಾ ನಮಸ್ಕೃತ್ಯ ಮಹೇಶ್ವರಂ ।
ಅಬ್ರವೀನ್ನಾರದ ತ್ವಂ ವೈ ದೇವದೇವಂ ಕೃತಾಂಜಲಿಃ ॥ ೬೭ ॥

॥ ನಾರದ ಉವಾಚ ॥

ದೇವದೇವ ಮಹಾದೇವ ಶೃಣು ಮದ್ವಚನಂ ವಿಭೋ ।
ತ್ವಮೇವ ಸರ್ವಗಸ್ಸ್ವಾಮೀ ನಾನಾಲೀಲಾವಿಶಾರದಃ ॥ ೬೮ ॥

ತ್ವಯಾ ಕೃತ್ವಾ ಮಹಾಲೀಲಾಂ ಗಣಗರ್ವೋಽಪಹಾರಿತಃ ।
ಅಸ್ಮೈ ದತ್ವಾ ಬಲಂ ಭೂರಿ ದೇವಗರ್ವಶ್ಚ ಶಂಕರ ॥ ೬೯ ॥

ದರ್ಶಿತಂ ಭುವನೇ ನಾಥ ಸ್ವಮೇವ ಬಲಮದ್ಭುತಂ ।
ಸ್ವತಂತ್ರೇಣ ತ್ವಯಾ ಶಂಭೋ ಸರ್ವಗರ್ವಾಪಹಾರಿಣಾ ॥ ೭೦ ॥

ಇದಾನೀಂ ನ ಕುರುಷ್ವೇಶ ತಾಂ ಲೀಲಾಂ ಭಕ್ತವತ್ಸಲ ।
ಸ್ವಗಣಾನಮರಾಂಶ್ಚಾಪಿ ಸುಸಮ್ಮಾನ್ಯಾಭಿವರ್ಧಯ ॥ ೭೧ ॥

---

೬೭. ಈ ಸಮಯದಲ್ಲಿ ನೀನು (ನಾರದನು) ಈಶ್ವರನನ್ನು ನಮಸ್ಕರಿಸಿ, ಅಂಜಲಿ ಬದ್ಧನಾಗಿ ದೇವದೇವನಾದ ಮಹಾದೇವನನ್ನು ಕುರಿತು ಹೀಗೆ ಹೇಳಿದೆ.

೬೮-೬೯. ದೇವದೇವನಾದ ಮಹಾದೇವನೇ, ನನ್ನ ಮಾತನ್ನು ಕೇಳು. ನೀನು ಇಚ್ಛಾಗಾಮಿಯು. ನಾನಾವಿಧವಾದ ಲೀಲೆಯನ್ನು ಪ್ರಪಂಚಕ್ಕೆ ತೋರಿಸುವವನು. ನಿನ್ನ ಲೀಲೆಯಿಂದ ಗಣಗಳೆಲ್ಲರ ಗರ್ವವೂ ಅಡಗಿಹೋಗಿರುವುದು. ಈಗ ಈ ಬಾಲಕನಿಗೆ ನೀನೇ ಬಲವನ್ನು ಕೊಟ್ಟು ದೇವತೆಗಳ ಗರ್ವವನ್ನೂ ನಾಶಮಾಡಿ ನಿನ್ನ ಸಾಮರ್ಥವನ್ನು ಲೋಕದಲ್ಲಿ ಪ್ರದರ್ಶಿಸಿರುವೆ.

೭೦-೭೧. ನೀನು ಭುವನಾಧಿಪತಿಯು. ಸ್ವತಂತ್ರಪ್ರವೃತ್ತನಾದ ನೀನು ನಿನ್ನ ಬಲವನ್ನು ಪ್ರಪಂಚಕ್ಕೆ ತೋರಿಸಿರುವೆ. ನೀನು ಸರ್ವರ ಗರ್ವವನ್ನೂ ನಾಶಮಾಡ ತಕ್ಕವನು. ಈಗ ನಿನ್ನ ಅದ್ಭುತಲೀಲೆಯನ್ನು ತೋರಿ ಸಾಕುಮಾಡಿ ಗಣಗಳನ್ನೂ ದೇವತೆಗಳನ್ನೂ ಕಾಪಾಡು.

ಇಮಂ ನ ಖೇಲಯಾದಾನೀಂ ಜಹಿ ಬ್ರಹ್ಮಪದಪ್ರದ ।
ಇತ್ಯುಕ್ತ್ವಾ ನಾರದ ತ್ವಂ ವೈ ಹ್ಯಂತರ್ಧಾನಂ ಗತಸ್ತದಾ ॥ ೭೨ ॥

ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಕುಮಾರಖಂಡೇ
ಗಣೇಶಯುದ್ಧವರ್ಣನಂ ನಾಮ
ಪಂಚದಶಮೋಽಧ್ಯಾಯಃ.



---

೭೨. ನೀನು ಬ್ರಹ್ಮನ ಸ್ಥಾನವನ್ನೂ ಕಲ್ಪಿಸತಕ್ಕ ಸ್ವಾಮಿಯು. ಈಗ ನಡೆಸುತ್ತಿರುವ ಆಟವನ್ನು ಬಿಟ್ಟು ನಿನ್ನ ವಿರೋಧಿಯನ್ನು ನಾಶಮಾಡು ಎಂದು ಹೇಳಿ ನೀನು (ನಾರದನು) ಅಂತರ್ಧಾನನಾದೆ.

ಶ್ರೀ ಶಿವಮಹಾಪುರಾಣದಲ್ಲಿನ ರುದ್ರಸಂಹಿತೆಯ ಕುಮಾರಖಂಡದಲ್ಲಿ
ಗಣೇಶಯುದ್ಧವರ್ಣನವೆಂಬ ಹದಿನೈದನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ರುದ್ರಸಂಹಿತಾಯಾಂ ಕುಮಾರಖಂಡೇ

## ಷೋಡಶೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಇತಿ ಶ್ರುತ್ವಾ ಮಹೇಶಾನೋ ಭಕ್ತಾನುಗ್ರಹಕಾರಕಃ ।
ತ್ವದ್ವಾಚಾ ಯುದ್ಧಕಾಮೋಽಭೂತ್ತೇನ ಬಾಲೇನ ನಾರದ ॥ ೧ ॥

ವಿಷ್ಣುಮಾಹೂಯ ಸಂಮಂತ್ರ್ಯ ಬಲೇನ ಮಹತಾ ಯುತಃ ।
ಸಾಮರಸ್ಸಮ್ಮುಖಸ್ತಸ್ಯಾಪ್ಯಭೂದ್ದೇವಸ್ತ್ರಿಲೋಚನಃ ॥ ೨ ॥

ದೇವಾಶ್ಚ ಯುಯುಧುಸ್ತೇನ ಸ್ಮೃತ್ವಾ ಶಿವಪದಾಂಬುಜಂ ।
ಮಹಾಬಲಾ ಮಹೋತ್ಸಾಹಾಶ್ಶಿವಸದ್ದೃಷ್ಟಿಲೋಕಿತಾಃ ॥ ೩ ॥

---

### ಹದಿನಾರನೆಯ ಅಧ್ಯಾಯವು.

೧. ಬ್ರಹ್ಮನು ಹೇಳಿದನು:—ಎಲೈ ನಾರದನೇ, ಭಕ್ತರಿಗೆ ಅನುಗ್ರಹವನ್ನು ಕರುಣಿಸುವ ಶಂಕರನು ನಿನ್ನ ಮಾತನ್ನು ಕೇಳಿ ಆ ಬಾಲಕನೊಡನೆ ಯುದ್ಧಮಾಡಬೇಕೆಂದು ಅಭಿಪ್ರಾಯಪಟ್ಟನು.

೨-೩. ವಿಷ್ಣುವನ್ನು ಕರೆಸಿ ಅವನೊಡನೆ ಮಂತ್ರಾಲೋಚನೆಯನ್ನು ನಡೆಸಿ ಒಂದು ದೊಡ್ಡಸೈನ್ಯವನ್ನು ತೆಗೆದುಕೊಂಡು ದೇವತೆಗಳೊಡನೆ ಗಣಪತಿಯಿರುವೆಡೆಗೆ ಹೋದನು. ದೇವತೆಗಳು ಶಿವನ ಪಾದಕಮಲಗಳನ್ನು ಸ್ಮರಿಸುತ್ತಾ ಬಹಳ ಪರಾಕ್ರಮದಿಂದಲೂ ಅತ್ಯಂತ ಉತ್ಸಾಹದಿಂದಲೂ ಯುದ್ಧಮಾಡಿದರು.

ಯುಯುಧೇಽಥ ಪರಿಸ್ತ್ರೇನ ಮಹಾಬಲಪರಾಕ್ರಮಃ ।
ಮಹಾದೇವ್ಯಾಯುಧೋ ವೀರಃ ಪ್ರವಣಃ ಶಿವರೂಪಕಃ ॥ ೪ ॥

ಯಷ್ಟ್ಯಾ ಗಣಾಧಿಪಸ್ಸೋಽಥ ಜಘಾನಾಮರಪುಂಗವಾನ್ ।
ಹರಿಂ ಚ ಸಹಸಾ ವೀರಶ್ಶಕ್ತಿದತ್ತಮಹಾಬಲಃ ॥ ೫ ॥

ಸರ್ವೇಽಮರಗಣಾಸ್ತತ್ರ ವಿಕುಂಠಿತಬಲಾ ಮುನೇ ।
ಅಭೂವನ್ನಿಷ್ಟುನಾ ತೇನ ಹತಾ ಯಷ್ಟ್ಯಾ ಪರಾಙ್ಮುಖಾಃ ॥ ೬ ॥

ಶಿವೋಽಪಿ ಸಹ ಸೈನ್ಯೇನ ಯುದ್ಧಂ ಕೃತ್ವಾ ಚಿರಂ ಮುನೇ ।
ವಿಕರಾಲಂ ಚ ತಂ ದೃಷ್ಟ್ವಾ ವಿಸ್ಮಯಂ ಪರಮಂ ಗತಃ ॥ ೭ ॥

ಛಲೇನೈವ ಚ ಹಂತವ್ಯೋ ನಾನ್ಯಥಾ ಹನ್ಯತೇ ಪುನಃ ।
ಇತಿ ಬುದ್ಧಿಂ ಸಮಾಸ್ಥಾಯ ಸೈನ್ಯಮಧ್ಯೇ ವ್ಯವಸ್ಥಿತಃ ॥ ೮ ॥

---

೪. ಮಂಗಳಕರನಾದ ಆ ವಿಷ್ಣುವು ದೊಡ್ಡದಾದ ಆಯುಧವನ್ನು ತೆಗೆದುಕೊಂಡು ಮಹಾಪರಾಕ್ರಮದಿಂದ ಯುದ್ಧಮಾಡಿದನು.

೫. ಇತ್ತ ಆ ವೀರನಾದ ಗಣಪತಿಗೆ, ದೇವಿಯು ಸೃಷ್ಟಿಮಾಡಿದ ಶಕ್ತಿಯರು ಬಲವನ್ನು ಕೊಟ್ಟರು. ಆದರಿಂದ ಮತ್ತೂ ಬಲಿಷ್ಠನಾಗಿ ತನ್ನ ಕೈಯಲ್ಲಿರುವ ಕೋಲಿನಿಂದ ವಿಷ್ಣುವನ್ನು ಹೊಡೆದನು.

೬. ಆ ಗಣಪತಿಯ ಏಟನ್ನು ತಾಳಲಾರದೆ ನಿರ್ಬಲರಾದ ದೇವತೆಗಳೆಲ್ಲರೂ ಯುದ್ಧರಂಗದಿಂದ ಹಿಮ್ಮೆಟ್ಟಿದರು.

೭. ಶಿವನೂ ಸಹ ಆ ಬಾಲಕನೊಡನೆ ಬಹಳ ಹೊತ್ತು ಯುದ್ಧಮಾಡಿ ರಣಭಯಂಕರನಾದ ಆ ಗಣಪತಿಯನ್ನು ನೋಡಿ ಪರಮಾಶ್ಚರ್ಯಪಟ್ಟನು.

೮. ಎದುರಿಗೆ ನಿಂತು ಪರಾಕ್ರಮದಿಂದ ಯುದ್ಧಮಾಡಿ ಇವನನ್ನು ಸೋಲಿಸುವುದು ಅಸಾಧ್ಯವಾಗಿರುವುದು. ಮೋಸದ ಯುದ್ಧಮಾಡಿದಹೊರತು ಈ ಹುಡುಗನನ್ನು ಜಯಿಸಲಾಗುವುದಿಲ್ಲ. ಹೀಗೆ ಶಿವನು ಯೋಚಿಸಿ ಆ ಸೈನ್ಯಮಧ್ಯದಲ್ಲಿ ನಿಂತಿದ್ದನು.

ಶಿವೇ ದೃಷ್ಟೇ ತದಾ ದೇವೇ ನಿರ್ಗುಣೇ ಗುಣರೂಪಿಣೇ ।
ವಿಷ್ಣೌ.ಚೈವಾಥ ಸಂಗ್ರಾಮೇ ಆಯಾತೇ ಸರ್ವದೇವತಾಃ ॥ ೯ ॥

ಗಣಾಶ್ಚೈವ ಮಹೇಶಸ್ಯ ಮಹಾಹರ್ಷಂ ತದಾ ಯಯುಃ ।
ಸರ್ವೇ ಪರಸ್ಪರಂ ಪ್ರೀತ್ಯಾ ಮಿಲಿತ್ವಾ ಚಕ್ರುರುತ್ಸವಂ ॥ ೧೦ ॥

ಅಥ ಶಕ್ತಿಸುತೋ ವೀರೋ ವೀರಗತ್ಯಾ ಸ್ವಯುಷ್ಟಿತಃ ।
ಪ್ರಥಮಂ ಪೂಜಯಾಮಾಸ ವಿಷ್ಣುಂ ಸರ್ವಸುಖಾವಹಂ ॥ ೧೧ ॥

ಅಹಂ ಚ ಮೋಹಯಿಷ್ಯಾಮಿ ಹನ್ಯತಾಂ ಚ ತ್ವಯಾ ವಿಭೋ ।
ಛಲಂ ವಿನಾ ನ ವಧ್ಯೋಽಯಂ ತಾಮಸೋಽಯಂ ದುರಾಸದಃ ॥ ೧೨ ॥

ಇತಿ ಕೃತ್ವಾ ಮತಿಂ ತತ್ರ ಸುಸಂಮಂತ್ರ್ಯ ಚ ಶಂಭುನಾ ।
ಆಜ್ಞಾಂ ಪ್ರಾಪ್ಯಾಭವಚ್ಚೈವೀಂ ವಿಷ್ಣುರ್ಮೋಹಪರಾಯಣಃ ॥ ೧೩ ॥

ಶಕ್ತಿದ್ವಯಂ ತಥಾ ಲೀನಂ ಹರಿಂ ದೃಷ್ಟ್ವಾ ತಥಾವಿಧಂ ।
ದತ್ವಾ ಶಕ್ತಿಬಲಂ ತಸ್ಮೈ ಗಣೇಶಾಯಾಭವನ್ಮುನೇ ॥ ೧೪ ॥

---

೯-೧೦. ಶಿವನು ನಿರ್ಗುಣಸ್ವರೂಪನಾದರೂ ಗುಣಸ್ವರೂಪನಂತೆ ಕಾಣಿಸು ತ್ತಿದ್ದನು. ಶಿವನೂ, ವಿಷ್ಣುವೂ ಯುದ್ಧಮಾಡಲು ಬಂದಿರುವುದನ್ನು ನೋಡಿ ದೇವತೆಗಳೆಲ್ಲರೂ ಸೇರಿ ಸಂತೋಷದಿಂದ ಮಹಾಉತ್ಸವವನ್ನು ಆಚರಿಸಿದರು.

೧೧. ಆ ಶಕ್ತಿಸ್ವರೂಪಳಾದ ಪಾರ್ವತಿಯ ಪುತ್ರನೂ ಸಹ ವೀರರು ಆಚರಿಸು ವಂತೆ ತನ್ನ ಕೋಲಿನಿಂದಲೇ, ಸರ್ವರಿಗೂ ಸುಖವನ್ನುಂಟುಮಾಡುವ ವಿಷ್ಣುವನ್ನು ಮೊದಲು ಪ್ರಹರಿಸಿದನು.

೧೨-೧೩. ಆಗ ವಿಷ್ಣುವು ಶಿವನನ್ನು ಕುರಿತು ಎಲೈ ಸ್ವಾಮಿಯೇ, ನಾನು ಆ ಬಾಲಕನನ್ನು ಮೋಹಗೊಳಿಸಿ ಜಯಿಸುವೆನು. ಮೋಸಮಾಡದೆ ಅವನನ್ನು ಕೊಲ್ಲಲು ಸಾಧ್ಯವಿಲ್ಲ. ಅವನು ಬಹಳ ಪರಾಕ್ರಮಿಯೂ, ತಾಮಸವೃತ್ತಿಯುಳ್ಳ ವನೂ ಆಗಿರುವನು ಎಂದು ಹೇಳಿ ಈಶ್ವರನೊಡನೆ ಮಂತ್ರಾಲೋಚನೆಯನ್ನು ನಡೆಸಿ ಆರೀತಿಮಾಡಲು ಶಿವನ ಅಪ್ಪಣೆಯನ್ನು ಪಡೆದನು.

೧೪. ಎಲೈ ಮುನಿಯೇ, ವಿಷ್ಣುವು ಆರೀತಿಮಾಡಿದುದನ್ನು ನೋಡಿ

ಶಕ್ತಿದ್ವಯೇಽಥ ಸಂಲೀನೇ ಯತ್ರ ವಿಷ್ಣುಃ ಸ್ಥಿತಸ್ಸ್ವಯಂ ।
ಪರಿಘಂ ಕ್ಷಿಪ್ತವಾಂಸ್ತತ್ರ ಗಣೇಶೋ ಬಲವತ್ತರಃ ॥ ೧೫ ॥

ಕೃತ್ವಾ ಯತ್ನಂ ಕಿಮಪ್ಯತ್ರ ವಂಚಯಾಮಾಸ ತದ್ಗತಿಂ ।
ಶಿವಂ ಸ್ಮೃತ್ವಾ ಮಹೇಶಾನಂ ಸ್ವಪ್ರಭುಂ ಭಕ್ತವತ್ಸಲಂ ॥ ೧೬ ॥

ವಿಕೇತಸ್ತನ್ಮುಖಂ ದೃಷ್ಟ್ವಾ ಶಂಕರೋಽಪ್ಯಾಜಗಾಮ ಹ ।
ಸ್ವತ್ರಿಶೂಲಂ ಸಮಾದಾಯ ಸಂಕ್ರುದ್ಧೋ ಯುದ್ಧಕಾಮ್ಯಯಾ ॥ ೧೭ ॥

ಸ ದದರ್ಶಾಗತಂ ಶಂಭುಂ ಶೂಲಹಸ್ತಂ ಮಹೇಶ್ವರಂ ।
ಹಂತುಕಾಮಂ ನಿಜಂ ವೀರಶ್ಶಿವಾಪುತ್ರೋ ಮಹಾಬಲಃ ॥ ೧೮ ॥

ಶಕ್ತ್ಯಾ ಜಘಾನ ತಂ ಹಸ್ತೇ ಸ್ಮೃತ್ವಾ ಮಾತೃಪದಾಂಬುಜಂ ।
ಸ ಗಣೇಶೋ ಮಹಾವೀರಶ್ಶಿವಶಕ್ತಿಪ್ರವರ್ಧಿತಃ ॥ ೧೯ ॥

---

ಗಣಪತಿಗೆ ಸಹಾಯಕರಾದ ಆ ಇಬ್ಬರು ಶಕ್ತಿದೇವತೆಯರೂ ತಮ್ಮ ಶಕ್ತಿಯನ್ನು ಗಣಪತಿಗೆ ಕೊಟ್ಟು ತಾವು ಮರೆಯಾಗಿಹೋದರು.

೧೫. ಆ ಶಕ್ತಿದೇವತೆಯರಿಬ್ಬರೂ ಮರೆಯಾಗಿ ಹೊರಟುಹೋಗಲು ಗಣಪತಿಯು ಪರಿಘಾಯುಧವನ್ನು ತೆಗೆದುಕೊಂಡು ವಿಷ್ಣುವಿನ ಕಡೆಗೆ ಎಸೆದನು.

೧೬. ವಿಷ್ಣುವು, ಭಕ್ತವತ್ಸಲನಾದ ಶಿವನನ್ನು ಧ್ಯಾನಿಸುತ್ತಾ ತನ್ನ ಕಡೆಗೆ ಬರುತ್ತಿರುವ ಪರಿಘಾಯುಧದ ಏಟನ್ನು ಯಾವುದೋ ಉಪಾಯವನ್ನು ಮಾಡಿ ತಪ್ಪಿಸಿಕೊಂಡನು.

೧೭. ಶಂಕರನೂ ಕೂಡ ಆ ಗಣಪತಿಯ ಮುಖವನ್ನು ನೋಡಿ ತುಂಬಾ ಕೋಪಗೊಂಡು ತನ್ನ ತ್ರಿಶೂಲವನ್ನು ಕೈಯಲ್ಲಿ ಹಿಡಿದು ಯುದ್ಧಮಾಡಿದನು.

೧೮-೧೯. ಶೂಲವನ್ನು ಹಿಡಿದು ತನ್ನ ಕಡೆಗೆ ಬರುತ್ತಿರುವುದನ್ನು ನೋಡಿ ಗಣಪತಿಯು ತನ್ನ ತಾಯಿಯಾದ ಭವಾನಿಯ ಚರಣಕಮಲಗಳನ್ನು ಧ್ಯಾನಿಸುತ್ತಾ ಶಕ್ತ್ಯಾಯುಧದಿಂದ ಶಂಕರನನ್ನು ಬಲವಾಗಿ ಹೊಡೆದನು. ಆ ಗಣಪತಿಯು ಶಿವನ ಶಕ್ತಿಸ್ವರೂಪಳಾದ ಪಾರ್ವತಿಯ ಮಗನಲ್ಲವೇ ? ಅವನಾಯುಧವು ವಿಫಲವಾದೀತೇ ?

ತ್ರಿಶೂಲಂ ಪತಿತಂ ಹಸ್ತಾಚ್ಛಿವಸ್ಯ ಪರಮಾತ್ಮನಃ ।
ದೃಷ್ಟ್ವಾ ಸದೂತಿಕಸ್ತಂ ವೈ ಪಿನಾಕಂ ಧನುರಾದದೇ ॥ ೨೦ ॥

ತಮಪ್ಯಪಾತಯದ್ಭೂಮೌ ಪರಿಘೇಣ ಗಣೇಶ್ವರಃ ।
ಹತಾಃ ಪಂಚ ತಥಾ ಹಸ್ತಾಃ ಪಂಚಭಿಶ್ಶೂಲಮಾದದೇ ॥ ೨೧ ॥

ಅಹೋ ದುಃಖತರಂ ನೂನಂ ಸಂಜಾತಮಧುನಾ ಮಮ ।
ಭವೇತ್ಪುನರ್ಗಣಾನಾಂ ಕಿಂ ಭವಾಚಾರೀ ಜಗಾವಿತಿ ॥ ೨೨ ॥

ಏತಸ್ಮಿನ್ನಂತರೇ ವೀರಃ ಪರಿಘೇಣ ಗಣೇಶ್ವರಃ ।
ಜಘಾನ ಸಗಣಾನ್ ದೇವಾನ್ ಶಕ್ತಿದತ್ತಬಲಾನ್ವಿತಃ ॥ ೨೩ ॥

ಗತಾ ದಶದಿಶೋ ದೇವಾಸ್ಸಗಣಾಃ ಪರಿಘಾರ್ದಿತಾಃ ।
ನ ತಸ್ಥುಃ ಸಮರೇ ಕೇಽಪಿ ತೇನಾದ್ಭುತಪ್ರಹಾರಿಣಾ ॥ ೨೪ ॥

---

೨೦, ಆ ಶಕ್ತ್ಯಾಯುಧದ ಏಟಿನಿಂದ ಶಿವನ ತ್ರಿಶೂಲವು ಕೆಳಗೆ ಬಿದ್ದಿತು. ಅದರಿಂದ ಶಿವನು ಕೋಪದಿಂದ ತನ್ನ ಪಿನಾಕವೆಂಬ ಪ್ರಸಿದ್ಧವಾದ ಧನುಸ್ಸನ್ನು ತೆಗೆದುಕೊಂಡನು.

೨೧. ಗಣಪತಿಯು ಆ ಧನುಸ್ಸನ್ನೂ ಪರಿಘಾಯುಧದಿಂದ ಕೆಳಕ್ಕೆ ಕೆಡವಿದನು. ಶಿವನ ಐದು ಕೈಗಳು ಕತ್ತರಿಸಿಹೋದವು. ಮತ್ತೈದು ಕೈಗಳಿಂದ ಮತ್ತೆ ತ್ರಿಶೂಲವನ್ನು ತೆಗೆದುಕೊಂಡನು.

೨೨. ಆ ಸಮಯದಲ್ಲಿ ಈಶ್ವರನು ಅಯ್ಯೋ, ನನಗೆ ಇಷ್ಟು ದುಃಖವುಂಟಾಗುತ್ತಿರಲು, ಪಾಪ ನನ್ನ ಗಣಗಳಿಗೆ ಎಷ್ಟು ದುಃಖವುಂಟಾಗಿರಬಹುದು ಎಂದು ಯೋಚಿಸಿದನು.

೨೩-೨೪. ಇದೇ ಸಮಯದಲ್ಲಿ ವೀರನಾದ ಗಣಪತಿಯು ಶಕ್ತಿದೇವತೆಯರಿಂದ ಮತ್ತಷ್ಟು ಬಲವುಳ್ಳವನಾಗಿ ದೇವತೆಗಳನ್ನೂ, ಗಣಗಳನ್ನೂ ಪರಿಘಾಯುಧದಿಂದ ಹೊಡೆದನು. ಅವರು ಅದರ ಏಟನ್ನು ತಾಳಲಾರದೆ ದಿಕ್ಕೆಟ್ಟು ಓಡಿದರು. ಒಬ್ಬರಾದರೂ ಯುದ್ಧರಂಗದಲ್ಲಿ ನಿಲ್ಲಲಿಲ್ಲ.

ವಿಷ್ಣುಸ್ತಂ ಚ ಗಣಂ ದೃಷ್ಟ್ವಾ ಧನ್ಯೋಽಯಮಿತಿ ಚಾಬ್ರವೀತ್ ।
ಮಹಾಬಲೋ ಮಹಾವೀರೋ ಮಹಾಶೂರೋ ರಣಪ್ರಿಯಃ ॥ ೨೫ ॥

ಬಹವೋ ದೇವತಾಶ್ಚೈವ ಮಯಾ ದೃಷ್ಟಾಸ್ತಥಾ ಪುನಃ ।
ದಾನವಾ ಬಹವೋ ದೈತ್ಯಾ ಯಕ್ಷಗಂಧರ್ವರಾಕ್ಷಸಾಃ ॥ ೨೬ ॥

ನೈತೇನ ಗಣನಾಥೇನ ಸಮತಾಂ ಯಾಂತಿ ಕೇಽಪಿ ಚ ।
ತ್ರೈಲೋಕ್ಯೇಽಪ್ಯಖಿಲೇ ತೇಜೋರೂಪಶೌರ್ಯಗುಣಾದಿಭಿಃ ॥ ೨೭ ॥

ಏವಂ ಸಂಬ್ರುವತೇಽಮುಷ್ಮೈ ಪರಿಘಂ ಭ್ರಾಮಯನ್ ಸ ಚ ।
ಚಿಕ್ಷೇಪ ವಿಷ್ಣವೇ ತತ್ರ ಶಕ್ತಿಪುತ್ರೋ ಗಣೇಶ್ವರಃ ॥ ೨೮ ॥

ಚಕ್ರಂ ಗೃಹಿತ್ವಾ ಹರಿಣಾ ಸ್ಮೃತ್ವಾ ಶಿವಪದಾಂಬುಜಂ ।
ತೇನ ಚಕ್ರೇಣ ಪರಿಘೋ ಧ್ರುತಂ ಖಂಡೀಕೃತಸ್ತದಾ ॥ ೨೯ ॥

ಖಂಡಂ ತು ಪರಿಘಸ್ಯಾಪಿ ಹರಯೇ ಪ್ರಾಕ್ಷಿಪದ್ಗಣಃ ।
ಗೃಹೀತ್ವಾ ಗರುಡೇನಾಪಿ ಪಕ್ಷಿಣಾ ವಿಫಲೀಕೃತಃ ॥ ೩೦ ॥

---

೨೫. ವಿಷ್ಣುವು ಗಣಪತಿಯನ್ನು ನೋಡಿ, ಇವನು ಮಹಾಶೂರನು. ಮಹಾ ಬಲನು, ರಣವಿಶಾರದನು. ಇವನೇ ಧನ್ಯನು.

೨೬-೨೭. ನಾನು ಅನೇಕ ಶೂರರಾದ ದೇವತೆಗಳನ್ನೂ, ದಾನವರನ್ನೂ, ದೈತ್ಯರನ್ನೂ ಯಕ್ಷ, ಗಂಧರ್ವ, ರಾಕ್ಷಸರನ್ನೂ ನೋಡಿರುವೆನು. ಆವರೆ ಮೂರು ಲೋಕದಲ್ಲಿಯೂ, ರೂಪ, ಶೌರ್ಯ, ಗುಣ ಮುಂತಾದುವುಗಳಲ್ಲಿ ಈ ಗಣಪತಿಗೆ ಸಮನಾದವನು ಯಾರೂ ಇಲ್ಲವೆಂದನು.

೨೮-೨೯. ಈ ರೀತಿಯಾಗಿ ಹೇಳುತ್ತಿರುವ ವಿಷ್ಣುವನ್ನು ನೋಡಿ ಆ ಗಣಪತಿಯು ಪರಿಘಾಯುಧವನ್ನು ಗಿರ್ರನೆ ತಿರುಗಿಸುತ್ತಾ ವಿಷ್ಣುವಿಗೆ ಬಲವಾಗಿ ಹೊಡೆದನು. ಆ ಸಮಯದಲ್ಲಿ ವಿಷ್ಣುವೂ ಶಿವನ ಪಾದಕಮಲಗಳನ್ನು ನೆನೆದು ಚಕ್ರಾಯುಧದಿಂದ ಆ ಪರಿಘಾಯುಧವನ್ನು ಹೊಡೆಯಲು ಆದು ಚೂರು ಚೂರಾಯಿತು.

೩೦-೩೧. ಆ ಪರಿಘಾಯುಧವು ಚೂರಾಗಲು ಆ ಚೂರನ್ನೇ ತೆಗೆದುಕೊಂಡು ಗಣಪತಿಯು ವಿಷ್ಣುವಿಗೆ ಹೊಡೆದನು. ಅದನ್ನು ಗರುಡನು ಹಿಡಿಯಲು ಹೋದನು.

ಏವಂ ವಿಚರಿತಂ ಕಾಲಂ ಮಹಾವೀರಾವುಭಾವಪಿ ।
ವಿಷ್ಣುಶ್ಚಾಪಿ ಗಣಶ್ಚೈವ ಯುಯುಧಾತೇ ಪರಸ್ಪರಂ ॥ ೩೧ ॥

ಪುನರ್ವೀರವರಶ್ಶಕ್ತಿಸುತಸ್ಸ್ಮೃತಶಿವೋ ಬಲೀ ।
ಗೃಹೀತ್ವಾ ಯಷ್ಟಿಮತುಲಾಂ ತಯಾ ವಿಷ್ಣುಂ ಜಘಾನ ಹ ॥ ೩೨ ॥

ಅವಿಷಹ್ಯ ಪ್ರಹಾರಂ ತಂ ಸ ಭೂಮೌ ನಿಪಪಾತ ಹ ।
ದ್ರುತಮುತ್ಥಾಯ ಯುಯುಧೇ ಶಿವಾಪುತ್ರೇಣ ತೇನ ವೈ ॥ ೩೩ ॥

ಏತದಂತರಮಾಸಾದ್ಯ ಶೂಲಪಾಣಿಸ್ತಥೋತ್ತರೇ ।
ಆಗತ್ಯ ಚ ತ್ರಿಶೂಲೇನ ತಚ್ಛಿರೋ ನಿರಕೃಂತತ ॥ ೩೪ ॥

ಛಿನ್ನೇ ಶಿರಸಿ ತಸ್ಯೈವ ಗಣನಾಥಸ್ಯ ನಾರದ ।
ಗಣಸೈನ್ಯಂ ದೇವಸೈನ್ಯಮಭವಚ್ಚ ಸುನಿಶ್ಚಲಂ ॥ ೩೫ ॥

ನಾರದೇನ ತ್ವಯಾಽಽಗತ್ಯ ದೇವ್ಯೈ ಸರ್ವಂ ನಿವೇದಿತಂ ।
ಮಾನಿನಿ ಶ್ರೂಯತಾಂ ಮಾನಸ್ತ್ಯಾಜ್ಯೋ ನೈವ ತ್ವಯಾಧುನಾ ॥ ೩೬ ॥

---

ಆದರೆ ಅದು ವ್ಯರ್ಥವಾಯಿತು. ಈರೀತಿಯಾಗಿ ಮಹಾವೀರರಾದ ವಿಷ್ಣುವೂ, ಗಣಪತಿಯೂ ಬಹಳ ಕಾಲದವರೆವಿಗೂ ಯುದ್ಧಮಾಡುತ್ತಿದ್ದರು.

೩೨-೩೩. ಪಾರ್ವತಿಯ ಮಗನಾದ ವೀರಗಣಪತಿಯು ಭವಾನಿಯನ್ನು ಸ್ಮರಿಸುತ್ತಾ ಕೋಲನ್ನು ತೆಗೆದುಕೊಂಡು ವಿಷ್ಣುವನ್ನು ಹೊಡೆದನು. ಅದರ ಏಟನ್ನು ತಾಳಲಾರದೆ ವಿಷ್ಣುವು ಭೂಮಿಯಮೇಲೆ ಬಿದ್ದನು. ಜಾಗ್ರತೆಯಾಗಿ ಮೇಲಕ್ಕೆದ್ದು ಪುನಃ ಆ ಗಣಪತಿಯೊಡನೆ ಯುದ್ಧಮಾಡಿದನು.

೩೪-೩೫. ಆ ಸಮಯದಲ್ಲಿ ಶಂಕರನು ಕೋಪದಿಂದ ತ್ರಿಶೂಲವನ್ನು ತೆಗೆದು ಕೊಂಡು ಆ ಗಣಪತಿಯ ತಲೆಯನ್ನು ಕತ್ತರಿಸಿದನು. ಎಲೈ ನಾರದನೇ, ಗಣಪತಿಯ ತಲೆಯು ಕತ್ತರಿಸಿ ಬೀಳಲು ದೇವಸೈನ್ಯವೂ ಗಣಗಳೂ ಸ್ತಬ್ಧರಾಗಿ ನಿಂತರು.

೩೬-೩೭. ಎಲೈ ನಾರದನೇ, ನೀನು ಯಾವಾಗಲೂ ಶಂಕರನ ಮನೋವೃತ್ತಿ ಯನ್ನನುಸರಿಸಿ ನಡೆಯುವವನು. ನಿರ್ವಿಕಾರನಾದರೂ ಕಲಹಪ್ರಿಯನಷ್ಟೆ? ಆಗ

ಇತ್ಯುಕ್ತ್ವಾಂತರ್ಹಿತಸ್ತತ್ರ ನಾರದ ತ್ವಂ ಕಲಿಪ್ರಿಯಃ ।
ಅವಿಕಾರೀ ಸದಾ ಶಂಭುಮನೋಗತಿಕರೋ ಮುನಿಃ ॥ ೩೭ ॥

ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಕುಮಾರಖಂಡೇ
ಗಣೇಶಯುದ್ಧ ಗಣೇಶಶಿರಶ್ಛೇದವರ್ಣನಂ ನಾಮ
ಷೋಡಶೋಽಧ್ಯಾಯಃ

---

ನೀನು ಪಾರ್ವತಿಯ ಸಮೀಪಕ್ಕೆ ಬಂದು ಎಲೌ ದೇವಿ, ನನ್ನ ಮಾತನ್ನು ಕೇಳು ಈಗ ಮಾನಹೋಗುವ ಪ್ರಸಂಗಬಂದಿರುವುದು. ಆದುದರಿಂದ ಏನಾದರೂ ಮಾಡಿ ನಿನ್ನ ಗೌರವವನ್ನು ಉಳಿಸಿಕೊಳ್ಳಲೇಬೇಕು ಎಂದು ಹೇಳಿದೆ.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ರುದ್ರಸಂಹಿತೆಯಲ್ಲಿನ ಕುಮಾರಖಂಡದಲ್ಲಿ
ಗಣೇಶನ ಯುದ್ಧ, ಗಣೇಶನ ಶಿರಚ್ಛೇದವರ್ಣನವೆಂಬ ಹದಿನಾರನೆಯ
ಅಧ್ಯಾಯವುಮುಗಿದುದು.



|| ಶ್ರೀಃ ||

---

|| ಓಂ ನಮಃ ಶಿವಾಯ ||

# ಅಥ ಶ್ರೀ ಶಿವ ಮಹಾ ಪು ರಾ ಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಸಪ್ತದಶೋಽಧ್ಯಾಯಃ

|| ನಾರದ ಉವಾಚ ||

ಬ್ರಹ್ಮನ್ ವದ ಮಹಾಪ್ರಾಜ್ಞ ತದ್ವೃತ್ತಾಂತೇಽಖಿಲೇ ಶ್ರುತೇ ।
ಕಿಮಕಾರ್ಷೀನ್ಮಹಾದೇವೀ ಶ್ರೋತುಮಿಚ್ಛಾಮಿ ತತ್ತ್ವತಃ || ೧ ||

|| ಬ್ರಹ್ಮೋವಾಚ ||

ಶ್ರೂಯತಾಂ ಮುನಿಶಾರ್ದೂಲ ಕಥಯಾಮ್ಯದ್ಯ ತದ್ಧ್ರುವಂ ।
ಚರಿತಂ ಜಗದಂಬಾಯಾ ಯಜ್ಜಾತಂ ತದನಂತರಂ || ೨ ||

---

### ಹದಿನೇಳನೆಯ ಅಧ್ಯಾಯವು.

೧. ನಾರದಮಹರ್ಷಿಯು ಬ್ರಹ್ಮನನ್ನು ಕುರಿತು :—ಎಲೈ ಪೂಜ್ಯನೇ, ನೀನು ಮಹಾಪ್ರಾಜ್ಞನು. ನೀನು ಇಲ್ಲಿನವರೆಗೆ ಹೇಳಿದ ವಿಷಯವೆಲ್ಲವೂ ತಿಳಿದಂತಾಯಿತು. ಮುಂದೆ ಪಾರ್ವತಿಯು ಏನುಮಾಡಿದಳು ? ಅದನ್ನು ಕೇಳಲು ನನಗೆ ಕುತೂಹಲವುಂಟಾಗಿದೆ. ದಯವಿಟ್ಟು ಮುಂದಿನ ಕಥೆಯನ್ನು ಹೇಳು ಎಂದು ಪ್ರಾರ್ಥಿಸಲು,

೨. ಬ್ರಹ್ಮನು ನಾರದನಿಗೆ ಹೀಗೆ ಹೇಳತೊಡಗಿದನು :-ಎಲೈ ನಾರದಋಷಿಯೆ, ನಿನ್ನ ಇಷ್ಟದಂತೆ ಪಾರ್ವತಿಯು ಮುಂದೆ ಆಚರಿಸಿದ ಕಾರ್ಯಭಾಗವನ್ನು ವಿವರಿಸುವೆನು ಕೇಳು.

ಮೃದಂಗಾನ್ ಪಟಹಾಂಶ್ಚೈವ ಗಣಾಶ್ಚಾವಾದಯಂಸ್ತಥಾ ।
ಮಹೋತ್ಸವಂ ತದಾ ಚಕ್ರುರ್ಹತೇ ತಸ್ಮಿನ್ ಗಣಾಧಿಪೇ ॥ ೩ ॥

ಶಿವೋsಪಿ ತಚ್ಛಿರಶ್ಛಿತ್ವಾ ಯಾವದ್ದುಃಖಮುಪಾಗದೇ ।
ತಾವಚ್ಚ ಗಿರಿಜಾ ದೇವೀ ಚುಕ್ರೋಧಾತಿ ಮುನೀಶ್ವರ ॥ ೪ ॥

ಕಿಂ ಕರೋಮಿ ಕ್ವ ಗಚ್ಛಾಮಿ ಹಾಹಾದುಃಖಮುಪಾಗತಂ ।
ಕಥಂ ದುಃಖಂ ವಿನಶ್ಯೇತಾಸ್ಯಾತಿ ದುಃಖಂ ಮಮಾಧುನಾ ॥ ೫ ॥

ಮತ್ಸುತೋ ನಾಶಿತಶ್ಚಾದ್ಯ ದೈವೈಸ್ಸರ್ವೈರ್ಗಣೈಸ್ತಥಾ ।
ಸರ್ವಾಂಸ್ತಾನ್ನಾಶಯಿಷ್ಯಾಮಿ ಪ್ರಲಯಂ ವಾ ಕರೋಮ್ಯಹಂ ॥ ೬ ॥

ಇತ್ಯೇವಂ ದುಃಖಿತಾ ಸಾ ಚ ಶಕ್ತೀಶ್ಶತಸಹಸ್ರಶಃ ।
ನಿರ್ಮಮೇ ತತ್ಕ್ಷಣಂ ಕ್ರುದ್ಧಾ ಸರ್ವಲೋಕಮಹೇಶ್ವರೀ ॥ ೭ ॥

ನಿರ್ಮಿತಾಸ್ತಾ ನಮಸ್ಕೃತ್ಯ ಜಗದಂಬಾಂ ಶಿವಾಂ ತದಾ ।
ಜಾಜ್ವಲ್ಯಮಾನಾ ಹ್ಯವದನ್ಮಾತರಾದಿಶ್ಯತಾಮಿತಿ ॥ ೮ ॥

ತಚ್ಛ್ರುತ್ವಾ ಶಂಭುಶಕ್ತಿಸ್ಸಾ ಪ್ರಕೃತಿಃ ಕ್ರೋಧತತ್ಪರಾ ।
ಪ್ರತ್ಯುವಾಚ ತು ತಾಸ್ಸರ್ವಾ ಮಹಾಮಾಯಾ ಮುನೀಶ್ವರ ॥ ೯ ॥

---

೩-೪. ಆ ಗಣಪತಿಯು ಈಶ್ವರನಿಂದ ಹತನಾದಮೇಲೆ ದೇವತೆಗಳೆಲ್ಲರೂ ಗಣಗಳೂ ಜಯದಿಂದ ಉತ್ಸಾಹಗೊಂಡು ಮೃದಂಗ, ಪಟಹ, ಇವುಗಳನ್ನು ಬಾರಿಸ ತೊಡಗಿದರು. ಈಶ್ವರನಾದರೋ ಅವನ ತಲೆಯನ್ನು ಕತ್ತರಿಸಿ ಹೆಚ್ಚು ದುಃಖಿತ ನಾದುದನ್ನು ಗಿರಿಜೆಯು ಕಂಡು ಕೋಪಿಸಿಕೊಂಡಳು.

೫-೬. ಅಯ್ಯೋ, ಈಗ ಮಹಾದುಃಖವೊದಗಿರುವುದಲ್ಲಾ, ಏನುಮಾಡಲಿ ? ಎಲ್ಲಿಗೆಪೋಗಲಿ ? ಈ ದೇವಗಣವೆಲ್ಲವೂ ಸೇರಿ ನನ್ನ ಮಗನನ್ನು ಕೊಲ್ಲಿಸಿರುವರಲ್ಲಾ ? ಈಗಲೇ ಇವರೆಲ್ಲರನ್ನೂ ನಾಶಮಾಡಿ ಜಗತ್ತನ್ನೇ ಮುಳುಗಿಸಲೇ ?

೭-೯. ಹೀಗೆಂದು ಪಾರ್ವತಿಯು ದುಃಖಿಸಿ ಅತ್ಯಂತ ಕೋಪದಿಂದ ಸಾವಿರಾರು ಶಕ್ತಿದೇವತೆಗಳನ್ನು ನಿರ್ಮಿಸಿದಳು. ಆ ದೇವಿಯರೆಲ್ಲರೂ ಮಹಾತೇಜಸ್ಸಿನಿಂದ ಪ್ರಕಾಶಿಸುತ್ತಾ ಎಲೌ ದೇವಿ, ನಮಗೇನಪ್ಪಣೆ ಎಂದು ಜಗನ್ಮಾತೆಯನ್ನು ಕೇಳಿ ಕೊಳ್ಳಲು, ಪ್ರಕೃತಿಸ್ವರೂಪಳಾದ ಪಾರ್ವತಿಯು ಅವರನ್ನು ಕುರಿತು,

॥ ದೇವ್ಯುವಾಚ ॥

ಹೇ ಶಕ್ತಯೋಽಧುನಾ ದೇವ್ಯೋ ಯುಷ್ಮಾಭಿರ್ಮನ್ನಿದೇಶತಃ ।
ಪ್ರಲಯಶ್ಚಾತ್ರ ಕರ್ತವ್ಯೋ ನಾತ್ರ ಕಾರ್ಯಾ ವಿಚಾರಣಾ ॥ ೧೦ ॥

ದೇವಾಂಶ್ಚೈವ ಋಷೀಂಶ್ಚೈವ ಯಕ್ಷರಾಕ್ಷಸಕಾಂಸ್ತಥಾ ।
ಅಸ್ಮದೀಯಾನ್ಪರಾಂಶ್ಚೈವ ಸಖ್ಯೋ ಭಕ್ಷತ ವೈ ಹಠಾತ್ ॥ ೧೧ ॥

॥ ಬ್ರಹ್ಮೋವಾಚ ॥

ತದಾಜ್ಞಪ್ತಾಶ್ಚ ತಾ ಸ್ಸರ್ವಾಶ್ಶಕ್ತಯಃ ಕ್ರೋಧತತ್ಪರಾಃ ।
ದೇವಾದೀನಾಂ ಚ ಸರ್ವೇಷಾಂ ಸಂಹಾರಂ ಕರ್ತುಮುದ್ಯತಾಃ ॥ ೧೨ ॥

ಯಥಾ ಚ ತೃಣಸಂಹಾರಮನಲಃ ಕುರುತೇ ತಥಾ ।
ಏವಂ ತಾಶ್ಶಕ್ತಯಸ್ಸರ್ವಾಸ್ಸಂಹಾರಂ ಕರ್ತುಮುದ್ಯತಾಃ ॥ ೧೩ ॥

ಗಣಪೋ ವಾಥ ವಿಷ್ಣುರ್ವಾ ಬ್ರಹ್ಮಾ ವಾ ಶಂಕರಸ್ತಥಾ ।
ಇಂದ್ರೋ ವಾ ಯಕ್ಷರಾಜೋ ವಾ ಸ್ಕಂದೋ ವಾ ಸೂರ್ಯ ಏವ ವಾ ॥

ಸರ್ವೇಷಾಂ ಚೈವ ಸಂಹಾರಂ ಕುರ್ವಂತಿ ಸ್ಮ ನಿರಂತರಂ ।
ಯತ್ರ ಯತ್ರ ತು ದೃಶ್ಯೇತ ತತ್ರ ತತ್ರಾಪಿ ಶಕ್ತಯಃ ॥ ೧೫ ॥

---

೧೦-೧೧. ಎಲೈ ಶಕ್ತಿದೇವತೆಯರೇ, ನೀವೆಲ್ಲರೂ ಈಗ ನನ್ನ ಅಪ್ಪಣೆಯಂತೆ ಲೋಕದಲ್ಲಿರುವ ದೇವತೆಗಳನ್ನೂ, ಸಮಸ್ತ ಋಷಿಜನರನ್ನೂ, ಯಕ್ಷರಾಕ್ಷಸಜನರನ್ನೂ ನಮ್ಮಕಡೆಯ ಗಣಗಳನ್ನೂ ನಿರ್ದಯವಾಗಿ ನಾಶಮಾಡಿ ತಿಂದುಹಾಕಿಬಿಡಿ ಎಂದಪ್ಪಣೆ ಮಾಡಿದಳು.

೧೨-೧೩. ಬ್ರಹ್ಮನಿಂತೆಂದನು :—ದೇವಿಯ ಮಾತಿನಂತೆ ಸಮಸ್ತ ಶಕ್ತಿ ದೇವಿಯರು ಕೋಪಾವಿಷ್ಟರಾಗಿ ಬೆಂಕಿಯು ಹುಲ್ಲಿನರಾಶಿಯನ್ನು ಸುಡುವಂತೆ ಸಮಸ್ತ ರನ್ನೂ ನಾಶಮಾಡತೊಡಗಿದರು.

೧೪-೧೫. ಗಣಗಳ ಅಧಿಪತಿ ವಿಷ್ಣು, ಬ್ರಹ್ಮ, ಶಂಕರ, ಇಂದ್ರ, ಕುಬೇರ, ಸ್ಕಂದ, ಸೂರ್ಯ, ಇವರೇ ಮೊದಲಾದ ಸಮಸ್ತ ದೇವತೆಗಳನ್ನೂ ಸಹ ಲಕ್ಷಿಸದೆ ಶಕ್ತಿ ದೇವಿಯರು ಕಂಡಕಂಡಕಡೆ ಅವರನ್ನೆಲ್ಲಾ ಧ್ವಂಸಮಾಡುತ್ತಾ ಬಂದರು.

ಕರಾಲೀ ಕುಬ್ಜಕಾ ಖಂಜಾ ಲಂಬಶೀರ್ಷಾ ಹ್ಯನೇಕಶಃ ।
ಹಸ್ತೇ ಧೃತ್ವಾ ತು ದೇವಾಂಶ್ಚ ಮುಖೇ ಚೈವಾಕ್ಷಿಪಂಸ್ತಥಾ ॥ ೧೬ ॥

ತಂ ಸಂಹಾರಂ ತದಾ ದೃಷ್ಟ್ವಾ ಹರೋ ಬ್ರಹ್ಮಾ ತಥಾ ಹರಿಃ ।
ಇಂದ್ರಾದಯೋಽಖಿಲಾ ದೇವಾ ಗಣಾಶ್ಚ ಋಷಯಸ್ತಥಾ ॥ ೧೭ ॥

ಕಿಂ ಕರಿಷ್ಯತಿ ಸಾ ದೇವೀ ಸಂಹಾರಂ ವಾಪ್ಯಕಾಲತಃ ।
ಇತಿ ಸಂಶಯಮಾಪನ್ನಾ ಜೀವನಾಶಾ ಹತಾಭವತ್ ॥ ೧೮ ॥

ಸರ್ವೇ ಚ ಮಿಳಿತಾಶ್ಚೇಮೇ ಕಿಂ ಕರ್ತವ್ಯಂ ವಿಚಿಂತ್ಯತಾಂ ।
ಏವಂ ವಿಚಾರಯಂತಸ್ತೇ ತೂರ್ಣಮೂಚುಃ ಪರಸ್ಪರಂ ॥ ೧೯ ॥

ಯದಾ ಚ ಗಿರಿಜಾ ದೇವೀ ಪ್ರಸನ್ನಾ ಹಿ ಭವೇದಿಹ ।
ತದಾ ಚೈವ ಭವೇತ್ಸ್ವಾಸ್ಥ್ಯಂ ನಾನ್ಯಥಾ ಕೋಟಿಯತ್ನತಃ ॥ ೨೦ ॥

ಶಿವೋಽಪಿ ದುಃಖಮಾಪನ್ನೋ ಲೌಕಿಕೀಂ ಗತಿಮಾಶ್ರಿತಃ ।
ಮೋಹರ್ಯ ಸಕಲಾಂಸ್ತತ್ರ ನಾನಾಲೀಲಾವಿಶಾರದಃ ॥ ೨೧ ॥

---

೧೬-೧೮. ಕರಾಲೀ, ಕುಬ್ಜಕಾ, ಖಂಜಾ, ಲಂಬಶೀರ್ಷಾ ಮುಂತಾದ ಆ ದೇವಿಯರೆಲ್ಲರೂ ಕೆಲವು ದೇವತೆಗಳನ್ನು ಕೈಯ್ಯಿಂದಲೂ ಕೆಲವರನ್ನು ಬಾಯಿಂದಲೂ ಧ್ವಂಸಮಾಡಿ ನುಂಗಿಬಿಟ್ಟರು. ಇಂತಹ ಕ್ರೂರಸಂಹಾರವನ್ನು ವಿಷ್ಣುಬ್ರಹ್ಮಾದಿಗಳು ನೋಡಿ, ಈ ದೇವಿಯರು ನಮ್ಮನ್ನು ಏನುಮಾಡಿಬಿಡುವರೋ ಎಂದು ಕಳವಳಗೊಂಡರು.

೧೯-೨೦. ಕೊನೆಗೆ ದೇವತೆಗಳೆಲ್ಲರೂ ಒಟ್ಟಾಗಿ ಸೇರಿ ಮುಂದೇನುಮಾಡಬೇಕೆಂಬುದನ್ನು ಯೋಚಿಸಿ, ಈ ಕಷ್ಟವನ್ನು ದೂರಮಾಡಲು ದೇವಿಯೇ ನಮಗೆ ಶರಣು. ಮತ್ತಾರಿಂದಲೂ ಈ ಭಯವು ನಿವಾರಣೆಯಾಗುವುದಿಲ್ಲವೆಂದು ತೀರ್ಮಾನಿಸಿದರು.

೨೧-೨೨. ಆಗ ಶಂಕರನೂ ಸಹ ಸಾಮಾನ್ಯಮನುಷ್ಯನಂತೆ ದುಃಖಿಸತೊಡಗಿದನು. ಶಂಭುವು ಲೀಲಾಪುರುಷನಲ್ಲವೆ ? ಅದಲ್ಲದೆ ಸಮಸ್ತ ದೇವತೆಗಳ

ಸರ್ವೇಷಾಂ ಚೈವ ದೇವಾನಾಂ ಕಟಿರ್ಭಗ್ನಾ ಯದಾ ತದಾ ।
ಶಿವಾ ಕ್ರೋಧಮಯೀ ಸಾಕ್ಷಾದ್ಗಂತುಂ ನ ಪುರ ಉತ್ಸಹೇತ್ ॥ ೨೨ ॥

ಸ್ವೀಯೋ ವಾ ಪರಕೀಯೋ ವಾ ದೇವ್ಯೋ ವಾ ದಾನವೋಪಿ ಶಾ ।
ಗಣೋ ವಾಪಿ ಚ ದಿಕ್ಪಾಲೋ ಯಕ್ಷೋ ವಾ ಕಿನ್ನರೋ ಮುನಿಃ ॥ ೨೩ ॥

ವಿಷ್ಣುರ್ವಾಪಿ ತಥಾ ಬ್ರಹ್ಮಾ ಶಂಕರಶ್ಚ ತಥಾ ಪ್ರಭುಃ ।
ನ ಕಶ್ಚಿದ್ಗಿರಿಜಾಗ್ರೇ ಚ ಸ್ಥಾತುಂ ಶಕ್ತೋಽಭವನ್ಮುನೇ ॥ ೨೪ ॥

ಜಾಜ್ವಲ್ಯಮಾನಂ ತತ್ತೇಜಸ್ಸರ್ವತೋದಾಹಿ ತೇಽಖಿಲಾಃ ।
ದೃಷ್ಟ್ವಾ ಭೀತತರಾ ಆಸನ್ ಸರ್ವೇ ದೂರತರಂ ಸ್ಥಿತಾಃ ॥ ೨೫ ॥

ಏತಸ್ಮಿನ್ ಸಮಯೇ ತತ್ರ ನಾರದೋ ದಿವ್ಯದರ್ಶನಃ ।
ಆಗತಸ್ತ್ವಂ ಮುನೇ ದೇವಗಣಾನಾಂ ಸುಖಹೇತವೇ ॥ ೨೬ ॥

ಬ್ರಹ್ಮಾಣಂ ಮಾಂ ಭವಂ ವಿಷ್ಣುಂ ಶಂಕರಂ ಚ ಪ್ರಣಮ್ಯ ಸಃ ।
ಸಮಾಗತ್ಯ ಮಿಲಿತ್ವೋಚೇ ವಿಚಾರ್ಯ ಕಾರ್ಯಮೇವ ವಾ ॥ ೨೭ ॥

ಸರ್ವೇ ಸಂಮಂತ್ರಯಾಂ ಚಕ್ರುಸ್ತ್ವಯಾ ದೇವಾ ಮಹಾತ್ಮನಾ ।
ದುಃಖಶಾಂತಿಃ ಕಥಂ ಸ್ಯಾದ್ವೈ ಸಮೂಚುಸ್ತತ ಏವ ತೇ ॥ ೨೮ ॥

---

ಸೊಂಟವೂ ಯುದ್ಧದಲ್ಲಿ ಮುರಿದುಹೋಗಿರುವುದರಿಂದ ಕುಪಿತಳಾದ ದೇವಿಯ ಎದುರಿನಲ್ಲಿ ನಿಲ್ಲಲು ಯಾರಿಗೂ ಶಕ್ತಿಯಿರಲಿಲ್ಲ.

೨೩-೨೪. ಎಲೈ ನಾರದನೇ ಕೇಳು. ಕೋಪದಿಂದ ಉರಿಯುತ್ತಿರುವ ದೇವಿಯ ಎದುರಿನಲ್ಲಿ ಆಗ ದೇವೀಭಕ್ತನೇ ಆಗಲಿ, ದೇವದೂತನೇ ಆಗಲಿ, ಹರಿ, ಹರ, ಬ್ರಹ್ಮಾದಿಗಳೇ ಆಗಲಿ ಯಾರೂ ನಿಲ್ಲಲಾರದೇ ಹೋದರು.

೨೫-೨೬. ಅಂಥ ದೇವಿಯ ಭಯದಿಂದ ದೇವತೆಗಳೆಲ್ಲರೂ ದೂರದಲ್ಲಿ ನಿಂತಿರುವಾಗ ದಿವ್ಯರೂಪವುಳ್ಳ ನೀನು ಅಲ್ಲಿಗೆ ಬರಲು, ಅದರಿಂದ ದೇವತೆಗಳಿಗೆಲ್ಲಾ ಆಗ ಸಮಾಧಾನವಾಯಿತು.

೨೭-೩೧. ಆಮೇಲೆ ನೀನು ನಮ್ಮನ್ನು ವಂದಿಸಿ ನಮ್ಮೆಲ್ಲರೊಡನೆ ಕಲೆತು ಮುಂದೇನು ಮಾಡಬೇಕೆಂಬುದನ್ನು ಯೋಚಿಸಿದೆಯಷ್ಟೆ? ಆ ಸಮಯದಲ್ಲಿ ನಮಗೆ

ಯಾವಚ್ಚ ಗಿರಿಜಾ ದೇವೀ ಕೃಪಾಂ ನೈವ ಕರಿಷ್ಯತಿ ।
ತಾವನ್ನೈವಂ ಸುಖಂ ಸ್ಯಾದ್ವೈ ನಾತ್ರ ಕಾರ್ಯಾ ವಿಚಾರಣಾ ॥ ೨೯ ॥

ಋಷಯೋ ಹಿ ತ್ವದಾದ್ಯಾಶ್ಚ ಗತಾಸ್ತೇ ವೈ ಶಿವಾಂತಿಕಂ ।
ಸರ್ವೇ ಪ್ರಸಾದಯಾಮಾಸುಃ ಕ್ರೋಧಶಾಂತ್ಯೈ ತದಾ ಶಿವಾಂ ॥ ೩೦ ॥

ಪುನಃ ಪುನಃ ಪ್ರಣೇಮುಶ್ಚ ಸ್ತುತ್ವಾ ಸ್ತೋತ್ರೈರನೇಕಶಃ ।
ಸರ್ವೇ ಪ್ರಾಸಾದಯನ್ ಪ್ರೀತ್ಯಾ ಪ್ರೋಚುರ್ದೇವಗಣಾಜ್ಞಯಾ ॥ ೩೧ ॥

॥ ಸುರರ್ಷಯು ಊಚುಃ ॥

ಜಗದಂಬ ನಮಸ್ತುಭ್ಯಂ ಶಿವಾಯೈ ತೇ ನಮೋಽಸ್ತು ತೇ ।
ಚಂಡಿಕಾಯೈ ನಮಸ್ತುಭ್ಯಂ ಕಲ್ಯಾಣ್ಯೈ ತೇ ನಮೋಽಸ್ತು ತೇ ॥ ೩೨ ॥

ಆದಿಶಕ್ತಿಸ್ತ್ವಮೇವಾಂಬ ಸರ್ವಸೃಷ್ಟಿಕರೀ ಸದಾ ।
ತ್ವಮೇವ ಪಾಲಿನೀ ಶಕ್ತಿಸ್ತ್ವಮೇವ ಪ್ರಲಯಂಕರೀ ॥ ೩೩ ॥

ಪ್ರಸನ್ನಾ ಭವ ದೇವೇಶಿ ಶಾಂತಿಂ ಕುರು ನಮೋಽಸ್ತು ತೇ ।
ಸರ್ವಂ ಹಿ ವಿಕಲಂ ದೇವಿ ತ್ರಿಜಗತ್ತವ ಕೋಪತಃ ॥ ೩೪ ॥

---

ದುಃಖವು ಹೇಗೆ ಶಮನವಾಗುವುದು ಎಂದು ಚಿಂತಿಸುತ್ತಿರಲು, ದೇವತೆಗಳೆಲ್ಲಾ ಸೇರಿ ಪಾರ್ವತಿಯು ಪ್ರಸನ್ನಳಾಗುವವರೆಗೂ ನಮಗೆ ಈ ಭಯವು ತಪ್ಪುವುದಿಲ್ಲವೆಂದು ತೀರ್ಮಾನಿಸಿದಮೇಲೆ ಸಕಲ ಮುನಿಗಳೊಡನೆ ಕೂಡಿ ದೇವಿಗೆ ಅನೇಕ ಪ್ರಣಾಮಗಳನ್ನು ಮಾಡಿ ವಿಧವಿಧವಾಗಿ ಸ್ತುತಿಸಿ ದೇವಿಯನ್ನು ಹೀಗೆ ಪ್ರಾರ್ಥಿಸಿದರು.

೩೨-೩೩. ಓ ಲೋಕಮಾತೆಯೇ, ಚಂಡಿಯೇ, ನಿನಗೆ ನಮಸ್ಕಾರವು. ಸರ್ವಮಂಗಳೆಯೇ, ನಿನಗೆ ವಂದನೆಯು. ನೀನು ಆದಿಶಕ್ತಿಯು. ಸರ್ವ ಲೋಕಗಳನ್ನೂ ಸೃಷ್ಟಿಸುವವಳು. ಅವುಗಳನ್ನು ಪಾಲಿಸುವವಳು. ಕೊನೆಗೆ ನಾಶಮಾಡುವವಳೂ ನೀನೇ.

೩೪. ಎಲೌ ದೇವಿ, ನೀನು ಕೋಪಗೊಂಡಿರುವುದರಿಂದ ಮೂರು ಲೋಕಗಳೂ ನಾಶವನ್ನೈದುವುವು. ಆದುದರಿಂದ ನಮ್ಮಮೇಲೆ ಅನುಗ್ರಹಮಾಡಿ ಪ್ರಸನ್ನಳಾಗು. ಲೋಕವನ್ನುದ್ಧಾರಮಾಡು. ಇಗೋ ನಿನಗೆ ಅನೇಕ ನಮಸ್ಕಾರಗಳು ಎಂದು ಸ್ತೋತ್ರಮಾಡಿದರು.

॥ ಬ್ರಹ್ಮೋವಾಚ ॥

ಏವಂ ಸ್ತುತಾ ಪರಾ ದೇವೀ ಋಷಿಭಿಶ್ಚ ತ್ವದಾದಿಭಿಃ ।
ಕ್ರುದ್ಧದೃಷ್ಟ್ಯಾ ತದಾ ತಾಂಶ್ಚ ಕಿಂಚಿನ್ನೋವಾಚ ಸಾ ಶಿವಾ ॥ ೩೫ ॥

ತದಾ ಚ ಋಷಯಸ್ಸರ್ವೇ ನತ್ವಾ ತಚ್ಚರಣಾಂಬುಜಂ ।
ಪುನರೂಚುಶ್ಶಿವಾಂ ಭಕ್ತ್ಯಾ ಕೃತಾಂಜಲಿಪುಟಾಶ್ಶನೈಃ ॥ ೩೬ ॥

॥ ಋಷಯ ಊಚುಃ ॥

ಕ್ಷಮ್ಯತಾಂ ಕ್ಷಮ್ಯತಾಂ ದೇವಿ ಸಂಹಾರೋ ಜಾಯತೇಽಧುನಾ ।
ತವ ಸ್ವಾಮೀ ಸ್ಥಿತಶ್ಚಾತ್ರ ಪಶ್ಯ ಪಶ್ಯ ತಮಂಬಿಕೇ ॥ ೩೭ ॥

ವಯಂ ತೇ ಚ ಇಮೇ ದೇವಾ ವಿಷ್ಣುಬ್ರಹ್ಮಾದಯಸ್ತಥಾ ।
ಪ್ರಜಾಶ್ಚ ಭವದೀಯಾಶ್ಚ ಕೃತಾಂಜಲಿಪುಟಾಃ ಸ್ಥಿತಾಃ ॥ ೩೮ ॥

ಕ್ಷಂತವ್ಯಶ್ಚಾಪರಾಧೋ ವೈ ಸರ್ವೇಷಾಂ ಪರಮೇಶ್ವರಿ ।
ಸರ್ವೇಹಿ ವಿಕಲಾಶ್ಚಾದ್ಯ ಶಾಂತಿಂ ತೇಷಾಂ ಶಿವೇ ಕುರು ॥ ೩೯ ॥

॥ ಬ್ರಹ್ಮೋವಚಾ ॥

ಇತ್ಯುಕ್ತ್ವಾ ಋಷಯಸ್ಸರ್ವೇ ಸುದೀನತರಮಾಕುಲಾಃ ।
ಸಂತಸ್ಥಿರೇ ಚಂಡಿಕಾಗ್ರೇ ಕೃತಾಂಜಲಿಪುಟಾಸ್ತದಾ ॥ ೪೦ ॥

---

೩೫-೩೬. ಹೀಗೆ ದೇವಋಷಿಗಳೆಲ್ಲರೂ ದೇವಿಯನ್ನು ಪ್ರಾರ್ಥಿಸಲು ಪಾರ್ವತಿಯು ತನ್ನ ಮನಸ್ಸಿನಲ್ಲಿದ್ದ ಕೋಪದಿಂದ ಯಾವ ಉತ್ತರವನ್ನೂ ಕೊಡದೆ ಸುಮ್ಮನಿದ್ದಳು. ಅದನ್ನು ನೋಡಿ ದೇವರ್ಷಿಗಳು ಪುನಃ ದೇವಿಯ ಪಾದವನ್ನು ಸ್ಮರಿಸುತ್ತಾ ಅಂಜಲಿಬದ್ಧರಾಗಿ ಹೀಗೆ ಪ್ರಾರ್ಥಿಸಿದರು.

೩೭-೩೯. ಎಲೌ ದೇವಿ, ನಮ್ಮ ತಪ್ಪನ್ನು ಕ್ಷಮಿಸು. ಈಗ ನೀನು ಸಂಹರಿಸಬೇಕೆಂದಿರುವವರ ಗುಂಪಿನಲ್ಲಿ ನಿನ್ನ ಪತಿಯಾದ ಶಂಕರನೂ ಇರುವನು. ಅಲ್ಲದೆ ನಾವೂ ಈ ಹರಿ, ಬ್ರಹ್ಮ, ಇಂದ್ರಾದಿಗಳೂ ಸಹ ನಿಮ್ಮ ಮಕ್ಕಳಲ್ಲವೇ ? ಇಷ್ಟು ನಿಮ್ಮ ಸಂಸಾರಕ್ಕೆ ಸೇರಿರುವಂತಹವರನ್ನು ಕೋಪದಿಂದ ನಾಶಮಾಡುವುದುಚಿತವೇ ? ತಾಯಿಯೇ, ಕ್ಷಮಿಸು. ನಮಗೆಲ್ಲರಿಗೂ ಶಾಂತಿಯನ್ನು ನೀಡು.

೪೦-೪೧. ಹೀಗೆ ಋಷಿಗಳೆಲ್ಲರೂ ದೈನ್ಯದಿಂದ ಪ್ರಾರ್ಥಿಸಿ ದೇವಿಯಮುಂದೆ

ಏವಂ ಶ್ರುತ್ವಾ ವಚಸ್ತೇಷಾಂ ಪ್ರಸನ್ನಾ ಚಂಡಿಕಾಭವತ್ ।
ಪ್ರತ್ಯುವಾಚ ಋಷೀಂಸ್ತಾನ್ವೈ ಕರುಣಾವಿಷ್ಟಮಾನಸಾ ॥ ೪೧ ॥

॥ ದೇವ್ಯುವಾಚ ॥

ಮತ್ಪುತ್ರೋ ಯದಿ ಜೀವೇತ ತದಾ ಸಂಹರಣಂ ನ ಹಿ ।
ಯಥಾ ಹಿ ಭವತಾಂ ಮಧ್ಯೇ ಪೂಜ್ಯೋಽಯಂ ಚ ಭವಿಷ್ಯತಿ ॥ ೪೨ ॥

ಸರ್ವಾಧ್ಯಕ್ಷೋ ಭವೇದದ್ಯ ಯೂಯಂ ಕುರುತ ತದ್ಯದಿ ।
ತದಾ ಶಾಂತಿರ್ಭವೇಲ್ಲೋಕೇ ನಾನ್ಯಥಾ ಸುಖಮಾಪ್ಸ್ಯಥ ॥ ೪೩ ॥

ಇತ್ಯುಕ್ತಾಸ್ತೇ ತದಾ ಸರ್ವೇ ಋಷಯೋ ಯುಷ್ಮದಾದಯಃ ।
ತೇಭ್ಯೋ ದೇವೇಭ್ಯ ಆಗತ್ಯ ಸರ್ವಂ ವೃತ್ತಂ ನ್ಯವೇದಯನ್ ॥ ೪೪ ॥

ತೇ ಚ ಸರ್ವೇ ತಥಾ ಶ್ರುತ್ವಾ ಶಂಕರಾಯ ನ್ಯವೇದಯನ್ ।
ನತ್ವಾ ಪ್ರಾಂಜಲಯೋ ದೀನಾಃ ಶಕ್ರಪ್ರಭೃತಯಸ್ಸುರಾಃ ॥ ೪೫ ॥

ಪ್ರೋವಾಚೇತಿ ಸುರಾನ್ ಶ್ರುತ್ವಾ ಶಿವಶ್ಚಾಪಿ ತಥಾ ಪುನಃ ।
ಕರ್ತವ್ಯಂ ಚ ತಥಾ ಸರ್ವಲೋಕಸ್ವಾಸ್ಥ್ಯಂ ಭವೇದಿಹ ॥ ೪೬ ॥

---

ಭಕ್ತಿನಮ್ರರಾಗಿ ನಿಂತಿರಲು, ದೇವಿಯು ಸ್ವಲ್ಪಮಟ್ಟಿಗೆ ಪ್ರಸನ್ನಳಾಗಿ ದಯೆಯಿಂದ ಅವನನ್ನು ಕುರಿತು,

೪೨-೪೩. ಬ್ರಹ್ಮರ್ಷಿಗಳೇ, ನನ್ನ ಈ ಸಂಹಾರಕೃತ್ಯವು ನಿಲ್ಲಬೇಕಾದರೆ ಮೊದಲು ನನ್ನ ಮಗನು ಬದುಕಬೇಕು. ಅವನೇ ಮುಂದೆ ನಿಮ್ಮೆಲ್ಲರಿಗೂ ಅಧ್ಯಕ್ಷನಾಗಬೇಕು. ಅಲ್ಲಿಯವರೆಗೂ ನೀವು ನನ್ನಿಂದ ಶಾಂತಿಯನ್ನು ಪಡೆಯಲಾರಿರಿ. ನಿಮಗೆ ಸುಖವು ದೊರೆಯಲಾರದು ಎಂದಳು.

೪೪-೪೫. ದೇವಿಯು ಹೀಗೆ ಹೇಳಲು ಅದನ್ನು ನಾರದಾದಿ ಋಷಿಗಳೆಲ್ಲರೂ ದೇವತೆಗಳ ಸಮೀಪಕ್ಕೆ ಬಂದು ತಿಳಿಸಿದರು. ಆ ದೇವತೆಗಳೂ ಋಷಿಗಳೂ ಶಂಕರನಲ್ಲಿಗೆ ಹೋಗಿ ದೀನವದನರಾಗಿ ದೇವಿಯ ಮನೋಭಿಪ್ರಾಯವನ್ನು ವಿವರಿಸಿದರು.

೪೬-೪೭. ಶಂಕರನು ಈ ಮಾತನ್ನು ಕೇಳಿ ಹೇಗಾದರೂ ಈಗ ಲೋಕಗಳನ್ನು ಬದುಕಿಸಬೇಕೆಂದು ದೃಢಮಾಡಿಕೊಂಡು ದೇವತೆಗಳನ್ನು ಕರೆದು, ನೀವು

ಉತ್ತರಸ್ಯಾಂ ಪುನರ್ಯಾಯಾತ್ಪ್ರಥಮಂ ಯೋ ಮಿಲೇದಿಹ ।
ತಚ್ಛಿರಶ್ಚ ಸಮಾಹೃತ್ಯ ಯೋಜನೀಯಂ ಕಲೇವರೇ ॥ ೪೭ ॥

॥ ಬ್ರಹ್ಮೋವಾಚ ॥

ತತಸ್ತೈಸ್ತತ್ಕೃತಂ ಸರ್ವಂ ಶಿವಾಜ್ಞಾಪರಿಪಾಲಕೈಃ ।
ಕಲೇವರಂ ಸಮಾನೀಯ ಪ್ರಕ್ಷಾಳ್ಯ ವಿಧಿವಚ್ಚ ತತ್ ॥ ೪೮ ॥

ಪೂಜಯಿತ್ವಾ ಪುನಸ್ತೇ ವೈ ಗತಾಶ್ಚೋದಙ್ಮುಖಾಸ್ತದಾ ।
ಪ್ರಥಮಂ ಮಿಲಿತಸ್ತತ್ರ ಹಸ್ತೀ ಚಾಪ್ಯೇಕದಂತಕಃ ॥ ೪೯ ॥

ತಚ್ಛಿರಶ್ಚ ತದಾ ನೀತ್ವಾ ತತ್ರ ತೇಽಯೋಜಯನ್ ಧ್ರುವಂ ।
ಸಂಯೋಜ್ಯ ದೇವತಾಸ್ಸರ್ವಾಃ ಶಿವಂ ವಿಷ್ಣುಂ ವಿಧಿಂ ತದಾ ॥ ೫೦ ॥

ಪ್ರಣಮ್ಯ ವಚನಂ ಪ್ರೋಚುರ್ಭವಯುಕ್ತಂ ಕೃತಂ ಚ ನಃ ।
ಅನಂತರಂ ಚ ತತ್ಕಾರ್ಯಂ ಭವತಾದ್ಯವಶೇಷಿತಂ ॥ ೫೧ ॥

---

ಈಗಲೇ ಉತ್ತರದಿಕ್ಕಿಗೆ ಪ್ರಯಾಣಮಾಡಿರಿ. ಮೊದಲು ನೀವು ಯಾವ ಪ್ರಾಣಿಯನ್ನು ಕಾಣುವಿರೋ ಅದರ ತಲೆಯನ್ನು ಕತ್ತರಿಸಿ ತಂದು ಆ ಮೃತದೇಹಕ್ಕೆ ಸೇರಿಸಿರಿ ಎಂದು ಅಪ್ಪಣೆಮಾಡಿದನು.

೪೮-೫೧. ಅದರಂತೆ ಶಿವಾಜ್ಞಾಪಾಲಕರಾದ ಸಮಸ್ತ ದೇವತೆಗಳೂ ಉತ್ತರಕ್ಕೆ ಹೊರಟರು. ಅಲ್ಲಿ ಒಂದೇ ದಂತವುಳ್ಳ ಆನೆಯೊಂದು ಸಿಕ್ಕಿತು. ಅದರ ತಲೆಯನ್ನು ಕಡಿದುತಂದು ಪಾರ್ವತೀಪುತ್ರನ ಕಳೇವರವನ್ನು ತೊಳೆದು ಅದಕ್ಕೆ ಜೋಡಿಸಿ ವಿಧಿವತ್ತಾಗಿ ಅರ್ಚನೆಮಾಡಿದರು. ಆಮೇಲೆ ಹರಿಹರಬ್ರಹ್ಮರ ಬಳಿಗೆ ಬಂದು, ಸ್ವಾಮಿಯೆ, ನಿನ್ನ ಅಪ್ಪಣೆಯಂತೆ ಒಂದು ಆನೆಯ ಶಿರಸ್ಸನ್ನು ತಂದು ಜೋಡಿಸಿರುವೆವು. ಮುಂದಿನ ಕಾರ್ಯಭಾಗ ನಿನ್ನದಾಗಿದೆ ಎಂದರು.

॥ ಬ್ರಹ್ಮೋವಾಚ ॥

ತತಸ್ತೇ ತು ವಿರೇಜುಶ್ಚ ಪಾರ್ಷದಾಶ್ಚ ಸುರಾಃ ಸುಖಂ ।
ಅಥ ತದ್ವಚನಂ ಶ್ರುತ್ವಾ ಶಿವೋಕ್ತಂ ಪರ್ಯುಪಾಲಯನ್ ॥ ೫೨ ॥

ಊಚುಸ್ತೇ ಚ ತದಾ ತತ್ರ ಬ್ರಹ್ಮವಿಷ್ಣುಸುರಾಸ್ತಥಾ ।
ಪ್ರಣಮ್ಯೇಶಂ ಶಿವಂ ದೇವಂ ಸ್ವಪ್ರಭುಂ ಗುಣವರ್ಜಿತಂ ॥ ೫೩ ॥

ಯಸ್ಮಾತ್ತ್ವತ್ತೇಜಸಸ್ಸರ್ವೇ ವಯಂ ಜಾತಾ ಮಹಾತ್ಮನಃ ।
ತ್ವತ್ತೇಜಸ್ತತ್ಸಮಾಯಾತು ವೇದಮಂತ್ರಾಭಿಯೋಗತಃ ॥ ೫೪ ॥

ಇತ್ಯೇವಮಭಿಮಂತ್ರೇಣ ಮಂತ್ರಿತಂ ಜಲಮುತ್ತಮಂ ।
ಸ್ಮೃತ್ವಾ ಶಿವಂ ಸಮೇತಾಸ್ತೇ ಚಿಕ್ಷಿಪುಸ್ತತ್ಕಲೇವರೇ ॥ ೫೫ ॥

ತಜ್ಜಲಸ್ಪರ್ಶಮಾತ್ರೇಣ ಚಿದ್ಯುತೋ ಜೀವಿತೋ ದ್ರುತಂ ।
ತದೋತ್ತಸ್ಥೌ ಸುಪ್ತ ಇವ ಸ ಬಾಲಶ್ಚ ಶಿವೇಚ್ಛಯಾ ॥ ೫೬ ॥

ಸುಭಗಸ್ಸುಂದರತರೋ ಗಜವಕ್ತ್ರಸ್ಸುರಕ್ತಕಃ ।
ಪ್ರಸನ್ನವದನಶ್ಚಾತಿ ಸುಪ್ರಭೋ ಲಲಿತಾಕೃತಿಃ ॥ ೫೭ ॥

---

ಫ೨-೫೩. ಆಗ ಅಲ್ಲಿ ನೆರದಿದ್ದ ದೇವತೆಗಳೂ ಗಣಗಳೂ ದೈತ್ಯರೂ ಶಿವಾಜ್ಞೆಯನ್ನು ನೆರವೇರಿಸಿದ್ದಕ್ಕಾಗಿ ಸಂತೋಷಪಟ್ಟರು. ಬಳಿಕ ವಿಷ್ಣುಬ್ರಹ್ಮಾದಿದೇವತೆಗಳು ನಿರ್ಗುಣಸ್ವರೂಪನೂ ತಮಗೆ ಸ್ವಾಮಿಯೂ ಆದ ಶಂಕರನಿಗೆ ನಮಸ್ಕರಿಸಿ ಹೀಗೆ ಕೇಳಿಕೊಂಡರು.

೫೪-೫೫. ಎಲೈ ಪರಶಿವನೇ, ನಿನ್ನ ತೇಜಸ್ಸಿನಿಂದಲೇ ನಾವೆಲ್ಲರೂ ಜನಿಸಿದ್ದೇವೆ. ಈಗಲೂ ನಮ್ಮ ಮಂತ್ರಪ್ರಭಾವದಿಂದ ಅದೇ ತೇಜಸ್ಸು ಈ ಜಲದಲ್ಲಿ ಬಂದು ನಿಲ್ಲಲಿ ಎಂದು ಪ್ರಾರ್ಥಿಸಿ ಆ ಅಭಿಮಂತ್ರಿತವಾದ ನೀರನ್ನು ಆ ಮೃತದೇಹದಮೇಲೆ ಶಿವಸಹಿತರಾಗಿ ಸರ್ವರೂ ಪ್ರೋಕ್ಷಿಸಿದರು.

೫೬-೫೭. ಆ ಜಲಪ್ರೋಕ್ಷಣೆಯಾದೊಡನೆಯೇ ನಿದ್ರಿಸುವವನು ಎದ್ದು ಕುಳಿತಂತೆ ಆ ಮೃತದೇಹವು ಚಿಚ್ಛಕ್ತಿಯೊಡನೆ ಕೂಡಿ ಶಿವೇಚ್ಛೆಯಂತೆ ಎದ್ದು ಕುಳಿತಿತು. ಆಗ ಆ ಬಾಲಕನು ಗಜಮುಖನಾಗಿಯೂ ಸುಂದರಗಾತ್ರನಾಗಿಯೂ ಅತಿ ತೇಜಸ್ವಿಯೂ ಆಗಿ ಕಂಗೊಳಿಸಿದನು.

ತಂ ದೃಷ್ಟ್ವಾ ಜೀವಿತಂ ಬಾಲಂ ಶಿವಾಪುತ್ರಂ ಮುನೀಶ್ವರ ।
ಸರ್ವೇ ಮುಮುದಿರೇ ತತ್ರ ಸರ್ವಂ ದುಃಖಂ ಕ್ಷಯಂ ಗತಂ　॥ ೫೮ ॥

ದೇವ್ಯೈ ಸಂದರ್ಶಯಾಮಾಸುಃ ಸರ್ವೇ ಹರ್ಷಸಮನ್ವಿತಾಃ ।
ಜೀವಿತಂ ತನಯಂ ದೃಷ್ಟ್ವಾ ದೇವೀ ಹೃಷ್ಟತರಾಭವತ್　॥ ೫೯ ॥

ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಕುಮಾರಖಂಡೇ
ಗಣೇಶಜೀವನವರ್ಣನಂ ನಾಮ ಸಪ್ತದಶೋಽಧ್ಯಾಯಃ

---

೫೮-೫೯. ಹಾಗೆ ಬದುಕಿನಿಂತ ಬಾಲಕನನ್ನು ಸಮಸ್ತ ದೇವತೆಗಳೂ ದೇವಿಗೆ ತೋರಿಸಿದರು. ಮತ್ತು ತಮ್ಮ ದುಃಖವನ್ನು ಸಂಪೂರ್ಣವಾಗಿ ಮರೆತುಬಿಟ್ಟರು. ಎಲ್ಲರಿಗೂ ಹರ್ಷವುಂಟಾಯಿತು. ಇದನ್ನು ಕಂಡು ದೇವಿಯು ಸಂತುಷ್ಟಳಾಗಿ ದೇವತೆಗಳನ್ನು ಅನುಗ್ರಹಿಸಿ ಬೀಳ್ಕೊಟ್ಟು ಕಳುಹಿಸಿದಳು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ರುದ್ರಸಂಹಿತೆಯಲ್ಲಿ ಕುಮಾರಖಂಡದಲ್ಲಿ
ಗಣೇಶಜೀವನವೆಂಬ ಹದಿನೇಳನೇ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಕುಮಾರಖಂಡೇ

## ಅಷ್ಟಾದಶೋಽಧ್ಯಾಯಃ

---

॥ ನಾರದ ಉವಾಚ ॥

ಜೀವಿತೇ ಗಿರಿಜಾಪುತ್ರೇ ದೇವ್ಯಾ ದೃಷ್ಟೇ ಪ್ರಜೇಶ್ವರ ।
ತತಃ ಕಿಮಭವತ್ತತ್ರ ಕೃಪಯಾ ತದ್ವದಾಧುನಾ ॥ ೧ ॥

॥ ಬ್ರಹ್ಮೋವಾಚ ॥

ಜೀವಿತೇ ಗಿರಿಜಾಪುತ್ರೇ ದೇವ್ಯಾ ದೃಷ್ಟೇ ಮುನೀಶ್ವರ ।
ಯಜ್ಜಾತಂ ತಚ್ಛೃಣುಷ್ವಾದ್ಯ ವಚ್ಮಿ ತೇ ಮಹದುತ್ಸವಂ ॥ ೨ ॥

---

## ಹದಿನೆಂಟನೆಯ ಅಧ್ಯಾಯವು.

೧. ಮತ್ತೆ ನಾರದಮಹರ್ಷಿಯು ಬ್ರಹ್ಮನನ್ನು ಕುರಿತು, ಎಲೈ ಬ್ರಹ್ಮನೇ, ಗಿರಿಜಾಪುತ್ರನಾದ ಗಣಪತಿಯು ಬದುಕಿದಮೇಲೆ, ದೇವಿಯು ಮುಂದೆ ಏನು ಮಾಡಿದಳು ? ದಯವಿಟ್ಟು ಅದನ್ನು ವಿವರಿಸಬೇಕೆನ್ನಲು,

೨. ಬ್ರಹ್ಮನಿಂತೆಂದನು :—ಎಲೈ ನಾರದನೇ ಕೇಳು. ಗಿರಿಜಾಪುತ್ರನು ಬದುಕಿದಮೇಲೆ ದೇವಿಯು ನೋಡಿ ತುಂಬ ಸಂತೋಷಪಟ್ಟಳು. ಆಗ ನಡೆದ ವಿಷಯವನ್ನು ವಿವರಿಸುವೆನು ಕೇಳು.

ಜೀವಿತಸ್ಸ ಶಿವಾಪುತ್ರೋ ನಿರ್ವ್ಯಗ್ರೋ ವಿಕೃತೋ ವಸೇ ।
ಅಭಿಷಿಕ್ತಸ್ತದಾ ದೇವೈರ್ಗಣಾಧ್ಯಕ್ಷೈರ್ಗಜಾನನಃ ॥ ೩ ॥

ದೃಷ್ಟ್ವಾ ಸ್ವತನಯಂ ದೇವೀ ಶಿವಾ ಹರ್ಷಸಮನ್ವಿತಾ ।
ಗೃಹೀತ್ವಾ ಬಾಲಕಂ ದೋರ್ಭ್ಯಾಂ ಪ್ರಮುದಾ ಪರಿಷಸ್ವಜೇ ॥ ೪ ॥

ವಸ್ತ್ರಾಣಿ ವಿವಿಧಾನೀಹ ನಾನಾಲಂಕರಣಾನಿ ಚ ।
ದದೌ ಪ್ರೀತ್ಯಾ ಗಣೇಶಾಯ ಸ್ವಪುತ್ರಾಯ ಮುದಾಂಬಿಕಾ ॥ ೫ ॥

ಪೂಜಯಿತ್ವಾ ತಯಾ ದೇವ್ಯಾ ಸಿದ್ಧಿಭಿಶ್ಚಾಪ್ಯನೇಕಶಃ ।
ಕರೇಣ ಸ್ಪರ್ಶಿತಸ್ಸೋಽಥ ಸರ್ವದುಃಖಹರೇಣ ವೈ ॥ ೬ ॥

ಪೂಜಯಿತ್ವಾ ಸುತಂ ದೇವೀ ಮುಖಮಾಚುಂಬ್ಯ ಶಾಂಕರೀ ।
ವರಾನ್ ದದೌ ತದಾ ಪ್ರೀತ್ಯಾ ಜಾತಸ್ತ್ವಂ ದುಃಖಿತೋಽಧುನಾ ॥ ೭ ॥

---

೩. ಪಾರ್ವತಿಯ ಪುತ್ರನು ಯಾವ ವಿಕಾರವೂ ಇಲ್ಲದೆ ಜೀವಿತನಾದಮೇಲೆ, ಗಣನಾಯಕರಾದ ದೇವತೆಗಳೆಲ್ಲರೂ ಒಟ್ಟುಗೂಡಿ, ಗಜಾನನನಿಗೆ ಸೇನಾಧಿಪತ್ಯವನ್ನು ಅರ್ಪಿಸಿದರು.

೪. ಆಗ ಪಾರ್ವತಿಯು ತನ್ನ ಮಗನು ಸೇನಾಪತಿಯಾದುದನ್ನು ನೋಡಿ ಸಂತೋಷಪಟ್ಟು ಬಾಲಕನನ್ನು ಪ್ರೀತಿಯಿಂದ ಆಲಂಗಿಸಿಕೊಂಡಳು.

೫. ಅಲ್ಲದೆ ಮಗನ ಮೇಲಿನ ಪ್ರೀತಿಯಿಂದ ನಾನಾವಿಧವಾದ ವಸ್ತ್ರಾಭರಣಗಳನನ್ನ ತರಿಸಿ ಗಜಾನನನನ್ನು ಅಲಂಕರಿಸಿದಳು.

೬. ಅಣಿಮಾದಿ ಸಿದ್ಧಿಗಳೂ ಸಹ ದೇವಿಯ ಜೊತೆಯಲ್ಲಿಯೇ ಆ ಗಜಾನನನನ್ನು ಪೂಜಿಸಿದರು. ಆಮೇಲೆ ದೇವಿಯು ಸರ್ವದುಃಖನಿವಾರಕವಾದ ತನ್ನ ಕೈಯಿಂದ ಮಗನನ್ನು ಸ್ಪರ್ಶಮಾಡಿದಳು.

೭. ಹಾಗೆಯೇ ಮಗನಿಗೆ ಪ್ರೀತಿಯಿಂದ ಮುದ್ದಿಟ್ಟು ದುಃಖದಿಂದ ಪಾರಾಗಿ ಪುನಃ ಬದುಕಿದ್ದಕ್ಕಾಗಿ ಸಂತೋಷಗೊಂಡು ಅನೇಕ ವರಗಳನ್ನು ಅನುಗ್ರಹಿಸಿದಳು.

ಧನ್ಯೋಽಸಿ ಕೃತಕೃತ್ಯೋಽಸಿ ಪೂರ್ವಪೂಜ್ಯೋ ಭವಾಧುನಾ ।
ಸರ್ವೇಷಾಮಮರಾಣಾಂ ವೈ ಸರ್ವದಾ ದುಃಖವರ್ಜಿತಃ ॥ ೮ ॥

ಆನನೇ ತವ ಸಿಂದೂರಂ ದೃಶ್ಯತೇ ಸಾಂಪ್ರತಂ ಯದಿ ।
ತಸ್ಮಾತ್ತ್ವಂ ಪೂಜನೀಯೋಽಸಿ ಸಿಂದೂರೇಣ ಸದಾ ನರೈಃ ॥ ೯ ॥

ಪುಷ್ಪೈರ್ವಾ ಚಂದನೈರ್ವಾಪಿ ಗಂಧೇನೈವ ಶುಭೇನ ಚ ।
ನೈವೇದ್ಯೇನ ಸುರಮ್ಯೇಣ ನೀರಾಜೇನ ವಿಧಾನತಃ ॥ ೧೦ ॥

ತಾಂಬೂಲೈರಥ ದಾನೈಶ್ಚ ತಥಾ ಪ್ರಕ್ರಮಣೈರಪಿ ।
ನಮಸ್ಕಾರವಿಧಾನೇನ ಪೂಜಾಂ ಯಸ್ತೇ ವಿಧಾಸ್ಯತಿ ॥ ೧೧ ॥

ತಸ್ಯ ವೈ ಸಕಲಾ ಸಿದ್ಧಿರ್ಭವಿಷ್ಯತಿ ನ ಸಂಶಯಃ ।
ವಿಘ್ನಾನ್ಯನೇಕರೂಪಾಣಿ ಕ್ಷಯಂ ಯಾಸ್ಯಂತ್ಯಸಂಶಯಂ ॥ ೧೨ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ಚ ತದಾ ದೇವೀ ಸ್ವಪುತ್ರಂ ತಂ ಮಹೇಶ್ವರೀ ।
ನಾನಾವಸ್ತುಭಿರುತ್ಕೃಷ್ಟಂ ಪುನರಭ್ಯರ್ಚಯತ್ತಥಾ ॥ ೧೩ ॥

---

೮. ಎಲೈ ಗಜಾನನನೇ, ನೀನೇ ಧನ್ಯನು, ಕೃತಾರ್ಥನು. ಸಮಸ್ತ ದೇವತೆಗಳೂ ತಮ್ಮ ಕಾರ್ಯಾರಂಭದಲ್ಲಿ ಮೊದಲು ನಿನ್ನನ್ನು ಪೂಜಿಸಲಿ. ನೀನು ಸರ್ವರಿಗೂ ದುಃಖನಾಶಕನಾಗಿರು.

೯. ನಿನ್ನ ಮುಖದಲ್ಲಿ ಈಗ ಚಂದ್ರವು (ಸಿಂದೂರವು) ಸ್ಪಷ್ಟವಾಗಿ ಕಂಡು ಬರುತ್ತಿದೆ. ಆದ್ದರಿಂದ ಸಮಸ್ತ ಮಾನವರು ನಿನ್ನನ್ನು ಸಿಂದೂರದಿಂದಲೇ ಪೂಜಿಸುತ್ತಿರಲಿ.

೧೧-೧೨. ಯಾರು ನಿನ್ನನ್ನು ಹೂವು, ಗಂಧ, ಚಂದನ, ರುಚಿಕರವಾದ ನೈವೇದ್ಯಾದಿಗಳು, ನೀರಾಜನ, ತಾಂಬೂಲ ಮುಂತಾದ ಪೂಜಾದ್ರವ್ಯಗಳಿಂದ ಅರ್ಚಿಸಿ, ನಮಸ್ಕಾರಾದಿಗಳಿಂದ ತೃಪ್ತಿಪಡಿಸುವರೋ ಅವರಿಗೆ ಸಕಲೇಷ್ಟಾರ್ಥಗಳೂ ಸಿದ್ಧಿಸಲಿ. ಸಮಸ್ತ ವಿಘ್ನಗಳೂ ಪರಿಹಾರವಾಗಲಿ. ಇದೇ ನನ್ನ ನಿಶ್ಚಿತವಾದ ವರಗಳು ಎಂದಳು.

೧೩. ಹೀಗೆ ಪಾರ್ವತಿದೇವಿಯು ವರಪ್ರದಾನಮಾಡಿ ಉತ್ಕೃಷ್ಟವಾದ ಅನೇಕ ವಸ್ತುಗಳನ್ನು ಕೊಟ್ಟು ಅವನನ್ನು ಸಂತೋಷಪಡಿಸಿದಳು.

ತತಃ ಸ್ವಾಸ್ಥ್ಯಂ ಚ ದೇವಾನಾಂ ಗಣಾನಾಂ ಚ ವಿಶೇಷತಃ ।
ಗಿರಿಜಾಕೃಪಯಾ ವಿಪ್ರ ಜಾತಂ ತತ್ಕ್ಷಣಮಾತ್ರತಃ ॥ ೧೪ ॥

ಏತಸ್ಮಿಂಶ್ಚ ಕ್ಷಣೇ ದೇವಾ ವಾಸವಾದ್ಯಾಃ ಶಿವಂ ಮುದಾ ।
ಸ್ತುತ್ವಾ ಪ್ರಸಾದ್ಯ ತಂ ದೇವಂ ಭಕ್ತ್ಯಾ ನಿನ್ಯುಃ ಶಿವಾಂತಿಕಂ ॥ ೧೫ ॥

ಸಂಸಾದ್ಯ ಗಿರಿಶಂ ಪಶ್ಚಾದುತ್ಸಂಗೇ ಸಂನ್ಯವೇಶಯನ್ ।
ಬಾಲಕಂ ತಂ ಮಹೇಶಾನ್ಯಾಸ್ತ್ರಿಜಗತ್ಸುಖಹೇತವೇ ॥ ೧೬ ॥

ಶಿವೋಽಪಿ ತಸ್ಯ ಶಿರಸಿ ದತ್ವಾ ಸ್ವಕರಪಂಕಜಂ ।
ಉವಾಚ ವಚನಂ ದೇವಾನ್ ಪುತ್ರೋಽಯಮಿತಿ ಮೇಽಪರಃ ॥ ೧೭ ॥

ಗಣೇಶೋಽಪಿ ತದೋತ್ಥಾಯ ನಮಸ್ಕೃತ್ಯ ಶಿವಾಯ ವೈ ।
ಪಾರ್ವತ್ಯೈ ಚ ನಮಸ್ಕೃತ್ಯ ಮಹ್ಯಂ ವೈ ವಿಷ್ಣವೇ ತಥಾ ॥ ೧೮ ॥

---

೧೪. ಆಮೇಲೆ ದೇವಿಯ ಅನುಗ್ರಹದಿಂದ ದೇವತೆಗಳಿಗೂ ಗಣಗಳಿಗೂ ಮನಸ್ಸಮಾಧಾನವಾಯಿತು. ಅದರಿಂದ ಅವರು ತುಂಬಾ ಹರ್ಷಗೊಂಡರು.

೧೫. ಅದೇ ಸಮಯದಲ್ಲಿ ಇಂದ್ರಾದಿದೇವತೆಗಳು ಈಶ್ವರನನ್ನು ವಿಧವಿಧವಾಗಿ ಸ್ತುತಿಸಿ, ಆ ಗಜಾನನನನ್ನು ಶಿವನ ಸಮೀಪಕ್ಕೆ ಕರೆತಂದರು.

೧೬. ದೇವಿಯ ಮೆಚ್ಚಿನ ಮಗನಾದ ಆ ಗಣಾಧಿಪನನ್ನು ಮೂರು ಲೋಕಗಳಿಗೂ ಸುಖವಾಗಬೇಕೆಂಬ ಇಚ್ಛೆಯಿಂದ ಪರಮೇಶ್ವರನ ತೊಡೆಯಮೇಲೆ ಕೂರಿಸಿದರು.

೧೭. ಈಶ್ವರನೂ ಸಹ ಪ್ರೀತಿಯಿಂದ ತನ್ನ ಕೈಯನ್ನು ಮಗನ ಶಿರದಮೇಲಿಟ್ಟು ಹರಿಸಿ, ಈತನು ತನ್ನ ಪ್ರಿಯಪುತ್ರನೆಂದು ದೇವತೆಗಳಿಗೆ ಹೇಳಿದನು.

೧೮. ಆಗ ಗಣಪತಿಯು ಒಡನೆಯೇ ಎದ್ದು, ಶಿವಪಾರ್ವತಿಯರಿಗೂ ವಿಷ್ಣುವಿಗೂ ನನಗೂ (ಬ್ರಹ್ಮನಿಗೂ) ವಂದಿಸಿದನು.

ನಾರದಾದ್ಯಾನೃಷೀನ್ ಸರ್ವಾನ್ತ್ಸ ತ್ವಾಸ್ಥಾಯ ಪುರೋಽಬ್ರವೀತ್ ।
ಕ್ಷಂತವ್ಯಶ್ಚಾಪರಾಧೋ ಮೇ ಮಾನಶ್ಚೈವೇದೃಶೋ ನೃಣಾಂ ॥ ೧೯ ॥

ಅಹಂ ಚ ಶಂಕರಶ್ಚೈವ ವಿಷ್ಣುಶ್ಚೈತೇ ತ್ರಯಸ್ಸುರಾಃ ।
ಪ್ರತ್ಯೂಚುರ್ಯುಗಪತ್ಪ್ರೀತ್ಯಾ ದದತೋ ವರಮುತ್ತಮಂ ॥ ೨೦ ॥

ತ್ರಯೋ ವಯಂ ಸುರವರಾ ಯಥಾ ಪೂಜ್ಯಾ ಜಗತ್ರಯೇ ।
ತಥಾಯಂ ಗಣನಾಥಶ್ಚ ಸಕಲೈಃ ಪ್ರತಿಪೂಜ್ಯತಾಂ ॥ ೨೧ ॥

ವಯಂ ಚ ಪ್ರಾಕೃತಾಶ್ಚಾಯಂ ಪ್ರಾಕೃತಃ ಪೂಜ್ಯ ಏವ ಚ ।
ಗಣೇಶೋ ವಿಘ್ನಹರ್ತಾ ಹಿ ಸರ್ವಕಾಮಫಲಪ್ರದಃ ॥ ೨೨ ॥

ಏತತ್ಪೂಜಾಂ ಪುರಾ ಕೃತ್ವಾ ಪಶ್ಚಾತ್ಪೂಜ್ಯಾ ವಯಂ ನರೈಃ ।
ವಯಂ ಚ ಪೂಜಿತಾಸ್ಸರ್ವೇ ನಾಯಂ ಚಾಪೂಜಿತೋ ಯದಾ ॥ ೨೩ ॥

---

೧೯. ನಾರದರೇ ಮುಂತಾದ ಮಹರ್ಷಿವೃಂದದ ಕಡೆಗೆ ತಿರುಗಿ ತನ್ನ ಅಪರಾಧವನ್ನು ಕ್ಷಮಿಸಬೇಕೆಂದೂ, ಮನುಷ್ಯರ ಕೋಪದ ಪರಿಣಾಮವೇ ಇಂತಹುದುದೆಂದೂ ಕ್ಷಮಾಪಣೆಬೇಡಿದನು.

೨೦. ಆಗ ಬ್ರಹ್ಮ ವಿಷ್ಣು ಮಹೇಶ್ವರರು ಅವನ ಭಕ್ತಿಗೆ ಮೆಚ್ಚಿ ಪ್ರೀತಿಯಿಂದ ಅನೇಕ ವರಗಳನ್ನು ಅನುಗ್ರಹಿಸಿದರು.

೨೧. ತ್ರಿಮೂರ್ತಿಗಳಾದ ನಾವೂ ಸಹ ಅತ್ಯಂತ ಪೂಜ್ಯರಾಗಿದ್ದರೂ ಈ ಗಣನಾಥನು ನಮಗೂ ಸಹ ಪೂಜ್ಯನಾಗಿರಲಿ.

೨೨. ನಾವು ಹೇಗೆ ಪೂಜೆಗೆ ಆದಿದೇವತೆಗಳೋ ಹಾಗೆಯೇ ಈತನು ಪ್ರಧಾನ ದೇವತೆಯಾಗಿರಲಿ. ವಿಘ್ನನಾಶಕನಾಗಿಯೂ ಸರ್ವಕಾಮಪ್ರದನಾಗಿಯೂ ಆಗಿ ಭೂಲೋಕದಲ್ಲಿ ಪ್ರಸಿದ್ಧಿ ಪಡೆಯಲಿ.

೨೩. ಮನುಷ್ಯರು ಇವನ ಪೂಜೆಯನ್ನು ಮೊದಲು ಮಾಡಿ ಅನಂತರ ನಮ್ಮ ಪೂಜೆಯನ್ನು ಮಾಡಲಿ. ಈ ಗಣಪತಿಗೆ ಪೂಜೆಯನ್ನು ಮಾಡದೆ ನಮ್ಮನ್ನು ಪೂಜಿಸಿದರೆ ನಮ್ಮನ್ನು ಪೂಜೆಮಾಡಿದಂತಾಗುವುದಿಲ್ಲ.

ಅಸ್ಮಿನ್ನಪೂಜಿತೇ ದೇವಾಃ ಪರಪೂಜಾ ಕೃತಾ ಯದಿ ।
ತದಾ ತತ್ಫಲಹಾನಿಃ ಸ್ಯಾನ್ನಾತ್ರ ಕಾರ್ಯಾ ವಿಚಾರಣಾ ॥ ೨೪ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ಸ ಗಣೇಶಾನೋ ನಾನಾವಸ್ತುಭಿರಾದರಾತ್ ।
ಶಿವೇನ ಪೂಜಿತಃ ಪೂರ್ವಂ ವಿಷ್ಣುನಾನು ಪ್ರಪೂಜಿತಃ ॥ ೨೫ ॥

ಬ್ರಹ್ಮಣಾ ಚ ಮಯಾ ತತ್ರ ಪಾರ್ವತ್ಯಾ ಚ ಪ್ರಪೂಜಿತಃ ।
ಸರ್ವೈರ್ದೇವಗಣೈಶ್ಚೈವ ಪೂಜಿತಃ ಪರಯಾ ಮುದಾ ॥ ೨೬ ॥

ಸರ್ವೈರ್ಮಿಲಿತ್ವಾ ತತ್ರೈವ ಬ್ರಹ್ಮವಿಷ್ಣುಹರಾದಿಭಿಃ ।
ಸ ಗಣೇಶಶ್ಶಿವಾತುಷ್ಟ್ಯೈ ಸರ್ವಾಧ್ಯಕ್ಷೋ ನಿವೇದಿತಃ ॥ ೨೭ ॥

ಪುನಶ್ಚೈವ ಶಿವೇನಾಸ್ಮೈ ಸುಪ್ರಸನ್ನೇನ ತೇಜಸಾ ।
ಸರ್ವದಾ ಸುಖದಾ ಲೋಕೇ ವರಾ ದತ್ತಾ ಹ್ಯನೇಕಶಃ ॥ ೨೮ ॥

---

೨೪. ಯಾವ ದೇವತಾರಾಧನೆ ಮಾಡಬೇಕಾದರೂ ಮೊದಲು ಗಣಪನನ್ನು ಆರಾಧಿಸಬೇಕು. ಹಾಗೆ ಮಾಡದೇಹೋದರೆ ಅವರ ಇಷ್ಟಾರ್ಥಗಳು ಎಂದಿಗೂ ನೆರವೇರಲಾರವು ಎಂದು ವರಗಳನ್ನಿತ್ತರು.

೨೫-೨೬. ಎಲ್ಲರೂ ಗಣಪತಿಗೆ ವರಪ್ರದಾನಮಾಡಿ, ನಾನಾವಸ್ತುಗಳನ್ನಿತ್ತು ಆದರಿಸಿದರು. ಅಲ್ಲದೆ ಮೊದಲು ಶಿವನೂ ಅನಂತರ ವಿಷ್ಣು, ಬ್ರಹ್ಮ (ನಾನು) ಪಾರ್ವತಿ, ಇನ್ನೂ ಉಳಿದ ಸಕಲ ದೇವತೆಗಳೂ, ಗಣಪತಿಯನ್ನು ಸಂತೋಷದಿಂದ ಪೂಜಿಸಿದರು.

೨೭-೨೮. ಬ್ರಹ್ಮ, ವಿಷ್ಣು, ಈಶ್ವರ ಮೊದಲಾದ ಸಮಸ್ತರೂ ಸೇರಿ ಪಾರ್ವತಿಯನ್ನು ಸಂತೋಷಪಡಿಸಲು ಗಜಾನನನನ್ನು ಸರ್ವರಿಗೂ ಅಧ್ಯಕ್ಷನನ್ನಾಗಿಮಾಡಿದರು. ಶಿವನು ಮಾತ್ರ ಪುನಃ ಸಂತೋಷದಿಂದ ಸರ್ವದಾ ಸುಖವಾಗಿರುವಂತೆ ಗಣಪತಿಯನ್ನು ಹರಿಸಿದನು.

॥ ಶಿವ ಉವಾಚ ॥

ಹೇ ಗಿರೀಂದ್ರಸುತಾಪುತ್ರ ಸಂತುಷ್ಟೋಽಹಂ ನ ಸಂಶಯಃ ।
ಮಯಿ ತುಷ್ಟೇ ಜಗತ್ತುಷ್ಟಂ ವಿರುದ್ಧಃ ಕೋಽಪಿ ನೋ ಭವೇತ್ ॥ ೨೯ ॥

ಬಾಲರೂಪೋಽಪಿ ಯಸ್ಮಾತ್ತ್ವಂ ಮಹಾವಿಕ್ರಮಕಾರಕಃ ।
ಶಕ್ತಿಪುತ್ರಸ್ಸುತೇಜಸ್ವೀ ತಸ್ಮಾದ್ಭವ ಸದಾ ಸುಖೀ ॥ ೩೦ ॥

ತ್ವನ್ನಾಮ ವಿಘ್ನಹಂತೃತ್ವೇ ಶ್ರೇಷ್ಠಂ ಚೈವ ಭವತ್ವಿತಿ ।
ಮಮ ಸರ್ವಗಣಾಧ್ಯಕ್ಷಃ ಸಂಪೂಜ್ಯಸ್ತ್ವಂ ಭವಾಧುನಾ ॥ ೩೧ ॥

ಏವಮುಕ್ತ್ವಾ ಶಂಕರೇಣ ಪೂಜಾವಿಧಿರನೇಕಶಃ ।
ಆಶಿಷಶ್ಚಾಪ್ಯನೇಕಾ ಹಿ ಕೃತಾಸ್ತಸ್ಮಿಂಸ್ತು ತತ್ಕ್ಷಣಾತ್ ॥ ೩೨ ॥

ತತೋ ದೇವಗಣಾಶ್ಚೈವ ಗೀತಂ ವಾದ್ಯಂ ಚ ನೃತ್ಯಕಂ ।
ಮುದಾ ತೇ ಕಾರಯಾಮಾಸುಸ್ತಥೈವಾಪ್ಸರಸಾಂ ಗಣಾಃ ॥ ೩೩ ॥

---

೨೯. ಮತ್ತು ಗಣಪತಿಯನ್ನು ಕುರಿತು ಶಂಕರನು ಎಲೈ ಪಾರ್ವತೀಪುತ್ರನೇ, ನಿನ್ನಲ್ಲಿ ನಾನು ಸಂತುಷ್ಟನಾಗಿರುವೆನು. ನಾನು ತೃಪ್ತಿಪಟ್ಟಿರುವುದರಿಂದ ಜಗತ್ತೆಲ್ಲವೂ ನಿನ್ನಲ್ಲಿ ತುಷ್ಟಿಯುಳ್ಳದ್ದೆಂದೇ ಭಾವಿಸು. ನನಗೆ ವಿರೋಧಿಯು ಯಾರೂ ಇಲ್ಲ.

೩೦. ನೀನು ಬಾಲಕನಾದರೂ ಮಹಾಪರಾಕ್ರಮಿಯಾಗಿರುವೆ. ನೀನು ಶಕ್ತಿರೂಪಿಣಿಯಾದ ದೇವಿಯ ಮಗನಾಗಿರುವೆ. ಆದ್ದರಿಂದ ನೀನು ಯಾವಾಗಲೂ ಸುಖಿಯಾಗಿರು.

೩೧. ನೀನು ವಿಘ್ನಗಳನ್ನು ನಾಶಮಾಡುವವನು ಎಂಬ ಕೀರ್ತಿಯು ಸರ್ವತ್ರ ವ್ಯಾಪಿಸಲಿ. ನಮ್ಮ ಪ್ರಮಥಗಣಗಳಿಗೆಲ್ಲಾ ನೀನೇ ಅಧ್ಯಕ್ಷನಾಗಿರು.

೩೨. ಹೀಗೆ ಹೇಳಿ ಶಂಕರನು ನಾನಾರೀತಿಯಾಗಿ ಗಜಾನನನನ್ನು ಅರ್ಚಿಸಿ, ಬಗೆಬಗೆಯಾದ ಆಶೀರ್ವಾದಗಳಿಂದ ಅವನನ್ನು ತೃಪ್ತಿಗೊಳಿಸಿದನು.

೩೩. ಆಗಲೇ ದೇವತೆಗಳೂ, ಅಪ್ಸರರೂ ಸಂತೋಷದಿಂದ ಗೀತವಾದ್ಯಾದಿಗಳಿಂದಲೂ ನರ್ತನಗಳಿಂದಲೂ ಮಹೋತ್ಸವವನ್ನಾಚರಿಸಿದರು.

ಪುನಶ್ಚೈವ ವರೋ ದತ್ತಸ್ಸುಪ್ರಸನ್ನೇನ ಶಂಭುನಾ ।
ತಸ್ಮೈ ಚ ಗಣನಾಥಾಯ ಶಿವೇನೈವ ಮಹಾತ್ಮನಾ ॥ ೩೪ ॥

ಚತುರ್ಥ್ಯಾಂ ತ್ವಂ ಸಮುತ್ಪನ್ನೋ ಭಾದ್ರೇ ಮಾಸಿ ಗಣೇಶ್ವರ ।
ಅಸಿತೇ ಚ ತಥಾ ಪಕ್ಷೇ ಚಂದ್ರಸ್ಯೋದಯನೇ ಶುಭೇ ॥ ೩೫ ॥

ಪ್ರಥಮೇ ಚ ತಥಾ ಯಾಮೇ ಗಿರಿಜಾಯಾಸ್ಸುಚೇತಸಃ ।
ಆವಿರ್ಬಭೂವ ತೇ ರೂಪಂ ಯಸ್ಮಾತ್ತೇ ವ್ರತಮುತ್ತಮಂ ॥ ೩೬ ॥

ತಸ್ಮಾತ್ತದ್ದಿನಮಾರಭ್ಯ ತಸ್ಯಾಮೇವ ತಿಥೌ ಮುದಾ ।
ವ್ರತಂ ಕಾರ್ಯಂ ವಿಶೇಷೇಣ ಸರ್ವಸಿದ್ಧ್ಯೈ ಸುಶೋಭನಂ ॥ ೩೭ ॥

ಯಾವತ್ಪುನಸ್ಸಮಾಯಾತಿ ವರ್ಷಾಂತೇ ಚ ಚತುರ್ಥಿಕಾ ।
ತಾವದ್ವ್ರತಂ ಚ ಕರ್ತವ್ಯಂ ತವ ಚೈವ ಮಮಾಜ್ಞಯಾ ॥ ೩೮ ॥

ಸಂಸಾರೇ ಸುಖಮಿಚ್ಛಂತಿ ಯೇಽತುಲಂ ಚಾಪ್ಯನೇಕಶಃ ।
ತ್ವಾಂ ಪೂಜಯಂತು ತೇ ಭಕ್ತ್ಯಾ ಚತುರ್ಥ್ಯಾಂ ವಿಧಿಪೂರ್ವಕಂ ॥ ೩೯ ॥

---

೩೪. ಮತ್ತು ಇದರಿಂದ ತೃಪ್ತನಾದ ಶಂಭುವು ಗಣಪತಿಗೆ ಮತ್ತೊಂದು ವರವನ್ನಿತ್ತನು.

೩೫-೩೭. ಎಲೈ ಗಣಪತಿಯೇ, ನೀನು ಭಾದ್ರಪದ ಬಹುಳ ಚತುರ್ಥಿಯ ದಿನ ಚಂದ್ರೋದಯಕಾಲದಲ್ಲಿ ಪಾರ್ವತಿಯ ಮನಸ್ಸಿನಿಂದ ಆದಿನ ರಾತ್ರಿಯ ಪ್ರಥಮ ಯಾಮದಲ್ಲಿ ಜನಿಸಿರುವೆ. ಆದ್ದರಿಂದ ಇಷ್ಟಾರ್ಥಸಿದ್ಧಿಯನ್ನು ಪಡೆಯಲಿಚ್ಛಿಸುವವರು ಆ ದಿನದಲ್ಲೂ ಆ ದಿನದಿಂದ ಪ್ರತಿತಿಂಗಳಿನ ಚತುರ್ಥೀ ತಿಥಿಯಲ್ಲಿಯೂ ವ್ರತವನ್ನಾಚರಿಸಬೇಕು.

೩೮-೩೯. ಒಂದು ವರ್ಷ ಪರ್ಯಂತ ನಿನ್ನ ವ್ರತವನ್ನು ನನ್ನ ಅಪ್ಪಣೆಯಂತೆ ಆಚರಿಸಬೇಕು. ಸಂಸಾರದಲ್ಲಿ ಯಾರು ಸುಖವನ್ನು ಹೆಚ್ಚಾಗಿ ಬಯಸುವರೋ ಅವರು ಭಕ್ತಿಯಿಂದ ಚತುರ್ಥಿಯ ದಿನ ನಿನ್ನನ್ನು ಪೂಜಿಸಲಿ.

ಮಾರ್ಗಶೀರ್ಷೇ ತಥಾ ಮಾಸೇ ರಮ್ಯಾ ಯಾ ವೈ ಚತುರ್ಥಿಕಾ ।
ಪ್ರಾತಃ ಸ್ನಾನಂ ತದಾ ಕೃತ್ವಾ ವ್ರತಂ ವಿಪ್ರಾನ್ನಿವೇದಯೇತ್ ॥ ೪೦ ॥

ದೂರ್ವಾಭಿಃ ಪೂಜನಂ ಕಾರ್ಯಮುಪವಾಸಸ್ತಥಾವಿಧಃ ।
ರಾತ್ರೇಶ್ಚ ಪ್ರಹರೇ ಜಾತೇ ಸ್ನಾತ್ವಾ ಸಂಪೂಜಯೇನ್ನರಃ ॥ ೪೧ ॥

ಮೂರ್ತಿಂ ಧಾತುಮಯೀಂ ಕೃತ್ವಾ ಪ್ರವಾಳಸಂಭವಾಂ ತಥಾ ।
ಶ್ವೇತಾರ್ಕಸಂಭವಾಂ ಚಾಪಿ ಮಾರ್ದವಾಂ ನಿರ್ಮಿತಾಂ ತಥಾ ॥ ೪೨ ॥

ಪ್ರತಿಷ್ಠಾಪ್ಯ ತದಾ ತತ್ರ ಪೂಜಯೇತ್ಪ್ರಯತಃ ಪುಮಾನ್ ।
ಗಂಧೈರ್ನಾನಾವಿಧೈರ್ದಿವ್ಯೈಶ್ಚಂದನೈಃ ಪುಷ್ಪಕೈರಿಹ ॥ ೪೩ ॥

ವಿತಸ್ತಿಮಾತ್ರಾ ದೂರ್ವಾ ಚ ತ್ರ್ಯಂಗಾ ವೈ ಮೂಲವರ್ಜಿತಾ ।
ಈದೃಶಾನಾಂ ತದ್ದಲಾನಾಂ ಶತೇನೈಕೋತ್ತರೇಣ ಹ ॥ ೪೪ ॥

ಏಕವಿಂಶತಿಕೇನೈವ ಪೂಜಯೇತ್ಪ್ರತಿಮಾಂ ಸ್ಥಿತಾಂ ।
ಧೂಪೈರ್ದೀಪೈಶ್ಚ ನೈವೇದ್ಯೈರ್ವಿವಿಧೈರ್ಗಣನಾಯಕಂ ॥ ೪೫ ॥

---

೪೦. ಮಾರ್ಗಶಿರಮಾಸದ ಚತುರ್ಥಿಯು ಅತ್ಯಂತ ಶುಭಫಲಪ್ರದವಾದದ್ದು. ಆದಿನ ಪ್ರಾತಃಕಾಲ ಸ್ನಾನಮಾಡಿ ಸತ್ಕರ್ಮನಿಷ್ಠರಾದ ಬ್ರಾಹ್ಮಣರನ್ನು ಆಹ್ವಾನಿಸಿ ವ್ರತವನ್ನಾಚರಿಸಬೇಕು.

೪೧-೪೨. ಆದಿನ ಹಗಲು ಗರಿಕೆಯ ಹುಲ್ಲಿನಿಂದ ಅರ್ಚನೆಮಾಡಿ ಉಪವಾಸ ಮಾಡಬೇಕು. ರಾತ್ರಿ ಮೊದಲನೆ ಯಾಮದಲ್ಲಿ ಸ್ನಾನಮಾಡಿ, ಲೋಹದಿಂದಾಗಲಿ, ಹವಳದಿಂದಾಗಲಿ, ಶ್ವೇತಾರ್ಕಮೂಲದಲ್ಲಿ ದೊರೆತ ಮರದಿಂದಾಗಲಿ, ಮಣ್ಣಿನಿಂದಾಗಲಿ ಮಾಡಿದ ಪ್ರತಿಮೆಯನ್ನು ಆರಾಧಿಸಬೇಕು.

೪೩-೪೬. ಆ ಪ್ರತಿಮೆಯನ್ನು ನಾನಾವಿಧವಾದ ಗಂಧಪುಷ್ಪಗಳಿಂದಲೂ, ದ್ವಾದಶಾಂಗುಲಪರಿಮಿತವಾದ ಬೇರಿಲ್ಲದಿರುವ ದೂರ್ವಾಂಕುರಗಳಿಂದಲೂ ಅರ್ಚಿಸಬೇಕು. ಅರ್ಚನಾದ್ರವ್ಯಗಳು ನೂರೊಂದು ಆದರೆ ಗಣಪತಿಗೆ ಅತ್ಯಂತ ಪ್ರಿಯವಾಗುವುದು. ಅಥವಾ ಇಪ್ಪತ್ತೊಂದು ಸಂಖ್ಯೆಯಿಂದಲಾದರೂ ಆಗಬಹುದು. ಧೂಪ,

ತಾಂಬೂಲಾದ್ಯರ್ಘ್ಯಸದ್ದ್ರವ್ಯೈಃ ಪ್ರಣಿಪತ್ಯ ಸ್ತುವೈಸ್ತಥಾ ।
ತ್ವಾಂ ತತ್ರ ಪೂಜಯಿತ್ವೇತ್ಥಂ ಬಾಲಚಂದ್ರಂ ಚ ಪೂಜಯೇತ್ ॥ ೪೬ ॥

ಪಶ್ಚಾದ್ವಿಪ್ರಾಂಶ್ಚ ಸಂಪೂಜ್ಯ ಭೋಜಯೇನ್ಮಧುರೈರ್ಮುದಾ ।
ಸ್ವಯಂ ಚೈವ ತತೋ ಭುಂಜ್ಯಾನ್ಮಧುರಂ ಲವಣಂ ವಿನಾ ॥ ೪೭ ॥

ವಿಸರ್ಜಯೇತ್ತತಃ ಪಶ್ಚಾನ್ನಿಯಮಂ ಸರ್ವಮಾತ್ಮನಃ ।
ಗಣೇಶಸ್ಮರಣಂ ಕುರ್ಯಾತ್ಸಂಪೂರ್ಣಂ ಸ್ಯಾದ್ವ್ರತಂ ಶುಭಂ ॥ ೪೮ ॥

ಏವಂ ವ್ರತೇನ ಸಂಪೂರ್ಣೇ ವರ್ಷೇ ಜಾತೇ ನರಸ್ತದಾ ।
ಉದ್ಯಾಪನವಿಧಿಂ ಕುರ್ಯಾದ್ವ್ರತಸಂಪೂರ್ತಿಹೇತವೇ ॥ ೪೯ ॥

ದ್ವಾದಶ ಬ್ರಾಹ್ಮಣಾಸ್ತತ್ರ ಭೋಜನೀಯಾ ಮದಾಜ್ಞಯಾ ।
ಕುಂಭಮೇಕಂ ಚ ಸಂಸ್ಥಾಪ್ಯ ಪೂಜ್ಯಾ ಮೂರ್ತಿಸ್ತ್ವದೀಯಕಾ ॥ ೫೦ ॥

---

ದೀಪ, ನೈವೇದ್ಯ, ತಾಂಬೂಲ, ಅರ್ಘ್ಯ, ಮುಂತಾದವುಗಳಿಂದ ಗಣಪತಿಯನ್ನು ಪೂಜಿಸಿ, ಸ್ತುತಿವಚನಗಳಿಂದ ನಮಸ್ಕರಿಸಿ, ಅಂತ್ಯದಲ್ಲಿ ಬಾಲಚಂದ್ರನನ್ನು ಪೂಜಿಸಬೇಕು.

೪೭-೪೮. ಆಮೇಲೆ ಬ್ರಾಹ್ಮಣರನ್ನು ಮಧುರಾನ್ನಗಳಿಂದ ತೃಪ್ತಿಪಡಿಸಿ, ತಾನು ಉಪ್ಪನ್ನು ಉಪಯೋಗಿಸದೆ ಭೋಜನಮಾಡಬೇಕು. ಕೊನೆಯಲ್ಲಿ ಗಣಪತಿ ಸ್ಮರಣೆಮಾಡುತ್ತಾ ವ್ರತವಿಸರ್ಜನೆಮಾಡಬೇಕು. ಹೀಗೆ ನಿಯಮದಿಂದ ಮಾಡಿದರೆ ಆ ವ್ರತವು ಪೂರ್ತಿಯಾಗುವುದು.

೪೯-೫೦. ಹೀಗೆ ಮನುಷ್ಯನು ಒಂದು ವರ್ಷ ಪರ್ಯಂತ ವ್ರತಮಾಡಿದ ಮೇಲೆ ವ್ರತವನ್ನು ಪೂರ್ಣಗೊಳಿಸುವುದಕ್ಕಾಗಿ ಉದ್ಯಾಪನೆಯನ್ನು ಮಾಡಬೇಕು. ಅದರಲ್ಲಿ ಹನ್ನೆರಡು ಜನ ಬ್ರಾಹ್ಮಣರನ್ನು ತೃಪ್ತಿಯಾಗುವಂತೆ ಭೋಜನಮಾಡಿಸಬೇಕು. ಮೂರ್ತಿಗೆ ಬದಲಾಗಿ ಒಂದು ಪ್ರಧಾನ ಕಲಶವನ್ನಿಟ್ಟು ಅರ್ಚಿಸಬೇಕು.

ಸ್ಥಂಡಿಲೇಽಷ್ಟದಳಂ ಕೃತ್ವಾ ತದಾ ವೇದವಿಧಾನತಃ ।
ಹೋಮಶ್ಚೈವಾತ್ರ ಕರ್ತವ್ಯೋ ವಿತ್ತಶಾಠ್ಯವಿವರ್ಜಿತೈಃ ॥ ೫೧ ॥

ಸ್ತ್ರೀದ್ವಯಂ ಚ ತಥಾ ಚಾತ್ರ ವಟುಕದ್ವಯಮಾದರಾತ್ ।
ಭೋಜಯೇತ್ಪೂಜಯಿತ್ವಾ ವೈ ಮೂರ್ತ್ಯಗ್ರೇ ವಿಧಿಪೂರ್ವಕಂ ॥ ೫೨ ॥

ನಿಶಿ ಜಾಗರಣಂ ಕಾರ್ಯಂ ಪುನಃ ಪ್ರಾತಃ ಪ್ರಪೂಜಯೇತ್ ।
ವಿಸರ್ಜನಂ ತತಶ್ಚೈವ ಪುನರಾಗಮನಾಯ ಚ ॥ ೫೩ ॥

ಬಾಲಾಕಾಚ್ಚಾಶಿಷೋ ಗ್ರಾಹ್ಯಾಸ್ಸ್ವಸ್ತಿವಾಚನಮೇವ ಚ ।
ಪುಷ್ಪಾಂಜಲಿಂ ಪ್ರದದ್ಯಾಚ್ಚ ವ್ರತಸಂಪೂರ್ಣಹೇತವೇ ॥ ೫೪ ॥

ನಮಸ್ಕಾರಾಂಸ್ತತಃ ಕೃತ್ವಾ ನಾನಾಕಾರ್ಯಂ ಪ್ರಕಲ್ಪಯೇತ್ ।
ಏವಂ ವ್ರತಂ ಕೃತಂ ಯೇನ ತಸ್ಯೇಪ್ಸಿತಫಲಂ ಭವೇತ್ ॥ ೫೫ ॥

ಯೋ ನಿತ್ಯಂ ಶ್ರದ್ಧಯಾ ಸಾರ್ಧಂ ಪೂಜಾಂ ಚೈವ ಸ್ವಶಕ್ತಿತಃ ।
ಕುರ್ಯಾತ್ತವ ಗಣೇಶಾನ ಸರ್ವಕಾಮಫಲಾಪ್ತಯೇ ॥ ೫೬ ॥

---

೫೧-೫೨. ವಿಧಿವತ್ತಾಗಿ ಹೋಮಕುಂಡವನ್ನು ನಿರ್ಮಿಸಿ ಅದರಲ್ಲಿ ಅಗ್ನಿಪ್ರತಿಷ್ಠಾಪನೆಯನ್ನು ಮಾಡಿ ಹೋಮಮಾಡಬೇಕು. ಆ ದಿನ ಇಬ್ಬರು ಮುತ್ತೈದೆಯರಿಗೂ ಇಬ್ಬರು ಬ್ರಹ್ಮಚಾರಿಗಳಿಗೂ ಮೂರ್ತಿಯ ಸಮೀಪದಲ್ಲಿ ಭೋಜನ ಮಾಡಿಸಬೇಕು.

೫೩-೫೫. ಆ ದಿನ ರಾತ್ರಿ ಜಾಗರಣೆಮಾಡಿ ಮಾರನೆದಿವಸ ಪುನಃ ಪೂಜೆ ಮಾಡಿ ವಿಸರ್ಜನೆಮಾಡಬೇಕು. ಆ ಕಾಲದಲ್ಲಿ ಬಾಲಕರಿಂದ (ಬ್ರಹ್ಮಚಾರಿಗಳಿಂದ) ಆಶೀರ್ವಚನವನ್ನು ಸ್ವೀಕರಿಸಿ ವ್ರತಸಂಪೂರ್ತ್ಯರ್ಥವಾಗಿ ದೇವರಿಗೆ ಪುಷ್ಪಾಂಜಲಿಯನ್ನು ಅರ್ಪಿಸಿ ಭಕ್ತಿಯಿಂದ ಪ್ರದಕ್ಷಿಣ ನಮಸ್ಕಾರಮಾಡಬೇಕು. ಹೀಗೆ ಉದ್ಯಾಪನೆಮಾಡುವುದರಿಂದ ಸಾಧಕನ ಇಷ್ಟಾರ್ಥಗಳೆಲ್ಲವೂ ಕೈಗೂಡುವುವು.

೫೬-೫೮. ಎಲೈ ಗಣಪತಿಯೇ, ಯಾರು ಹೀಗೆ ಭಕ್ತಿಯಿಂದ ನಿನ್ನನ್ನು ಆರಾಧಿಸುವರೋ ಅವರು ಸಮಸ್ತ ಇಷ್ಟಾರ್ಥಗಳನ್ನೂ ಪಡೆಯಲಿ. ಸಿಂದೂರ, ಗಂಧ,

ಸಿಂದೂರೈಶ್ಚಂದನೈಶ್ಚೈವ ತಂಡುಲೈಃ ಕೇತಕೈಸ್ತಥಾ ।
ಉಪಚಾರೈರನೇಕೈಶ್ಚ ಪೂಜಯೇತ್ತ್ವಾಂ ಗಣೇಶ್ವರಂ ॥ ೫೭ ॥

ಏವಂ ತ್ವಾಂ ಪೂಜಯೇಯುರ್ಯೇ ಭಕ್ತ್ಯಾ ನಾನೋಪಚಾರತಃ ।
ತೇಷಾಂ ಸಿದ್ಧಿರ್ಭವೇನ್ನಿತ್ಯಂ ವಿಘ್ನನಾಶೋ ಭವೇದಿಹ ॥ ೫೮ ॥

ಸರ್ವವರ್ಣೈಃ ಪ್ರಕರ್ತವ್ಯಾ ಸ್ತ್ರೀಭಿಶ್ಚೈವ ವಿಶೇಷತಃ ।
ಉದಯಾಭಿಮುಖೈಶ್ಚೈವ ರಾಜಭಿಶ್ಚ ವಿಶೇಷತಃ ॥ ೫೯ ॥

ಯಂ ಯಂ ಕಾಮಯತೇ ಯೋ ವೈ ತಂ ತಮಾಪ್ನೋತಿ ನಿಶ್ಚಿತಂ ।
ಅತಃ ಕಾಮಯಮಾನೇನ ತೇನ ಸೇವ್ಯಸ್ಸದಾ ಭವಾನ್ ॥ ೬೦ ॥

॥ ಬ್ರಹ್ಮೋವಾಚ ॥

ಶಿವೇನೈವಂ ತದಾ ಪ್ರೋಕ್ತಂ ಗಣೇಶಾಯ ಮಹಾತ್ಮನೇ ।
ತದಾನೀಂ ದೈವತೈಶ್ಚೈವ ಸರ್ವೈಶ್ಚ ಋಷಿಸತ್ತಮೈಃ ॥ ೬೧ ॥

ತಥೇತ್ಯುಕ್ತ್ವಾಥ ತೈಸ್ಸರ್ವೈರ್ಗಣೈಶ್ಶಂಭುಪ್ರಿಯೈರ್ಮುನೇ ।
ಪೂಜಿತೋ ಹಿ ಗಣಾಧೀಶೋ ವಿಧಿನಾ ಪರಮೇಣ ಸಃ ॥ ೬೨ ॥

---

ಮಂತ್ರಾಕ್ಷತೆ, ತಾಳೇಹೂವು, ಇನ್ನೂ ವಿಧವಿಧವಾದ ಸಾಮಗ್ರಿಗಳು ಇವುಗಳಿಂದ ಮಂತ್ರಪುರಸ್ಸರವಾಗಿ ನಿನ್ನನ್ನು ಪೂಜಿಸಿದವರಿಗೆ ಸಮಸ್ತ ಸಿದ್ಧಿಗಳೂ ಒದಗಲಿ. ಅವರ ವಿಘ್ನಪರಂಪರೆಗಳು ನಾಶವಾಗಲಿ.

೫೯-೬೦. ಈ ವ್ರತವನ್ನು ಯಾವ ಜಾತಿಯವರು ಬೇಕಾದರೂ ಮಾಡಬಹುದು. ಹೆಂಗಸರು, ಜಯಶಾಲಿಗಳಾಗಬೇಕೆಂದಿರುವ ರಾಜರು, ಇವರಿಗಂತೂ ಬಹು ಮುಖ್ಯವಾದ ವ್ರತವಿದು. ಒಟ್ಟಿನಲ್ಲಿ ಯಾರು ಯಾರು ಏನನ್ನು ಅಪೇಕ್ಷಿಸದರೂ ಈ ವ್ರತಾಚರಣೆಯಿಂದ ಅವರವರ ಇಷ್ಟಾರ್ಥಗಳನ್ನು ಸಂಪೂರ್ಣವಾಗಿ ಪಡೆಯಬಹುದು.

೬೧-೬೨. ಹೀಗೆ ಶಿವನು ಗಣಪತಿಗೆ ಹೇಳಿದ ಮೇಲೆ ಅಲ್ಲಿದ್ದ ದೇವತೆಗಳೆಲ್ಲರೂ ಶಿವನ ವರಗಳು ಫಲಿಸಲಿ, ಎಂದು ಹೇಳಿದರು. ಬಳಿಕ ದೇವತೆಗಳೂ, ಬ್ರಹ್ಮನೂ ಸಹ ಭಕ್ತಿಯಿಂದ ಗಣಾಧಿಪನನ್ನು ವಿಧಿವತ್ತಾಗಿ ಪೂಜಿಸಿದರು.

ತತಶ್ಚೈವ ಗಣಾಸ್ಸರ್ವೇ ಪ್ರಣೇಮುಸ್ತೇ ಗಣೇಶ್ವರಂ ।
ಸಮಾನರ್ಚುರ್ವಿಶೇಷೇಣ ನಾನಾವಸ್ತುಭಿರಾದರಾತ್ ॥ ೬೩ ॥

ಗಿರಿಜಾಯಾಸ್ಸಮುತ್ಪನ್ನೋ ಯಶ್ಚ ಹರ್ಷೋ ಮುನೀಶ್ವರ ।
ಚತುರ್ಭಿರ್ವದನೈರ್ನ್ಯ ತಮವರ್ಣ್ಯಂ ಚ ಕಥಂ ಬ್ರುವೇ ॥ ೬೪ ॥

ದೇವದುಂದುಭಯೋ ನೇದುರ್ನನೃತುಶ್ಚಾಪ್ಸರೋಗಣಾಃ ।
ಜಗುರ್ಗಂಧರ್ವಮುಖ್ಯಾಶ್ಚ ಪುಷ್ಪವರ್ಷಂ ಪಪಾತ ಹ ॥ ೬೫ ॥

ಜಗತ್ಸ್ವಾಸ್ಥ್ಯಂ ತದಾ ಪ್ರಾಪ ಗಣಾಧೀಶೇ ಪ್ರತಿಷ್ಠಿತೇ ।
ಮಹೋತ್ಸವೋ ಮಹಾನಾಸೀತ್ಸರ್ವಂ ದುಃಖಂ ಕ್ಷಯಂ ಗತಂ ॥ ೬೬ ॥

ಶಿವಾಶಿವೌ ಚ ಮೋದೇತಾಂ ವಿಶೇಷೇಣಾತಿ ನಾರದ ।
ಆಸೀತ್ಸುಮಂಗಲಂ ಭೂರಿ ಸರ್ವತ್ರ ಸುಖದಾಯಕಂ ॥ ೬೭ ॥

ತತೋ ದೇವಗಣಾಃ ಸರ್ವೇ ಋಷೀಣಾಂ ಚ ಗಣಾಸ್ತಥಾ ।
ಸಮಾಗತಾಶ್ಚ ಯೇ ತತ್ರ ಜಗ್ಮುಸ್ತೇ ತು ಶಿವಾಜ್ಞಯಾ ॥ ೬೮ ॥

---

೬೩. ಆಮೇಲೆ ಪ್ರಮಥಗಣಗಳೂ ಸಹ ಗಣೇಶ್ವರನನ್ನೂ ನಾನಾವಸ್ತುಗಳಿಂದ ಭಕ್ತಿಪೂರ್ವಕವಾಗಿ ಪೂಜಿಸಿದರು.

೬೪-೬೫. ಆಗ ನಾನು ನನ್ನ ನಾಲ್ಕು ಮುಖಗಳಿಂದಲೂ ಪಾರ್ವತಿನಂದನನನ್ನು ಬಹುವಾಗಿ ಹೊಗಳಿದೆನು. ದೇವದುಂದುಭಿಗಳು ಮೊಳಗಿದವು. ಅಪ್ಸರಸ್ತ್ರೀಯರು ನರ್ತನಮಾಡಿದರು. ಗಂಧರ್ವರು ಪುಷ್ಪವೃಷ್ಟಿಯನ್ನು ಸುರಿಸಿದರು.

೬೬-೬೭. ಪಾರ್ವತಿಪುತ್ರನು ಗಣಾಧಿಪನಾಗಲು, ಲೋಕವೆಲ್ಲಾ ಆನಂದಪಟ್ಟಿತು. ಪಾರ್ವತೀಪರಮೇಶ್ವರರು ಬಹುವಾಗಿ ಹರ್ಷಗೊಂಡರು. ಎಲ್ಲೆಲ್ಲೂ ಜನರಿಗೆ ಸುಖಸನ್ಮಂಗಳಗಳುಂಟಾದವು.

೬೮-೬೯. ಅನಂತರ ದೇವತೆಗಳೂ ಸಮಸ್ತ ಋಷಿಗಳೂ, ಇನ್ನೂ ಅಲ್ಲಿಗೆ ಬಂದಿದ್ದವರೆಲ್ಲರೂ ಶಿವಾಜ್ಞೆಯಿಂದ ಗಣಪತಿಯನ್ನೂ, ಪರಶಿವನನ್ನೂ ಹೊಗಳುತ್ತಾ,

ಪ್ರಶಂಸಂತಸ್ತ್ರಿಯಾಂ ತತ್ರ ಗಣೇಶಂ ಚ ಪುನಃ ಪುನಃ ।
ಶಿವಂ ಚೈವ ತಥಾ ಸ್ತುತ್ವಾ ಕೀದೃಶಂ ಯುದ್ಧಮೇವ ಚ ॥ ೬೯ ॥
ಯದಾ ಸಾ ಗಿರಿಜಾ ದೇವೀ ಕೋಪಹೀನಾ ಬಭೂವ ಹ ।
ಶಿವೋಽಪಿ ಗಿರಿಜಾಂ ತತ್ರ ಪೂರ್ವವತ್ಸಂಪ್ರಪದ್ಯ ತಾಂ ॥ ೭೦ ॥
ಚಕಾರ ವಿವಿಧಂ ಸೌಖ್ಯಂ ಲೋಕಾನಾಂ ಹಿತಕಾಮ್ಯಯಾ ।
ಸ್ವಾತ್ಮಾರಾಮೋಽಪಿ ಪರಮೋ ಭಕ್ತಕಾರ್ಯೋದ್ಯತಃ ಸದಾ ॥ ೭೧ ॥
ವಿಷ್ಣುಶ್ಚ ಶಿವಮಾಪೃಚ್ಛ್ಯ ಬ್ರಹ್ಮಾಹಂ ತಂ ತಥೈವ ಹಿ ।
ಆಗಚ್ಛಾವ ಸ್ವಧಾಮಂ ಚ ಶಿವೌ ಸಂಸೇವ್ಯ ಭಕ್ತಿತಃ ॥ ೭೨ ॥
ನಾರದ ತ್ವಂ ಚ ಭಗವನ್ ಸಂಗೀಯ ಶಿವಯೋರ್ಯಶಃ ।
ಆಗಮೋ ಭವನಂ ಸ್ವಂ ಚ ಶಿವೌ ಪೃಷ್ಟ್ವಾ ಮುನೀಶ್ವರ ॥ ೭೩ ॥
ಏತತ್ತೇ ಸರ್ವಮಾಖ್ಯಾತಂ ಮಯಾ ವೈ ಶಿವಯೋರ್ಯಶಃ ।
ಭವತ್ಪೃಷ್ಟೇನ ವಿಘ್ನೇಶಯಶಸ್ಸಂಮಿಶ್ರಮಾದರಾತ್ ॥ ೭೪ ॥
ಇದಂ ಸುಮಂಗಲಾಖ್ಯಾನಂ ಯಃ ಶೃಣೋತಿ ಸುಸಂಯತಃ ।
ಸರ್ವಮಂಗಲಸಂಯುಕ್ತಸ್ಸ ಭವೇನ್ಮಂಗಲಾಲಯಃ ॥ ೭೫ ॥

---

ಆಗ ನಡೆದ ಯುದ್ಧದ ಸಂಭ್ರಮವನ್ನು ವರ್ಣಿಸುತ್ತಾ ತಮ್ಮ ತಮ್ಮ ಸ್ಥಾನಗಳಿಗೆ ಹಿಂತಿರುಗಿದರು.

೭೦-೭೧. ಗಿರಿಜೆಯು ಕೋಪವಿಲ್ಲದೆ ಸಂತುಷ್ಟಳಾಗಿರುವುದನ್ನು ಶಂಕರನು ನೋಡಿ, ತಾನು ಪೂರ್ಣಕಾಮನಾಗಿದ್ದರೂ ಲೋಕಹಿತದ ದೃಷ್ಟಿಯಿಂದ ಭಕ್ತರ ಹಿತಕ್ಕಾಗಿ ಇನ್ನೂ ಉತ್ತಮಕೆಲಸಗಳನ್ನು ನೆರವೇರಿಸಲು ಮನಸ್ಸುಮಾಡಿದನು.

೭೨-೭೩. ವಿಷ್ಣುವೂ ನಾನೂ ಸಹ ಪಾರ್ವತಿಪರಮೇಶ್ವರರನ್ನು ಸೇವಿಸಿ ಅವರನುಮತಿಪಡೆದು ನಮ್ಮ ನಮ್ಮ ಸ್ಥಾನಗಳಿಗೆ ಬಂದೆವು. ನಾರದನಾದ ನೀನೂ ಸಹ ಶಿವನ ಗುಣಕೀರ್ತನಮಾಡುತ್ತಾ ಶಿವನನುಮತಿಯಿಂದ ನಿನ್ನ ನಿವಾಸಕ್ಕೆ ತೆರಳಿದೆ.

೭೪-೭೫. ವಿಘ್ನೇಶ್ವರನ ಮತ್ತು ಶಿವದಂಪತಿಗಳ ವಿಚಾರವಾಗಿ ನೀನು ಕೇಳಿದ್ದನ್ನೆಲ್ಲವನ್ನೂ ಹೇಳಿರುವೆನು. ಈ ಮಂಗಳಕರವಾದ ಕಥೆಯನ್ನು ಭಕ್ತಿಯಿಂದ ಕೇಳಿದವನಿಗೆ ಸಕಲ ಸನ್ಮಂಗಳಗಳೂ ಉಂಟಾಗುವುವು. ಸುಖಸಾಮ್ರಾಜ್ಯದಲ್ಲಿ ಲೋಲುಪನಾಗುವನು.

ಅಪುತ್ರೋ ಲಭತೇ ಪುತ್ರಂ ನಿರ್ಧನೋ ಲಭತೇ ಧನಂ ।
ಭಾರ್ಯಾರ್ಥೀ ಲಭತೇ ಭಾರ್ಯಾಂ ಪ್ರಜಾರ್ಥೀ ಲಭತೇ ಪ್ರಜಾಂ ॥ ೭೬ ॥

ಆರೋಗ್ಯಂ ಲಭತೇ ರೋಗೀ ಸೌಭಾಗ್ಯಂ ದುರ್ಭಗೋ ಲಭೇತ್ ।
ನಷ್ಟಪುತ್ರಂ ನಷ್ಟಧನಂ ಪ್ರೋಷಿತಾ ಚ ಪತಿಂ ಲಭೇತ್ ॥ ೭೭ ॥

ಶೋಕಾವಿಷ್ಟಶ್ಶೋಕಹೀನಸ್ಸ ಭವೇನ್ನಾತ್ರ ಸಂಶಯಃ ।
ಇದಂ ಗಣೇಶಮಾಖ್ಯಾನಂ ಯಸ್ಯ ಗೇಹೇ ಚ ತಿಷ್ಠತಿ ॥ ೭೮ ॥

ಸದಾ ಮಂಗಲಸಂಯುಕ್ತಸ್ಸ ಭವೇನ್ನಾತ್ರ ಸಂಶಯಃ ।
ಯಾತ್ರಾಕಾಲೇ ಚ ಪುಣ್ಯಾಹೇ ಯಶ್ಶೃಣೋತಿ ಸಮಾಹಿತಃ ।
ಸರ್ವಾಭೀಷ್ಟಂ ಸ ಲಭತೇ ಶ್ರೀಗಣೇಶಪ್ರಸಾದತಃ ॥ ೭೯ ॥

ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಕುಮಾರಖಂಡೇ
ಗಣಪತಿಪ್ರಧಾನಪದವೀಪ್ರಾಪ್ತವರ್ಣನಂ ನಾಮ
ಅಷ್ಟಾದಶೋಽಧ್ಯಾಯಃ

---

೭೬-೭೭. ಈ ಕಥಾಶ್ರವಣದಿಂದ ಮಕ್ಕಳಿಲ್ಲದವರು ಮಕ್ಕಳನ್ನೂ, ದರಿದ್ರನು ಧನವನ್ನೂ, ಕನ್ಯಾರ್ಥಿಯು ಸುರೂಪಿಣಿಯಾದ ಪತ್ನಿಯನ್ನೂ, ಅಪುತ್ರವಂತನು ಮಕ್ಕಳನ್ನೂ, ರೋಗಿಯು ಆರೋಗ್ಯವನ್ನೂ, ದುರದೃಷ್ಟಶಾಲಿಯು ಒಳ್ಳೆಯ ಅದೃಷ್ಟವನ್ನೂ ಪಡೆಯುವರು. ಮಕ್ಕಳು, ಹಣ, ಪತಿ ಇವರನ್ನು ಅಗಲಿದವರು ಪುನಃ ಆವರನ್ನೂ ಹೊಂದಿ ಸುಖದಿಂದ ಬಾಳುವರು.

೭೮-೭೯. ಗಣೇಶನ ಆಖ್ಯಾನದ ಪುಸ್ತಕವು ಯಾವ ಮನೆಯಲ್ಲಿರುತ್ತದೆಯೋ, ಆ ಮನೆಯು ಸರ್ವದಾ ಶುಭಕಾರ್ಯಗಳಿಂದಲೇ ಕೂಡಿದ್ದಾಗಿ ಶೋಭಿಸುತ್ತದೆ ಪ್ರಯಾಣಕಾಲದಲ್ಲಿಯೂ, ಶುಭಕಾರ್ಯಗಳಲ್ಲಿಯೂ ಇದನ್ನು ಭಕ್ತಿಯಿಂದ ಕೇಳಿದವರು ಶ್ರೀ ಗಣೇಶನ ಅನುಗ್ರಹದಿಂದ ಸಕಲ ಇಷ್ಟಾರ್ಥಗಳನ್ನೂ ಪಡೆಯುವರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿನ ರುದ್ರಸಂಹಿತೆಯ ಕುಮಾರಖಂಡದಲ್ಲಿ
ಗಣಪತಿಯ ಪ್ರಧಾನ ಪದವೀಪ್ರಾಪ್ತಿಯೆಂಬ ಹದಿನೆಂಟನೆಯ
ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಏಕೋನವಿಂಶೋಽಧ್ಯಾಯಃ

॥ ನಾರದ ಉವಾಚ ॥

ಗಣೇಶಸ್ಯ ಶ್ರುತಾ ತಾತ ಸಮ್ಯಗ್ಜನಿರನುತ್ತಮಾ ।
ಚರಿತ್ರಮಪಿ ದಿವ್ಯಂ ವೈ ಸುಪರಾಕ್ರಮಭೂಷಿತಂ ॥ ೧ ॥

ತತಃ ಕಿಮಭವತ್ತಾತ ತತ್ತ್ವಂ ವದ ಸುರೇಶ್ವರ ।
ಶಿವಾಶಿವಯಶಃಸ್ನಿತಂ ಮಹಾನಂದಪ್ರದಾಯಕಂ ॥ ೨ ॥

॥ ಬ್ರಹ್ಮೋವಾಚ ॥

ಸಾಧು ಪೃಷ್ಟಂ ಮುನಿಶ್ರೇಷ್ಠ ಭವತಾ ಕರುಣಾತ್ಮನಾ ।
ಶ್ರೂಯತಾಂ ದತ್ತಕರ್ಣಂ ಹಿ ವಕ್ಷ್ಯೇಽಹಂ ಋಷಿಸತ್ತಮ ॥ ೩ ॥

---

### ಹತ್ತೊಂಬತ್ತನೆಯ ಅಧ್ಯಾಯವು.

೧-೨. ಮತ್ತೆ ನಾರದಮಹರ್ಷಿಯು ತನ್ನ ತಂದೆಯಾದ ಬ್ರಹ್ಮನನ್ನು ಕುರಿತು ಓ ತಂದೆಯೇ, ಇದುವರಿಗೂ ಗಣೇಶನ ಉತ್ಪತ್ತಿ, ಅವನ ಪರಾಕ್ರಮ, ಅವನ ಕೀರ್ತಿ ಮೊದಲಾದ ಮಹಾನಂದ ಪ್ರದಾಯಕವಾದ ಇತಿಹಾಸಗಳನ್ನೆಲ್ಲಾ ಕೇಳಿದೆನು. ಮುಂದೇನು ನಡೆಯಿತು? ಪಾರ್ವತೀಶಿವರ ಯಶಸ್ಸನ್ನು ವಿಶದಗೊಳಿಸುವ ಮುಂದಿನ ಕಥೆಯೇನು ? ಇದೆಲ್ಲವನ್ನು ವಿಸ್ತಾರವಾಗಿ ನನಗೆ ತಿಳಿಸು ಎನ್ನಲು,

೩. ಬ್ರಹ್ಮನಿಂತೆಂದನು ;—ಮುನಿಶ್ರೇಷ್ಠನಾದ ನಾರದನೇ ಕೇಳು. ನೀನು ಕೇಳಿದ ಈ ವಿಷಯವು ಬಹು ಮಂಗಲಕರವಾದುದು ಮನಸ್ಸಿಟ್ಟು ಕೇಳು. ಮುಂದಿನ ಕಥೆಯನ್ನು ವಿವರಿಸುವೆನು ಎಂದು ಹೇಳಿ ಕಥೆಯನ್ನು ಆರಂಭಿಸಿದನು.

ಶಿವಾ ಶಿವಶ್ಚ ವಿಪ್ರೇಂದ್ರ ದ್ವಯೋಶ್ಚ ಸುತಯೋಃ ಪರಂ ।
ದರ್ಶಂದರ್ಶಂ ಚ ತಲ್ಲೀಲಾಂ ಮಹತ್ಪ್ರೇಮ ಸಮಾವಹತ್ ॥ ೪ ॥

ಪಿತ್ರೋರ್ಲಾಲಯತೋಸ್ತತ್ರ ಸುಖಂ ಚಾತಿ ವ್ಯವರ್ಧತ ।
ಸದಾ ಪ್ರೀತ್ಯಾ ಮುದಾ ಚಾತಿಖೇಲನಂ ಚಕ್ರತುಸ್ಸುತೌ ॥ ೫ ॥

ತಾವೇವ ತನಯೌ ತತ್ರ ಮಾತಾಪಿತ್ರೋರ್ಮುನೀಶ್ವರ ।
ಮಹಾಭಕ್ತ್ಯಾ ಯದಾ ಯುಕ್ತೌ ಪರಿಚರ್ಯಾಂ ಪ್ರಚಕ್ರತುಃ ॥ ೬ ॥

ಷಣ್ಮುಖೇ ಚ ಗಣೇಶೇ ಚ ಪಿತ್ರೋಸ್ತದಧಿಕಂ ಸದಾ ।
ಸ್ನೇಹೋ ವ್ಯವರ್ಧತ ಮಹಾನ್ ಶುಕ್ಲಪಕ್ಷೇ ಯಥಾ ಶಶೀ ॥ ೭ ॥

ಕದಾಚಿತ್ತೌ ಸ್ಥಿತೌ ತತ್ರ ರಹಸಿ ಪ್ರೇಮಸಂಯುತೌ ।
ಶಿವಾ ಶಿವಶ್ಚ ದೇವರ್ಷೇ ಸುವಿಚಾರಪರಾಯಣೌ ॥ ೮ ॥

॥ ಶಿವಾಶಿವಾವೂಚತುಃ ॥

ವಿವಾಹಯೋಗ್ಯೌ ಸಂಜಾತೌ ಸುತಾವಿತಿ ಚ ತಾವುಭೌ ।
ವಿವಾಹಶ್ಚ ಕಥಂ ಕಾರ್ಯಃ ಪುತ್ರಯೋರುಭಯೋಃ ಶುಭಂ ॥ ೯ ॥

---

೪. ಎಲೈ ನಾರದನೇ, ಪಾರ್ವತೀಪರಮೇಶ್ವರರು ತಮ್ಮ ಷಣ್ಮುಖ ಮತ್ತು ಗಣಪತಿ ಎಂಬ ಇಬ್ಬರು ಮಕ್ಕಳ ಬಾಲಲೀಲೆಗಳನ್ನು ನೋಡಿ ಆನಂದಪಡುತ್ತಾ ಅವರಲ್ಲಿ ಅತಿಶಯವಾಗಿ ಪ್ರೀತಿಯನ್ನಿಟ್ಟು ಸಂತೋಷದಿಂದಿದ್ದರು.

೫-೬. ತಂದೆತಾಯಿಗಳು ಹೀಗೆ ಲಾಲಿಸುತ್ತಿರುವುದನ್ನು ಕಂಡು ಮಕ್ಕಳಿಬ್ಬರೂ ಸಂತೋಷದಿಂದ ತಮ್ಮ ಕ್ರೀಡಾದಿಗಳಿಂದ ಅವರನ್ನು ಸಂತೋಷಗೊಳಿಸುತ್ತಿದ್ದರು. ಅಲ್ಲದೆ ಪುತ್ರರಿಬ್ಬರೂ ತಂದೆತಾಯಿಗಳಲ್ಲಿ ಭಕ್ತಿಯಿಟ್ಟು ಅವರನ್ನು ಮಹಾಭಕ್ತಿಯಿಂದ ಶುಶ್ರೂಷೆಮಾಡುತ್ತಿದ್ದರು.

೭-೮. ಆ ಶಿವದಂಪತಿಗಳಿಗೆ ಈ ಷಣ್ಮುಖಸ್ವಾಮಿಯಲ್ಲಿಯೂ, ಗಣಪತಿಯಲ್ಲಿಯೂ ಸ್ನೇಹವು ದಿನದಿನಕ್ಕೂ ಶುಕ್ಲಪಕ್ಷದ ಚಂದ್ರನಂತೆ ಬೆಳೆಯುತ್ತ ಬಂತು. ಹಾಗಾಗಿ ಒಂದು ದಿನ ಅವರಿಬ್ಬರೂ ಪ್ರೀತಿಯಿಂದ ಕೂಡಿ ವಿಚಾರ ವಿಮರ್ಶೆ ಮಾಡುತ್ತಾ ಏಕಾಂತದಲ್ಲಿ ಕುಳಿತ್ತಿದ್ದರು.

೯-೧೦. ಆಗ ಪಾರ್ವತೀಪರಮೇಶ್ವರರು ಪರಸ್ಪರವಾಗಿ ಮಾತನಾಡುತ್ತಾ ನಮ್ಮ ಈ ಗಣಪತಿಷಣ್ಮುಖರು ಪ್ರೌಢರಾಗಿದ್ದಾರೆ. ಅವರಿಗೆ ವಿವಾಹಕ್ಕೆ ಸರಿಯಾದ

ಷಣ್ಮುಖಶ್ಚ ಪ್ರಿಯುತನೋ ಗಣೇಶಶ್ಚ ತಥೈವ ಚ ।
ಇತಿ ಚಿಂತಾಸಮುದ್ವಿಗ್ನೌ ಲೀಲಾನಂದೌ ಬಭೂವತುಃ ॥ ೧೦ ॥

ಸ್ವಪಿತ್ರೋರ್ವರ್ತಮಾಜ್ಞಾಯ ತೌ ಸುತಾವಪಿ ಸಂಸ್ಪೃಹೌ ।
ತದಿಚ್ಛಯಾ ವಿವಾಹಾರ್ಥಂ ಬಭೂವತುರಥೋ ಮುನೇ ॥ ೧೧ ॥

ಅಹಂ ಚ ಪರಿಣೇಷ್ಯಾಮಿ ಹ್ಯಹಂ ಚೈವ ಪುನಃ ಪುನಃ ।
ಪರಸ್ಪರಂ ಚ ನಿತ್ಯಂ ವೈ ವಿವಾದೇ ತತ್ಪರಾವುಭೌ ॥ ೧೨ ॥

ಶ್ರುತ್ವಾ ತದ್ವಚನಂ ತೌ ಚ ದಂಪತೀ ಜಗತಾಂ ಪ್ರಭೂ ।
ಲೌಕಿಕಾಚಾರಮಾಶ್ರಿತ್ಯ ವಿಸ್ಮಯಂ ಪರಮಂ ಗತೌ ॥ ೧೩ ॥

ಕಿಂ ಕರ್ತವ್ಯಂ ಕಥಂ ಕಾರ್ಯೋ ವಿವಾಹವಿಧಿರೇತಯೋಃ ।
ಇತಿ ನಿಶ್ಚಿತ್ಯ ತಾಭ್ಯಾಂ ವೈ ಯುಕ್ತಿಶ್ಚ ರಚಿತಾದ್ಭುತಾ ॥ ೧೪ ॥

ಕದಾಚಿತ್ಸಮಯೇ ಸ್ಥಿತ್ವಾ ಸಮಾಹೂಯ ಸ್ವಪುತ್ರಕೌ ।
ಕಥಯಾಮಾಸತುಸ್ತತ್ರ ಪುತ್ರಯೋಃ ಪಿತರೌ ತದಾ ॥ ೧೫ ॥

---

ವಯಸ್ಸು ಪ್ರಾಪ್ತವಾಗಿದೆ. ಹೇಗಾದರೂ ಮಾಡಿ ಈಗ ವಿವಾಹಮಾಡಬೇಕಲ್ಲವೇ ? ಎಂದು ಮಾತನಾಡಿಕೊಳ್ಳುತ್ತಿರಲು,

೧೧-೧೨. ಆ ಮಾತುಗಳನ್ನು ಕೇಳಿ ಷಣ್ಮುಖ ಮತ್ತು ಗಣಪರು ಸಂತೋಷ ದಿಂದ ವಿವಾಹಕ್ಕೆ ಒಪ್ಪಿದವರಾಗಿ ಪರಸ್ಪರ ನಾನು ಮುಂಚೆ ತಾನು ಮುಂಚೆ ವಿವಾಹ ವಾಗಬೇಕೆಂದು ವಿವಾದಕ್ಕೆ ಆರಂಭಿಸಿದರು.

೧೩-೧೪. ಇದನ್ನು ಕೇಳಿ ಆ ಶಿವದಂಪತಿಗಳು ಯಾರಿಗೆ ಮುಂಚೆ ವಿವಾಹ ಮಾಡಬೇಕೆಂಬ ವಿಚಾರದಲ್ಲಿ ನಿಶ್ಚಯಮಾಡಲಾರದೆ ಮುಂದೇನು ಮಾಡಬೇಕೆಂದೂ ಓಸಿ ಕೊನೆಗೆ ಒಂದು ಉಪಾಯವನ್ನು ಮಾಡಿದರು.

೧೫. ಹೀಗಿರಲ್ಲೊಂದು ದಿವಸ ಶಿವಪಾರ್ವತಿಯರು ತಮ್ಮ ಮಕ್ಕಳಿಬ್ಬರನ್ನೂ ಒರಹೇಳಿ ಈ ಒಂದು ಪಂಥದ ಕ್ರಮವನ್ನು ವಿವರಿಸಿದರು.

॥ ಶಿವಾಶಿವಾವೂಚತುಃ ॥

ಅಸ್ಮಾಕಂ ನಿಯಮಃ ಪೂರ್ವಂ ಕೃತಶ್ಚ ಸುಖದೋ ಹಿ ವಾಂ ।
ಶ್ರೂಯತಾಂ ಸ್ವಸುತೌ ಪ್ರೀತ್ಯಾ ಕಥಯಾವೋ ಯಥಾರ್ಥಕಂ ॥ ೧೬ ॥

ಸಮೌ ದ್ವಾವಪಿ ಸತ್ಪುತ್ರೌ ವಿಶೇಷೋ ನಾತ್ರ ಲಭ್ಯತೇ ।
ತಸ್ಮಾತ್ಪಣಃ ಕೃತಶ್ಚಂದಃ ಪುತ್ರಯೋರುಭಯೋರಪಿ ॥ ೧೭ ॥

ಯಶ್ಚೈವ ಪೃಥಿವೀಂ ಸರ್ವಾಂ ಕ್ರಾಂತ್ವಾ ಪೂರ್ವಮುಪಾವ್ರಜೇತ್ ।
ತಸ್ಯೈವ ಪ್ರಥಮಂ ಕಾರ್ಯೋ ವಿವಾಹಶ್ಶುಭಲಕ್ಷಣಃ ॥ ೧೮ ॥

॥ ಬ್ರಹ್ಮೋವಾಚ ॥

ತಯೋರೇವಂ ವಚಃ ಶ್ರುತ್ವಾ ಶರಜನ್ಮಾ ಮಹಾಬಲಃ ।
ಜಗಾಮ ಮಂದಿರಾತ್ತೂರ್ಣಂ ಪೃಥಿವೀಕ್ರಮಣಾಯ ವೈ ॥ ೧೯ ॥

ಗಣನಾಥಶ್ಚ ತತ್ರೈವ ಸಂಸ್ಥಿತೋ ಬುದ್ಧಿಸತ್ತಮಃ ।
ಸುಬುದ್ಧ್ಯಾ ಸಂವಿಚಾರ್ಯೇತಿ ಚಿತ್ತ ಏವ ಪುನಃ ಪುನಃ ॥ ೨೦ ॥

---

೧೬-೧೭. ಎಲೈ ಸುಪುತ್ರರೇ, ನೀವು ಈಗ ನಮ್ಮ ಮಾತೊಂದನ್ನು ಲಾಲಿಸಿರಿ. ನಮ್ಮ ಈ ವಚನವು ನಿಮಗೆ ಶುಭವನ್ನು ಉಂಟುಮಾಡುವುದು. ನಿಮ್ಮಿಬ್ಬರಲ್ಲಿಯೂ ನಮಗೆ ಒಂದೇ ಸಮನಾದ ಅಭಿಮಾನವಿದೆ. ಆದ್ದರಿಂದಲೇ ಈ ವಿವಾಹಸಂದರ್ಭದಲ್ಲಿ ಒಂದು ಪಂದ್ಯವನ್ನು ರಚಿಸಿದ್ದೇವೆ.

೧೮. ಈಗ ನಿಮ್ಮಲ್ಲಿ ಯಾರು ವೇಗವಾಗಿ ಹೊರಟು ಭೂಪ್ರದಕ್ಷಿಣೆಮಾಡಿ ಮೊದಲು ಬಂದು ಸೇರುವರೋ ಅವರಿಗೆ ಮೊದಲು ಮದುವೆಮಾಡಬೇಕೆಂದು ನಮ್ಮ ಸಂಕಲ್ಪವಿದೆ ಎಂದರು.

೧೯-೨೦. ತಾಯಿತಂದೆಗಳ ಮಾತುಗಳನ್ನು ಕೇಳಿ ಷಣ್ಮುಖನು ಒಡನೆಯೇ, ಮನೆಯಿಂದ ಹೊರಟು ಭೂಪ್ರದಕ್ಷಿಣೆಗಾಗಿ ಪ್ರಯಾಣಮಾಡಿದನು. ಗಣಪತಿ ಯಾದರೋ ಅತ್ಯಂತ ಬುದ್ಧಿಶಾಲಿಯಾದುದರಿಂದ ಏನನ್ನೋ ಯೋಚನೆಮಾಡುತ್ತಾ ಅಲ್ಲಿಯೇ ಕುಳಿತ್ತಿದ್ದನು.

ಕಿಂ ಕರ್ತವ್ಯಂ ಕ್ವ ಗಂತವ್ಯಂ ಲಂಘಿತುಂ ನೈವ ಶಕ್ಯತೇ ।
ಕ್ರೋಶಮಾತ್ರಂ ಗತಃ ಸ್ಯಾದ್ವೈ ಗಮ್ಯತೇ ನ ಮಯಾ ಪುನಃ ॥ ೨೧ ॥

ಕಿಂ ಪುನಃ ಪೃಥಿವೀಮೇತಾಂ ಕ್ರಾಂತ್ವಾ ಚೋಪಾರ್ಜಿತಂ ಸುಖಂ ।
ವಿಚಾರ್ಯೇತಿ ಗಣೇಶಸ್ತು ಯಚ್ಚಕಾರ ಶೃಣುಷ್ವ ತತ್ ॥ ೨೨ ॥

ಸ್ನಾನಂ ಕೃತ್ವಾ ಯಥಾನ್ಯಾಯಂ ಸಮಾಗತ್ಯ ಸ್ವಯಂ ಗೃಹಂ ।
ಉವಾಚ ಪಿತರಂ ತತ್ರ ಮಾತರಂ ಪುನರೇವ ಸಃ ॥ ೨೩ ॥

॥ ಗಣೇಶ ಉವಾಚ ॥

ಆಸನೇ ಸ್ಥಾಪಿತೇ ಹ್ಯತ್ರ ಪೂಜಾರ್ಥಂ ಭವತೋರಿಹ ।
ಭವಂತೌ ಸಂಸ್ಥಿತೌ ತಾತೌ ಪೂರ್ಯತಾಂ ಮೇ ಮನೋರಥಃ ॥ ೨೪ ॥

॥ ಬ್ರಹ್ಮೋವಾಚ ॥

ಇತಿ ಶ್ರುತ್ವಾ ವಚಸ್ತಸ್ಯ ಪಾರ್ವತೀಪರಮೇಶ್ವರೌ ।
ಆಸ್ಥಿತಾವಾಸನೇ ತತ್ರ ತತ್ಪೂಜಾಗ್ರಹಣಾಯ ವೈ ॥ ೨೫ ॥

---

* ೨೧-೨೨. ಮುಂದೇನುಮಾಡಲಿ, ಎಲ್ಲಿ ಹೋಗಲಿ ? ಹಾರಲು ನನಗೆ ಶಕ್ತಿಯಿಲ್ಲ. ಒಂದು ಹರಿದಾರಿ ಹೋದರೆ ಹಿಂದಿರುಗಲು ನನ್ನಿಂದ ಸಾಧ್ಯವಾಗುವುದಿಲ್ಲ. ಇಂತಹ ಅಗಾಧವಾದ ಭೂಮಿಯನ್ನು ಸುತ್ತುವುದು ಹೇಗೆ ? ಎಂದು ಯೋಚಿಸಿ ಕೊನೆಗೆ ಗಣನಾಯಕನು ಒಂದುಪಾಯವನ್ನು ಮಾಡಿದನು. ಅದನ್ನು ಹೇಳುವೆನು ಕೇಳು.

೨೩-೨೪. ಗಣಪತಿಯು ವಿಧಿವತ್ತಾಗಿ ಸ್ನಾನಮಾಡಿ ತಂದೆತಾಯಿಗಳ ಸಮೀಪಕ್ಕೆ ಬಂದು ಅವರನ್ನು ಕುರಿತು, ಪೂಜ್ಯರೇ, ಇಲ್ಲಿ ಎರಡು ಪೀಠಗಳನ್ನು ನಿಮಗಾಗಿ ಹಾಕಿರುವೆನು. ನೀವು ಈ ಪೀಠಗಳಲ್ಲಿ ಕುಳಿತು ನಾನು ಮಾಡುವ ಪೂಜೆಯನ್ನು ಸ್ವೀಕರಿಸಿ ನನ್ನ ಕೋರಿಕೆಯನ್ನು ನೆರವೇರಿಸಿರಿ ಎಂದು ಪ್ರಾರ್ಥಿಸಲು.

೨೫. ಮಗನು ಹೇಳಿದ ಮಾತುಗಳನ್ನು ಕೇಳಿ, ಪಾರ್ವತೀಪರಮೇಶ್ವರರು ಅದರಂತೆ ಒಪ್ಪಿ ಪೂಜಾಸ್ವೀಕಾರಕ್ಕಾಗಿ ಆ ಪೀಠಗಳಲ್ಲಿ ಕುಳಿತರು.

ತೇನಾಥ ಪೂಜಿತೌ ತೌ ಚ ಪ್ರಕ್ರಾಂತೌ ಚ ಪುನಃ ಪುನಃ ।
ಏವಂ ಚ ಕೃತವಾನ್ ಸಪ್ತ ಪ್ರಣಾಮಾಸ್ತು ತಥೈವ ಸಃ ॥ ೨೬ ॥

ಬದ್ಧಾಂಜಲಿರಥೋವಾಚ ಗಣೇಶೋ ಬುದ್ಧಿಸಾಗರಃ ।
ಸ್ತುತ್ವಾ ಬಹುತಿಥಸ್ತಾತ ಪಿತರೌ ಪ್ರೇಮವಿಹ್ವಲೌ ॥ ೨೭ ॥

॥ ಗಣೇಶ ಉವಾಚ ॥
ಭೋ ಮಾತರ್ಭೋಃ ಪಿತಸ್ತ್ವಂ ಚ ಶೃಣು ಮೇ ಪರಮಂ ವಚಃ ।
ಶೀಘ್ರಂ ಚೈವಾತ್ರ ಕರ್ತವ್ಯೋ ವಿವಾಹಶ್ಶೋಭನೋ ಮಮ ॥ ೨೮ ॥

॥ ಬ್ರಹ್ಮೋವಾಚ ॥
ಇತ್ಯೇವಂ ವಚನಂ ಶ್ರುತ್ವಾ ಗಣೇಶಸ್ಯ ಮಹಾತ್ಮನಃ ।
ಮಹಾಬುದ್ಧಿನಿಧೀ ತೌ ಚ ಪಿತರಾವೂಚತುಸ್ತದಾ ॥ ೨೯ ॥

॥ ಶಿವಾಶಿವಾವೂಚತುಃ ॥
ಪ್ರಕ್ರಾಮೇತ ಭವಾನ್ ಸಮ್ಯಕ್ ಪೃಥಿವೀಂ ಚ ಸಕಾನನಾಂ ।
ಕುಮಾರೋ ಗತವಾಂಸ್ತತ್ರ ತ್ವಂ ಗಚ್ಛ ಪುರ ಆವ್ರಜ ॥ ೩೦ ॥

---

೨೬-೨೭. ಗಣಪತಿಯು ಮಾತಾಪಿತೃಗಳಿಗೆ ವಿಧಿವತ್ತಾಗಿ ಪೂಜಿಸಿ, ಭಕ್ತಿ ಪುರಸ್ಸರವಾಗಿ ಏಳು ಸಾರಿ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿದನು. ಆಮೇಲೆ ಕೈಜೋಡಿಸಿಕೊಂಡು ಅವರ ಮುಂದೆ ನಿಂತು ಹೀಗೆ ಹೇಳಿದನು.

೨೮. ಗಣೇಶನಿಂತೆಂದನು ;—ಎಲೌ ತಾಯಿಯೇ, ಓ ಪೂಜ್ಯ ತಂದೆಯೇ, ಈಗ ನೀವು ನನಗೆ ಮೊದಲು ವಿವಾಹಮಾಡಬೇಕು. ನಾನು ಮುಂಚೆಯೇ ಭೂಪ್ರಕ್ಷಿಣೆಮಾಡಿರುವೆನು ಎಂದನು.

೨೯-೩೦. ಮಹಾತ್ಮನಾದ ಗಣಪತಿಯು ಹೇಳಿದ ಮಾತುಗಳನ್ನು ಕೇಳಿ ಬುದ್ಧಿವಂತರಾದ ಉಮಾಮಹೇಶ್ವರರು ಎಲೈ ವಿಘ್ನೇಶ್ವರನೇ, ನೀನು ಪರ್ವತಾರಣ್ಯಾದಿಗಳಿಂದ ಕೂಡಿರುವ ಈ ಭೂಮಿಯನ್ನು ಪ್ರದಕ್ಷಿಣೆಮಾಡಬೇಕು. ಅದಕ್ಕಾಗಿ ಕುಮಾರಸ್ವಾಮಿಯು ಆಗಲೇ ಹೋಗಿರುವನು. ನೀನೂ ಈ ಕೂಡಲೇ ಹೊರಡು ಎಂದು ಹೇಳಲು,

॥ ಬ್ರಹ್ಮೋವಾಚ ॥

ಇತ್ಯೇವಂ ವಚನಂ ಶ್ರುತ್ವಾ ಪಿತ್ರೋರ್ಗಣಪತಿರ್ದ್ರುತಂ ।
ಉವಾಚ ನಿಯತಸ್ತತ್ರ ವಚನಂ ಕ್ರೋಧಸಂಯುತಃ ॥ ೩೧ ॥

॥ ಗಣೇಶ ಉವಾಚ ॥

ಭೋ ಮಾತರ್ಭೋ ಪಿತರ್ಧರ್ಮರೂಪೌ ಪ್ರಾಜ್ಞೌ ಯುವಾಂ ಮತೌ ।
ಧರ್ಮತಃ ಶ್ರೂಯತಾಂ ಸಮ್ಯಗ್ವಚನಂ ಮಮ ಸತ್ತಮೌ ॥ ೩೨ ॥

ಮಯಾ ತು ಪೃಥಿವೀ ಕ್ರಾಂತಾ ಸಪ್ತವಾರಂ ಪುನಃ ಪುನಃ ।
ಏವಂ ಕಥಂ ಬ್ರುವಾತೇ ವೈ ಪುನಶ್ಚ ಪಿತರಾವಿಹ ॥ ೩೩ ॥

॥ ಬ್ರಹ್ಮೋವಾಚ ॥

ತದ್ವಚಸ್ತು ತದಾ ಶ್ರುತ್ವಾ ಲೌಕಿಕೀಂ ಗತಿಮಾಶ್ರಿತೌ ।
ಮಹಾಲೀಲಾಕರೌ ತತ್ರ ಪಿತರಾವೂಚತುಶ್ಚ ತಂ ॥ ೩೪ ॥

॥ ಪಿತರಾವೂಚತುಃ ॥

ಕದಾ ಕ್ರಾಂತಾ ತ್ವಯಾ ಪುತ್ರ ಪೃಥಿವೀ ಸುಮಹತ್ತರಾ ।
ಸಪ್ತದ್ವೀಪಾ ಸಮುದ್ರಾಂತಾ ಮಹದ್ಭಿರ್ಗಹನೈರ್ಯುತಾ ॥ ೩೫ ॥

---

೩೧-೩೩. ಆ ಮಾತುಗಳನ್ನು ಕೇಳಿ ಗಣಪತಿಯು ಕೋಪಕೊಂಡು ಎಲೈ ಪೂಜ್ಯರಾದ ತಾಯಿತಂದೆಗಳೇ, ಕೇಳಿ. ನೀವಿಬ್ಬರೂ ಧರ್ಮಸ್ವರೂಪಿಗಳು. ಲೋಕದ ನ್ಯಾಯದಲ್ಲಿ ನುರಿತವರು. ಈಗ ಭೂಮಿಯನ್ನು ಏಳುಸಾರಿ ಪ್ರದಕ್ಷಿಣೆಮಾಡಿರುತ್ತೇನೆ. ಇನ್ನೂ ಭೂಮಿಯನ್ನು ಸುತ್ತು ಎಂದು ಹೇಳುತ್ತಿರುವಿರಲ್ಲಾ, ಇದು ನ್ಯಾಯವೇ ಎಂದು ಪ್ರಶ್ನೆಮಾಡಿದನು.

೩೪. ತನ್ನ ಮಗನ ಮಾತುಗಳನ್ನು ಕೇಳಿ ಲೀಲಾಪ್ರದರ್ಶಕರಾದ ಆ ಶಿವ ದಂಪತಿಗಳು ಏನೂ ತಿಳಿಯದವರಂತೆ ಹೀಗೆ ಮಾತನಾಡಿದರು.

೩೫. ಅಯ್ಯಾ ಗಣಪತಿಯೇ, ಸಪ್ತದ್ವೀಪಗಳಿಂದಲೂ, ಗಹನವಾದ ಕಾಡುಗಳಿಂದಲೂ ಆವೃತವಾಗಿ ಸಮುದ್ರಪರ್ಯಂತವಾಗಿರುವ ಭೂಮಿಯನ್ನು ನೀನು ಯಾವಾಗ ಪ್ರದಕ್ಷಿಣೆಮಾಡಿದೆ ಎಂದು ಪ್ರಶ್ನಿಸಿದರು.

॥ ಬ್ರಹ್ಮೋವಾಚ ॥

ತಯೋರೇವಂ ವಚಶ್ಶ್ರುತ್ವಾ ಶಿವಾಶಂಕರಯೋರ್ಮುನೇ ।
ಮಹಾಬುದ್ಧಿನಿಧಿಃ ಪುತ್ರೋ ಗಣೇಶೋ ವಾಕ್ಯಮಬ್ರವೀತ್ ॥ ೩೬ ॥

॥ ಗಣೇಶ ಉವಾಚ ॥

ಭವತೋಃ ಪೂಜನಂ ಕೃತ್ವಾ ಶಿವಾಶಂಕರಯೋರಹಂ ।
ಸ್ವಬುದ್ಧ್ಯಾ ಹಿ ಸಮುದ್ರಾಂತಪೃಥ್ವೀಕೃತಪರಿಕ್ರಮಃ ॥ ೩೭ ॥

ಇತ್ಯೇವಂ ವಚನಂ ವೇದೇ ಶಾಸ್ತ್ರೇ ವಾ ಧರ್ಮಸಂಚಯೇ ।
ವರ್ತತೇ ಕಿಂ ಚ ತತ್ತಥ್ಯಂ ನ ಹಿ ಕಿಂ ತಥ್ಯಮೇವ ವಾ ॥ ೩೮ ॥

ಪಿತ್ರೋಶ್ಚ ಪೂಜನಂ ಕೃತ್ವಾ ಪ್ರಕ್ರಾಂತಿಂ ಚ ಕರೋತಿ ಯಃ ।
ತಸ್ಯ ವೈ ಪೃಥಿವೀಜನ್ಯಫಲಂ ಭವತಿ ನಿಶ್ಚಿತಂ ॥ ೩೯ ॥

ಅಪಹಾಯ ಗೃಹೇ ಯೋ ವೈ ಪಿತರೌ ತೀರ್ಥಮಾವ್ರಜೇತ್ ।
ತಸ್ಯ ಪಾಪಂ ತಥಾ ಪ್ರೋಕ್ತಂ ಹನನೇ ಚ ತಯೋರ್ಯಥಾ ॥ ೪೦ ॥

---

೩೬ ತಂದೆತಾಯಿಗಳ ಮಾತುಗಳನ್ನು ಕೇಳಿ ಬುದ್ಧಿಸಾಗರನಾದ ಗಣಪತಿಯು ಮಾತಾಪಿತೃಗಳನ್ನು ಕುರಿತು,

೩೭-೩೮. ಪೂಜ್ಯರೇ, ಶಿವಾಶಂಕರರಾದ ನಿಮ್ಮ ಪೂಜೆಯನ್ನು ನಾನು ಭಕ್ತಿಯಿಂದ ಮಾಡಿ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿರುವೆನು. ಇದರಿಂದ ನಾನು ಸಮುದ್ರಪರ್ಯಂತವಾದ ಭೂಮಿಯನ್ನೆಲ್ಲಾ ಸುತ್ತಿದಂತಾಗಿದೆ. ಇದೇ ವಿಚಾರವನ್ನು ಸಮಸ್ತ ವೇದಶಾಸ್ತ್ರಗಳೂ ಧರ್ಮಗ್ರಂಥಗಳೂ ಉದ್ಘೋಷಿಸುತ್ತಿವೆ. ಅದು ನಿಜವೋ ಸುಳ್ಳೋ ನೀವೇ ಹೇಳಬೇಕು.

೩೯-೪೦. ಯಾವನು ತಾಯಿತಂದೆಯರನ್ನು ಭಕ್ತಿಯಿಂದರ್ಚಿಸಿ ಪ್ರದಕ್ಷಿಣೆ ನಮಸ್ಕಾರಮಾಡುವನೊ, ಆತನಿಗೆ ಭೂಪ್ರದಕ್ಷಿಣೆಯ ಫಲವು ಲಭಿಸುವುದು. ಇದು ನಿಶ್ಚಯ. ಯಾವನು ಮಾತಾಪಿತೃಗಳನ್ನು ಮನೆಯಲ್ಲಿಯೇ ಬಿಟ್ಟು ತೀರ್ಥಯಾತ್ರೆಗೆ ಹೋಗುವನೋ ಆತನಿಗೆ ಮಾತಾಪಿತೃವಧದಿಂದ ಬರುವ ಪಾಪವು ಘಟಿಸುವುದು.

ಪುತ್ರಸ್ಯ ಚ ಮಹತ್ತೀರ್ಥಂ ಪಿತ್ರೋಶ್ಚರಣಪಂಕಜಂ ।
ಅನ್ಯತೀರ್ಥಂ ತು ದೂರೇ ವೈ ಗತ್ವಾ ಸಂಪ್ರಾಪ್ಯತೇ ಪುನಃ ॥ ೪೧ ॥

ಇದಂ ಸನ್ನಿಹಿತಂ ತೀರ್ಥಂ ಸುಲಭಂ ಧರ್ಮಸಾಧನಂ ।
ಪುತ್ರಸ್ಯ ಚ ಸ್ತ್ರಿಯಶ್ಚೈವ ತೀರ್ಥಂ ಗೇಹೇ ಸುಶೋಭನಂ ॥ ೪೨ ॥

ಇತಿ ಶಾಸ್ತ್ರಾಣಿ ವೇದಾಶ್ಚ ಭಾಷಂತೇ ಯನ್ನಿರಂತರಂ ।
ಭವದ್ಭ್ಯಾಂ ತತ್ಪುನಃಕರ್ತವ್ಯಮಸತ್ಯಂ ಪುನರೇವ ಚ ॥ ೪೩ ॥

ಭವದೀಯಂ ತ್ವಿದಂ ರೂಪಮಸತ್ಯಂ ಚ ಭವೇದಿಹ ।
ತದಾ ವೇದೋಽಪ್ಯಸತ್ಯೋ ವೈ ಭವೇದಿತಿ ನ ಸಂಶಯಃ ॥ ೪೪ ॥

ಶೀಘ್ರಂ ಚ ಭವಿತವ್ಯೋ ಮೇ ವಿವಾಹಃ ಕ್ರಿಯತಾಂ ಶುಭಃ ।
ಅಥವಾ ವೇದಶಾಸ್ತ್ರಂ ಚ ವ್ಯಲೀಕಂ ಕಥ್ಯತಾಮಿತಿ ॥ ೪೫ ॥

ದ್ವಯೋಃ ಶ್ರೇಷ್ಠತಮಂ ಮಧ್ಯೇ ಯತ್ಸ್ಯಾತ್ಸಮ್ಯಗ್ವಿಚಾರ್ಯ ತತ್ ।
ಕರ್ತವ್ಯಂ ಚ ಪ್ರಯತ್ನೇನ ಪಿತರೌ ಧರ್ಮರೂಪಿಣೌ ॥ ೪೬ ॥

---

೪೧-೪೨. ಮಗನಿಗೆ ಮಾತಾಪಿತೃಗಳ ಪಾದಪೂಜೆಯೇ ಉತ್ತಮವಾದ ತೀರ್ಥವು. ಉಳಿದ ತೀರ್ಥಗಳೆಲ್ಲ ಅವನಿಗೆ ಅಷ್ಟು ಪ್ರಶಸ್ತಗಳಲ್ಲ. ಅಲ್ಲದೆ ಕೇವಲ ಅಲ್ಪ ಫಲವನ್ನು ಮಾತ್ರ ಕೊಡುವುವು. ಈ ಪಾದತೀರ್ಥವಾದರೋ ಮಗನಿಗೂ ಮಗಳಿಗೂ ಅತ್ಯಂತ ಮಂಗಲಫಲಪ್ರದವಾದವುಗಳು.

೪೩-೪೪. ಹೀಗೆಂದು ಸಕಲ ವೇದಶಾಸ್ತ್ರಗಳೂ ಸಾರುತ್ತಿವೆ. ನೀವು ಅದನ್ನು ಸುಳ್ಳು ಎಂದರೂ, ಅಥವಾ ನೀವು ಮಾತಾಪಿತೃಗಳಲ್ಲವೆಂದು ದೃಢಪಡಿಸಿದರೂ ನಾನೂ ಭೂಪ್ರದಕ್ಷಿಣೆಗೆ ಹೊರಡುವೆನು. ಆ ಸಂದರ್ಭದಲ್ಲಿ ವೇದವೆಲ್ಲಾ ಸುಳ್ಳೆನಿಸುತ್ತವೆ.

೪೫-೪೬. ಈಗ ಧರ್ಮಸ್ವರೂಪಿಗಳಾದ ನೀವು ನಿಮ್ಮ ಪಂದ್ಯದಂತೆ ಮೊದಲು ಭೂಪ್ರದಕ್ಷಿಣೆಮಾಡಿರುವ ನನಗೆ ವಿವಾಹಮಾಡಬೇಕು. ಇಲ್ಲದಿದ್ದರೆ ವೇದಶಾಸ್ತ್ರಗಳನ್ನು ಸುಳ್ಳೆಂದು ಒಪ್ಪಿಕೊಳ್ಳಿ. ಈ ಎರಡು ಕಾರ್ಯಗಳಲ್ಲಿ ಯಾವುದು ಶ್ರೇಷ್ಠವೋ ಅದನ್ನು ಮಾಡಿರಿ ಎಂದನು.

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ಪಾರ್ವತೀಪುತ್ರಸ್ಸ ಗಣೇಶಃ ಪ್ರಕೃಷ್ಟಧೀಃ ।
ವಿರರಾಮ ಮಹಾಜ್ಞಾನೀ ತದಾ ಬುದ್ಧಿಮತಾಂ ವರಃ ॥ ೪೭ ॥

ತೌ ದಂಪತೀ ಚ ವಿಶ್ವೇಶೌ ಪಾರ್ವತೀಶಂಕರೌ ತದಾ ।
ಇತಿ ಶ್ರುತ್ವಾ ವಚಸ್ತಸ್ಯ ವಿಸ್ಮಯಂ ಪರಮಂ ಗತೌ ॥ ೪೮ ॥

ತತಶ್ಶಿವಾ ಶಿವಶ್ಚೈವ ಪುತ್ರಂ ಬುದ್ಧಿವಿಚಕ್ಷಣಂ ।
ಸುಪ್ರಶಸ್ಯೋಚತುಃ ಪ್ರೀತ್ಯಾ ತೌ ಯಥಾರ್ಥಪ್ರಭಾಷಿಣಂ ॥ ೪೯ ॥

॥ ಶಿವಾಶಿವಾವೂಚತುಃ ॥

ಪುತ್ರ ತೇ ವಿಮಲಾ ಬುದ್ಧಿಸ್ಸಮುತ್ಪನ್ನಾ ಮಹಾತ್ಮನಃ ।
ತ್ವಯೋಕ್ತಂ ಯದ್ವಚಶ್ಚೈವ ತತಶ್ಚೈವ ಚ ನಾನ್ಯಥಾ ॥ ೫೦ ॥

ಸಮುತ್ಪನ್ನೇ ಚ ದುಃಖೇ ಚ ಯಸ್ಯ ಬುದ್ಧಿರ್ವಿಶಿಷ್ಯತೇ ।
ತಸ್ಯ ದುಃಖಂ ವಿನಶ್ಯೇತ ಸೂರ್ಯೇ ದೃಷ್ಟೇ ಯಥಾ ತಮಃ ॥ ೫೧ ॥

ಬುದ್ಧಿರ್ಯಸ್ಯ ಬಲಂ ತಸ್ಯ ನಿರ್ಬುದ್ಧೇಸ್ತು ಕುತೋ ಬಲಂ ।
ಕೂಪೇ ಸಿಂಹೋ ಮದೋನ್ಮತ್ತಶ್ಶಶಕೇನ ನಿಪಾತಿತಃ ॥ ೫೨ ॥

---

೪೭-೪೯. ಹೀಗೆ ಗಣಪತಿಯು ಯುಕ್ತಿಯುಕ್ತವಾಗಿ ಮಾತನಾಡಿ ಸುಮ್ಮನಾದನು. ಆಗ ಶಿವದಂಪತಿಗಳು ಮಗನ ಮಾತಿಗೆ ಆಶ್ಚರ್ಯಗೊಂಡು ಮರುಳಾಗಿ ಹೋದರು. ಅಲ್ಲದೆ ಮಗನ ಬುದ್ಧಿವಂತಿಕೆಗೆ ಅತಿಶಯವಾಗಿ ಮೆಚ್ಚಿ ಅವನನ್ನು ಪ್ರಶಂಸಿಸುತ್ತಾ ಹೀಗೆ ಹೇಳಿದರು.

೫೦-೫೧. ಎಲೈ ಪುತ್ರನೇ, ನೀನು ಮಹಾಮಹಿಮನು, ನಿನ್ನ ಮಾತೆಲ್ಲವೂ ಸತ್ಯವೇ. ನಾವು ಅದಕ್ಕೆ ಬೇರೇ ಹೇಳುವಂತೆಯೇ ಇಲ್ಲ. ಕಷ್ಟವು ಒದಗಿದಾಗ ಯಾವನು ಬುದ್ಧಿಶಕ್ತಿಯನ್ನು ಉಪಯೋಗಿಸುವನೋ ಆತನು, ಸೂರ್ಯನಿಂದ ಕತ್ತಲೆಯು ತೊಲಗುವಂತೆ ತನ್ನ ತಾಪತ್ರಯಗಳನ್ನು ಬುದ್ಧಿಯಿಂದ ಪರಿಹರಿಸಿಕೊಳ್ಳುವನು.

೫೨-೫೩. ಮನುಷ್ಯರಿಗೆ ಬುದ್ಧಿಬಲವೇ ನಿಜವಾದ ಬಲ. ಬುದ್ಧಿಶೂನ್ಯನು ಎಂದಿಗೂ ದುರ್ಬಲನೇ. ಬಲದಲ್ಲಿ ಎಷ್ಟೇ ಹೆಚ್ಚಿದ್ದರೂ ಸಿಂಹವು ಮೊಲದ ಯುಕ್ತಿ

ವೇದಶಾಸ್ತ್ರಪುರಾಣೇಷು ಬಾಲಕಸ್ಯ ಯಥೋದಿತಂ ।
ತ್ವಯಾ ಕೃತಂ ತು ತತ್ಸರ್ವಂ ಧರ್ಮಸ್ಯ ಪರಿಪಾಲನಂ ॥ ೫೩ ॥

ಸಮ್ಯಕ್ಕೃತಂ ತ್ವಯಾ ಯಚ್ಚ ತತ್ಕೇನಾಪಿ ಭವೇದಿಹ ।
ಆವಾಭ್ಯಾಂ ಮಾನಿತಂ ತಚ್ಚ ನಾನ್ಯಥಾ ಕ್ರಿಯತೇಽಧುನಾ ॥ ೫೪ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ತೌ ಸಮಾಶ್ವಾಸ್ಯ ಗಣೇಶಂ ಬುದ್ಧಿಸಾಗರಂ ।
ವಿವಾಹಕರಣೇ ಚಾಸ್ಯ ಮತಿಂ ಚಕ್ರತುರುತ್ತಮಾಂ ॥ ೫೫ ॥

ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಕುಮಾರಖಂಡೇ
ಗಣೇಶವಿವಾಹೋಪಕ್ರಮೋ ನಾಮೈಕೋನ ವಿಂಶೋಽಧ್ಯಾಯಃ

---

ಯಿಂದ ಮುಸುವಿಗೆ ಬಿದ್ದಿತು. ಓ ಗಣಪತಿಯೇ! ವೇದಶಾಸ್ತ್ರಪುರಾಣಗಳಲ್ಲಿ ಬಾಲಕರು ಆಚರಿಸಬೇಕಾದ ಧರ್ಮಗಳನ್ನೆಲ್ಲಾ ನೀನು ಆಚರಿಸಿರುವೆ. ಅದರಿಂದ ನೀನು ಧರ್ಮಪರಿಪಾಲನೆಯನ್ನು ಮಾಡಿದಂತಾಯಿತು.

೫೪-೫೫. ನೀನು ಮಾಡಿದ ಕಾರ್ಯವೂ, ಆಡಿದ ಮಾತೂ ಸಂಪೂರ್ಣವಾಗಿ ಮಾನ್ಯವಾದದ್ದೇ. ನಾವಿಬ್ಬರೂ ಅದಕ್ಕೆ ಒಪ್ಪಿರುವೆವು ಎಂದು ಆ ಪರಶಿವಪಾರ್ವತಿಯರು ಬುದ್ಧಿಶಾಲಿಯಾದ ಗಣಪತಿಯನ್ನು ಹೊಗಳಿ ಅವನ ವಿವಾಹವನ್ನು ಮೊದಲು ನಡೆಸಲು ಪ್ರಯತ್ನಮಾಡಿದರು.

ಇಲ್ಲಿಗೆ ಶಿವಮಹಾಪುರಾಣದ ಎರಡನೆಯ ರುದ್ರಸಂಹಿತೆಯ ನಾಲ್ಕನೆಯ
ಕುಮಾರಖಂಡದಲ್ಲಿ ಗಣೇಶವಿವಾಹಪ್ರಾರಂಭ ವರ್ಣನವೆಂಬ
ಹತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ರುದ್ರಸಂಹಿತಾಯಾಂ ಕುಮಾರಖಂಡೇ

## ವಿಂಶೋऽಧ್ಯಾಯಃ

---

॥ ಬ್ರಹ್ಮೋವಾಚ ॥

ಏತಸ್ಮಿನ್ನಂತರೇ ತತ್ರ ವಿಶ್ವರೂಪಃ ಪ್ರಜಾಪತಿಃ ।
ತದುದ್ಯೋಗಂ ಸಂವಿಚಾರ್ಯ ಸುಖಮಾಪ ಪ್ರಸನ್ನಧೀಃ ॥ ೧ ॥

ವಿಶ್ವರೂಪಪ್ರಜೇಶಸ್ಯ ದಿವ್ಯರೂಪೇ ಸುತೇ ಉಭೇ ।
ಸಿದ್ಧಿಬುದ್ಧಿರಿತಿ ಖ್ಯಾತೇ ಉಭೇ ಸರ್ವಾಂಗಶೋಭನೇ ॥ ೨ ॥

ತಾಭ್ಯಾಂ ಚೈವ ಗಣೇಶಸ್ಯ ಗಿರಿಜಾ ಶಂಕರಃ ಪ್ರಭೂ ।
ಮಹೋತ್ಸವಂ ವಿವಾಹಂ ಚ ಕಾರಯಾಮಾಸತುರ್ಮುದಾ ॥ ೩ ॥

ಸಂತುಷ್ಟಾ ದೇವತಾಸ್ಸರ್ವಾಸ್ತದ್ವಿವಾಹೇ ಸಮಾಗಮನ್ ।
ಯಥಾ ಚೈವ ಶಿವಸ್ಯೈವ ಗಿರಿಜಾಯಾಂ ಮನೋರಥಃ ॥ ೪ ॥

---

ಇಪ್ಪತ್ತನೆಯ ಅಧ್ಯಾಯವು.

೧. ಬ್ರಹ್ಮನು ಹೇಳಿದನು:—ಈ ಕಾಲಕ್ಕೆ ಸರಿಯಾಗಿ ವಿಶ್ವರೂಪನೆಂಬ ಬ್ರಹ್ಮನು, ಆ ಗಣಪತಿಗೆ ವಿವಾಹವೆಂಬುದನ್ನು ತಿಳಿದು ಆನಂದಪಟ್ಟನು.

೨. ಆ ವಿಶ್ವರೂಪನಿಗೆ ಸಿದ್ಧಿ, ಬುದ್ಧಿ ಎಂಬ ಇಬ್ಬರು ಸರ್ವಾಂಗ ಸುಂದರಿಯರಾದ ಹೆಣ್ಣು ಮಕ್ಕಳು ಇದ್ದರು.

೩-೪. ಆ ಕನ್ಯೆಯರನ್ನು ಗಣೇಶನಿಗೆ ಮದುವೆಮಾಡಿಕೊಟ್ಟನು. ಎಲ್ಲರೂ ಮಹೋತ್ಸವವನ್ನು ಆಚರಿಸಿದರು. ದೇವತೆಗಳೆಲ್ಲರೂ ವಿವಾಹಕ್ಕೆ ಬಂದಿದ್ದರು. ಪಾರ್ವತೀಪರಮೇಶ್ವರರ ಮನೋರಥವು ಸಂಪೂರ್ಣವಾಗಿ ನೆರವೇರಿತು.

ತಥಾ ಚ ವಿಶ್ವಕರ್ಮಾಽಸೌ ವಿವಾಹಂ ಕೃತವಾಂಸ್ತಥಾ ।
ತಥಾ ಚ ಋಷಯೋ ದೇವಾ ಲೇಭಿರೇ ಪರಮಾಂ ಮುದಂ ॥ ೫ ॥

ಗಣೇಶೋಽಪಿ ತದಾ ತಾಭ್ಯಾಂ ಸುಖಂ ಚೈವಾಪ್ತಿಚಿಂತಕಂ ।
ಪ್ರಾಪ್ತವಾಂಶ್ಚ ಮುನೇ ತತ್ತು ವರ್ಣಿತುಂ ನೈವ ಶಕ್ಯತೇ ॥ ೬ ॥

ಕಿಯತಾ ಚೈವ ಕಾಲೇನ ಗಣೇಶಸ್ಯ ಮಹಾತ್ಮನಃ ।
ದ್ವಯೋಃ ಪತ್ನ್ಯೋಶ್ಚ ದ್ವೌ ದಿವ್ಯೌ ತಸ್ಯ ಪುತ್ರೌ ಬಭೂವತುಃ ॥ ೭ ॥

ಸಿದ್ಧೇರ್ಗಣೇಶಪತ್ನ್ಯಾಸ್ತು ಕ್ಷೇಮನಾಮಾ ಸುತೋಽಭವತ್ ।
ಬುದ್ಧೇರ್ಲಾಭಾಭಿಧಃ ಪುತ್ರೋ ಆಸೀತ್ಪರಮಶೋಭನಃ ॥ ೮ ॥

ಏವಂ ಸುಖಮಚಿಂತ್ಯಂ ವೈ ಭುಂಜಾನೇ ಹಿ ಗಣೇಶ್ವರೇ ।
ಆಜಗಾಮ ದ್ವಿತೀಯಶ್ಚ ಕ್ರಾಂತ್ವಾ ಪೃಥ್ವೀಂ ಸುತಸ್ತದಾ ॥ ೯ ॥

---

೫. ಹೆಣ್ಣಿನ ತಂದೆಯಾದ ವಿಶ್ವಕರ್ಮಬ್ರಹ್ಮನೂ ತನ್ನ ಮಕ್ಕಳಿಗೆ ವಿವಾಹವನ್ನು ಮಾಡಿ ಪಾರ್ವತೀಪರಮೇಶ್ವರರಂತೆ ತಾನೂ ಸಂತೋಷಪಟ್ಟನು. ಋಷಿಗಳೂ ದೇವತೆಗಳೂ ಸಹ ಆನಂದಪಟ್ಟರು.

೬. ಗಣೇಶನೂ ಕೂಡ ಅವರಿಬ್ಬರೊಡನೆ ಅತ್ಯಂತ ಸ್ನೇಹದಿಂದ ವ್ಯವಹರಿಸುತ್ತಾ ಸುಖದಿಂದಿದ್ದನು. ಎಲೈ ಮುನಿಯೇ, ಅದನ್ನು ವರ್ಣಿಸಲು ಸಾಧ್ಯವಿಲ್ಲ.

೭. ಕೆಲವು ಕಾಲಾನಂತರ ಮಹಾತ್ಮನಾದ ಆ ಗಣಪತಿಗೆ ಇಬ್ಬರು ಪತ್ನಿಯರಲ್ಲಿಯೂ ಇಬ್ಬರು ದಿವ್ಯಾಕಾರವುಳ್ಳ ಪುತ್ರರು ಹುಟ್ಟಿದರು.

೮. ಸಿದ್ಧಿ ಎಂಬುವಳಲ್ಲಿ ಕ್ಷೇಮನೆಂದು ಹೆಸರುಳ್ಳವನೂ, ಬುದ್ಧಿಯಲ್ಲಿ ಲಾಭನೆಂಬುವನೂ ಹುಟ್ಟಿದರು. ಅವರಿಬ್ಬರೂ ಮಂಗಳಕರರು.

೯. ಈರೀತಿಯಾಗಿ ಗಣಪತಿಯು ಅಪಾರವಾದ ಸುಖವನ್ನನುಭವಿಸುತ್ತಿರುವಲ್ಲಿ ಶಿವನ ಎರಡನೆಯ ಮಗನಾದ ಷಣ್ಮುಖನು ಪೃಥಿವಿಯೆಲ್ಲವನ್ನೂ ಪ್ರದಕ್ಷಿಣೆಮಾಡಿ ಅಲ್ಲಿಗೆ ಬಂದನು.

ತಾವಚ್ಚ ನಾರದೇಸ್ತೈವ ಪ್ರಾಪ್ತೋ ಗೇಹೇ ಮಹಾತ್ಮನಾ ।
ಯಥಾರ್ಥಂ ವಚ್ಮಿ ನೋಽಸತ್ಯಂ ನ ಛಲೇನ ನ ಮತ್ಸರಾತ್ ॥ ೧೦ ॥

ಪಿತೃಭ್ಯಾಂ ತು ಕೃತಂ ಯಚ್ಚ ಶಿವಯಾ ಶಂಕರೇಣ ತೇ ।
ತನ್ನ ಕುರ್ಯಾತ್ಪರೋ ಲೋಕೇ ಸತ್ಯಂ ಸತ್ಯಂ ಬ್ರವೀಮ್ಯಹಂ ॥ ೧೧ ॥

ನಿಷ್ಕಾಸ್ಯ ತ್ವಾಂ ಕುಕ್ರಮಣಂ ಮಿಷಮುತ್ಪಾದ್ಯ ಯತ್ನತಃ ।
ಗಣೇಶಸ್ಯ ವರೋಽಕಾರಿ ವಿವಾಹಃ ಪರಶೋಭನಃ ॥ ೧೨ ॥

ಗಣೇಶಸ್ಯ ಕೃತೋದ್ವಾಹೋ ಲಬ್ಧವಾನ್ ಸ್ತ್ರೀದ್ವಯಂ ಮುದಾ ।
ವಿಶ್ವರೂಪಪ್ರಜೇಶಸ್ಯ ಕನ್ಯಾರತ್ನಂ ಮಹೋತ್ತಮಂ ॥ ೧೩ ॥

ಪುತ್ರದ್ವಯಂ ಲಲಾಭಾಸೌ ದ್ವಯೋಃ ಪತ್ನ್ಯೋಃ ಶುಭಾಂಗಯೋಃ ।
ಸಿದ್ಧೇಃ ಕ್ಷೇಮಂ ತಥಾ ಬುದ್ಧೇರ್ಲಾಭಂ ಸರ್ವಸುಖಪ್ರದಂ ॥ ೧೪ ॥

ಪತ್ನ್ಯೋರ್ದ್ವಯೋರ್ಗಣೇಶೋಽಸೌ ಲಬ್ಧ್ವಾ ಪುತ್ರದ್ವಯಂ ಶುಭಂ ।
ಮಾತಾಪಿತ್ರೋರ್ಮತೇನೈವ ಸುಖಂ ಭುಂಕ್ತೇ ನಿರಂತರಂ ॥ ೧೫ ॥

---

೧೦. ಆ ಸಮಯದಲ್ಲಿ ನಾರದನು ಷಣ್ಮುಖನ ಮನೆಗೆ ಬಂದು ಅವನನ್ನು ಕುರಿತು ಎಲೈ ಷಣ್ಮುಖನೇ, ನಾನು ನಿಜವಾದ ವಿಷಯವನ್ನು ಹೇಳುವೆನು ಕೇಳು. ದ್ವೇಷಕ್ಕಾಗಲಿ ಅಥವಾ ಮೋಸಕ್ಕಾಗಲಿ ಸುಳ್ಳಾಡುವವನಲ್ಲ.

೧೧-೧೨. ನಿನ್ನ ಮಾತಾಪಿತೃಗಳಾದ ಪಾರ್ವತೀಪರಮೇಶ್ವರರು ನಿನ್ನ ವಿಷಯ ದಲ್ಲಿ ನಡೆದುಕೊಂಡಿರುವುದನ್ನು ನೋಡಿದರೆ ಲೋಕದಲ್ಲಿ ಈ ರೀತಿ ಯಾರೂ ತಮ್ಮ ಮಕ್ಕಳ ವಿಷಯದಲ್ಲಿ ನಡೆಯಲಾರರು. ಯಾವುದೋ ನೆಪವನ್ನು ಹೂಡಿ ನಿನ್ನನ್ನು ಮನೆಯಿಂದ ಓಡಿಸಿ ಗಣಪತಿಯನ್ನು ಮನೆಯಲ್ಲಿಯೇ ಇರಿಸಿಕೊಂಡು ಅವನಿಗೆ ವಿವಾಹವನ್ನೂ ಮಾಡಿರುವರು.

೧೩-೧೫. ಆ ಗಣಪತಿಯು ವಿಶ್ವಕರ್ಮಬ್ರಹ್ಮನ ಇಬ್ಬರು ಹೆಣ್ಣುಮಕ್ಕಳನ್ನು ಮದುವೆಮಾಡಿಕೊಂಡು ಸುಖವಾಗಿರುವನು. ಆ ಮಂಗಳಾಂಗಿಯರಾದ ಸಿದ್ಧಿ, ಬುದ್ಧಿ ಎಂಬುವರಲ್ಲಿ ಮೊದಲನೆಯವಳಲ್ಲಿ ಕ್ಷೇಮ ಎಂಬುವನನ್ನೂ ಎರಡನೆಯವಳಲ್ಲಿ ಲಾಭ ಎಂಬುವನನ್ನೂ, ಈರೀತಿ ಇಬ್ಬರು ಮಕ್ಕಳನ್ನು ಪಡೆದು ಆನಂದಪಡುತ್ತಿರು ವನು. ಮತ್ತು ತಾಯಿತಂದೆಗಳ ಮಾತಿನಂತೆ ನಡೆಯುತ್ತಾ ಯಾವಾಗಲೂ ಸುಖ ದಿಂದಿರುವನು.

ಭವತಾ ಪೃಥಿವೀ ಕ್ರಾಂತಾ ಸಸಮುದ್ರಾ ಸಕಾನನಾ ।
ತಚ್ಛಲಾಜ್ಞಾನಶಾತ್ತಾತ ತಸ್ಯ ಜಾತಂ ಫಲಂ ತ್ವಿದಂ ॥ ೧೬ ॥

ಪಿತೃಭ್ಯಾಂ ಕ್ರಿಯತಾಸ್ಯೈವ ಛಲಂ ತಾತ ವಿಚಾರ್ಯತಾಂ ।
ಸ್ವಸ್ವಾಮಿಭ್ಯಾಂ ವಿಶೇಷೇಣ ಹ್ಯನ್ಯಃ ಕಿಂ ನ ಕರೋತಿ ವೈ ॥ ೧೭ ॥

ಅಸಮ್ಯಕ್ಚ ಕೃತಂ ತಾಭ್ಯಾಂ ತ್ವತ್ಪಿತೃಭ್ಯಾಂ ಹಿ ಕರ್ಮ ಹ ।
ವಿಚಾರ್ಯತಾಂ ತ್ವಯಾಪೀಹ ಮಚ್ಚಿತ್ತೇ ನ ಶುಭಂ ಮತಂ ॥ ೧೮ ॥

ದದ್ಯಾದ್ಯದಿ ಗರಂ ಮಾತಾ ವಿಕ್ರೀಣೀಯಾತ್ಪಿತಾ ಯದಿ ।
ರಾಜಾ ಹರತಿ ಸರ್ವಸ್ವಂ ಕಸ್ಮೈ ಕಿಂ ಚ ಬ್ರವೀತು ವೈ ॥ ೧೯ ॥

ಯೇನೈವೇದಂ ಕೃತಂ ಸ್ಯಾದ್ವೈ ಕರ್ಮಾನರ್ಥಕರಂ ಮತಂ ।
ಶಾಂತಿಕಾಮಸ್ಸುಧೀಸ್ತಾತ ತನ್ಮುಖಂ ನ ವಿಲೋಕಯೇತ್ ॥ ೨೦ ॥

---

೧೬. ನಿನ್ನ ತಾಯಿತಂದೆಗಳ ಮೋಸಕ್ಕೆ ಒಳಗಾದುದಕ್ಕೆ ಚತುಸ್ಸಮುದ್ರ ಪರ್ಯಂತವಾದ ಭೂಮಿಯನ್ನೂ ಅನೇಕ ಕಾಡುಗಳನ್ನೂ ತಿರುಗಿದ್ದೇ ನಿನಗಾದ ಫಲವು.

೧೭. ಎಲೈ ಮಗುವೇ, ನಿನ್ನ ತಂದೆತಾಯಿಗಳೇ ಈರೀತಿ ಮಗನಿಗೆ ಮೋಸ ಮಾಡಿರುವಾಗ ಇನ್ನು ಉಳಿದ ತಾಯಿತಂದೆಯರು ತಮ್ಮ ಮಕ್ಕಳಿಗೆ ಮೋಸವನ್ನು ಮಾಡಲಾರರೇನು ?

೧೮. ಅಂತೂ ನಿನ್ನ ತಾಯಿತಂದೆಯರು ನಿನಗೆ ಮಾಡಿರುವ ಮೋಸವು ಯೋಗ್ಯವಲ್ಲ. ನೀನೇ ಆಲೋಚಿಸಿ ನೋಡು. ನನಗೇನೋ(ಚೆನ್ನಾಗಿ ಕಾಣಿಸುವುದಿಲ್ಲ.

೧೯. ತಾಯಿಯೇ ತನ್ನ ಮಗನಿಗೆ ವಿಷವನ್ನು ಹಾಕಿದರೆ, ತಂದೆಯೇತನ್ನನ್ನು ಮಾರಿದರೆ, ರಾಜನೇ ಎಲ್ಲವನ್ನೂ ಅಪಹರಿಸಿದರೆ ಯಾರೊಡನೆ ಹೇಳಿಕೊಳ್ಳಬೇಕು ?

೨೦-೨೧. ಇಂತಹ ಅನರ್ಥವನ್ನುಂಟುಮಾಡುವ ಕೆಲಸವನ್ನು ಯಾರುಮಾ ಡುವರೋ ಅವರ ಮುಖವನ್ನು ಕೂಡ ನೋಡಬಾರದು ಎಂದು ನೀತಿಶಾಸ್ತ್ರವಿರುವುದು.

ಇತಿ ನೀತಿಃ ಶ್ರುತೌ ಪ್ರೋಕ್ತಾ ಸ್ಮೃತೌ ಶಾಸ್ತ್ರೇಷು ಸರ್ವತಃ ।
ನಿವೇದಿತಾ ಚ ಸಾ ತೇಽದ್ಯ ಯಥೇಚ್ಛಸಿ ತಥಾ ಕುರು ॥ ೨೧ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ನಾರದಂ ತ್ವಂ ತು ಮಹೇಶ್ವರಮಸೋಽಗತಿಃ ।
ತಸ್ಮೈ ತಥಾ ಕುಮಾರಾಯ ವಾಕ್ಯಂ ಮೌನಮುಪಾಗತಃ ॥ ೨೨ ॥

ಸ್ಕಂದೋಽಪಿ ಪಿತರಂ ನತ್ವಾ ಕೋಪಾಗ್ನಿಜ್ವಲಿತಸ್ತದಾ ।
ಜಗಾಮ ಪರ್ವತಂ ಕ್ರೌಂಚಂ ಪಿತೃಭ್ಯಾಂ ವಾರಿತೋಽಪಿ ಸ ॥ ೨೩ ॥

ವಾರಣೇ ಚ ಕೃತೇ ತ್ವದ್ಯ ಗಮ್ಯತೇ ಚ ಕಥಂ ತ್ವಯಾ ।
ಇತ್ಯೇವಂ ಚ ನಿಷಿದ್ಧೋಽಪಿ ಪ್ರೋಚ್ಯ ನೇತಿ ಜಗಾಮ ಸಃ ॥ ೨೪ ॥

ನ ಸ್ಥಾತವ್ಯಂ ಮಯಾ ತಾತೌ ಕ್ಷಣಮಪ್ಯತ್ರ ಕಿಂಚನ ।
ಯದ್ಯೇವಂ ಕಪಟಂ ಪ್ರೀತಿಮಪಹಾಯ ಕೃತಂ ಮಯಿ ॥ ೨೫ ॥

---

ಶ್ರುತಿ, ಸ್ಮೃತಿಗಳೂ ಈರೀತಿ ಸಾರುವುವು. ಅಪ್ಪಾ ಮಗು, ನಾನಿಷ್ಟು ಹೇಳಿರುವೆನು. ನಿನಗಿಷ್ಟಬಂದಂತೆ ಮಾಡು ಎಂದನು.

೨೨-೨೩ ಬ್ರಹ್ಮನು ಹೇಳಿದನು:—ನಾರದನು ಕುಮಾರನೊಡನೆ ಈರೀತಿಯಾಗಿ ಹೇಳಿ ಸುಮ್ಮನಾದನು. ಅದನ್ನು ಕೇಳಿ ಸ್ಕಂದನಿಗೆ ಅತ್ಯಂತವಾಗಿ ಕೋಪ ಬಂದಿತು. ಮಾತಾಪಿತೃಗಳಿಗೆ ನಮಸ್ಕರಿಸಿ ಅವರು ಬೇಡವೆಂದು ತಡೆಯುತ್ತಿದ್ದರೂ ಕ್ರೌಂಚಪರ್ವತಕ್ಕೆ ಹೊರಟುಹೋದನು.

೨೪-೨೫. "ನಾವು ಬೇಡವೆಂದು ಹೇಳುತ್ತಿದ್ದರೂ ಸಹ ನೀನು ಹೊರಡುತ್ತಿರುವೆಯಲ್ಲ" ಎಂಬುದಾಗಿ ಪಾರ್ವತೀಪರಮೇಶ್ವರರು ಹೇಳುತ್ತಿರಲು ಷಣ್ಮುಖನು ಅವರನ್ನು ಕುರಿತು ತಾಯಿತಂದೆಗಳಾದ ನೀವೇ ನನ್ನಲ್ಲಿ ಈರೀತಿ ಕಪಟವಾದ ಪ್ರೀತಿಯನ್ನು ತೋರಿಸುತ್ತಿರುವಲ್ಲಿ ನಾನು ಒಂದುಕ್ಷಣವೂ ಇಲ್ಲಿ ನಿಲ್ಲಲಾರೆನು ಎಂದು ಹೇಳುತ್ತಾ ಹೊರಟನು.

ಏವಮುಕ್ತ್ವಾ ಗತಸ್ತತ್ರ ಮುನೇ ಸೋऽದ್ಯಾಪಿ ವರ್ತತೇ ।
ದರ್ಶನೇನೈವ ಸರ್ವೇಷಾಂ ಲೋಕಾನಾಂ ಪಾಪಹಾರಕಃ ॥ ೨೬ ॥

ತದ್ದಿನಂ ಹಿ ಸಮಾರಭ್ಯ ಕಾರ್ತಿಕೇಯಸ್ಯ ತಸ್ಯ ವೈ ।
ಶಿವಪುತ್ರಸ್ಯ ದೇವರ್ಷೇ ಕುಮಾರತ್ವಂ ಪ್ರತಿಷ್ಠಿತಂ ॥ ೨೭ ॥

ತನ್ನಾಮ ಶುಭದಂ ಲೋಕೇ ಪ್ರಸಿದ್ಧಂ ಭುವನತ್ರಯೇ ।
ಸರ್ವಪಾಪಹರಂ ಪುಣ್ಯಂ ಬ್ರಹ್ಮಚರ್ಯಪ್ರದಂ ಪರಂ ॥ ೨೮ ॥

ಕಾರ್ತಿಕ್ಯಾಂ ಚ ಸದಾ ದೇವಾ ಋಷಯಶ್ಚ ಸತೀರ್ಥಕಾಃ ।
ದರ್ಶನಾರ್ಥಂ ಕುಮಾರಸ್ಯ ಗಚ್ಛಂತಿ ಚ ಮುನೀಶ್ವರಾಃ ॥ ೨೯ ॥

ಕಾರ್ತಿಕ್ಯಾಂ ಕೃತ್ತಿಕಾಸಂಗೇ ಕುರ್ಯಾದ್ಯಃ ಸ್ವಾಮಿದರ್ಶನಂ ।
ತಸ್ಯ ಪಾಪಂ ದಹೇತ್ಸರ್ವಂ ಚಿತ್ತೇಪ್ಸಿತಫಲಂ ಲಭೇತ್ ॥ ೩೦ ॥

---

೨೬. ಎಲೈ ನಾರದನೇ, ಈರೀತಿಯಾಗಿ ಹೇಳಿ ಷಣ್ಮುಖನು ಕ್ರೌಂಚಪರ್ವತಕ್ಕೆ ಹೊರಟುಹೋದನು. ಅವನು ಈಗಲೂ ಅಲ್ಲಿ ನೆಲಸಿರುವನು. ಅವನ ದರ್ಶನವನ್ನು ಮಾಡಿದರೆ ಪಾಪವೆಲ್ಲವೂ ನಾಶವಾಗುವುದು.

೨೭-೨೮. ಅಂದು ಮೊದಲುಗೊಂಡು ಆ ಕಾರ್ತಿಕೇಯನಿಗೆ ಕುಮಾರನೆಂದು ಹೆಸರಾಯಿತು. ಅವನ ಹೆಸರು ಮೂರು ಲೋಕದಲ್ಲಿಯೂ ಪ್ರಸಿದ್ಧವಾಗಿರುವುದು. ಅದು ಶುಭಕರವಾಗಿ ಸರ್ವಪಾಪಗಳನ್ನೂ ನಾಶಮಾಡಿ ಪುಣ್ಯವನ್ನು ಕೊಡುವುದು. ಆ ನಾಮಸ್ಮರಣೆಯಿಂದ ಶ್ರೇಷ್ಠವಾದ ಬ್ರಹ್ಮಚರ್ಯವನ್ನು ಹೊಂದಬಹುದು.

೨೯. ಕಾರ್ತಿಕಮಾಸದಲ್ಲಿ ದೇವತೆಗಳೂ ಋಷಿಗಳೂ ಮುನಿವರರೂ ತೀರ್ಥಗಳೂ ಸಹ ಅವನ ದರ್ಶನಮಾಡಲು ಆ ಕ್ರೌಂಚಪರ್ವತಕ್ಕೆ ಹೋಗುವರು.

೩೦. ಕಾರ್ತಿಕಮಾಸದಲ್ಲಿ ಕೃತ್ತಿಕಾನಕ್ಷತ್ರವು ಸೇರಿದ ಪೂರ್ಣಿಮೆಯಲ್ಲಿ ಯಾರು ಕಾರ್ತಿಕೇಯನ ದರ್ಶನವನ್ನು ಮಾಡುವರೋ ಅವರ ಪಾಪಗಳೆಲ್ಲವೂ ನಾಶವಾಗಿ ತಮಗಿಷ್ಟವಾದ ಫಲವನ್ನು ಪಡೆವರು.

ಉಮಾಪಿ ದುಃಖಮಾಪನ್ನಾ ಸ್ಕಂದಸ್ಯ ವಿರಹೇ ಸತಿ ।
ಉವಾಚ ಸ್ವಾಮಿನಂ ದೀನಾ ತತ್ರ ಗಚ್ಛ ಮಯಾ ಪ್ರಭೋ ॥ ೩೧ ॥

ತತ್ಸುಖಾರ್ಥಂ ಸ್ವಯಂ ಶಂಭುರ್ಗತಸ್ಸ್ವಾಂಶೇನ ಪರ್ವತೇ ।
ಮಲ್ಲಿಕಾರ್ಜುನನಾಮಾಸೀಜ್ಜ್ಯೋತಿರ್ಲಿಂಗಂ ಸುಖಾವಹಂ ॥ ೩೨ ॥

ಅದ್ಯಾಪಿ ದೃಶ್ಯತೇ ತತ್ರ ಶಿವಯಾ ಸಹಿತಶ್ಶಿವಃ ।
ಸರ್ವೇಷಾಂ ನಿಜಭಕ್ತಾನಾಂ ಕಾಮಪೂರಸ್ಸತಾಂ ಗತಿಃ ॥ ೩೩ ॥

ತಮಾಗತಂ ಸ ವಿಜ್ಞಾಯ ಕುಮಾರಸ್ಸಶಿವಂ ಶಿವಂ ।
ಸ ವಿರಜ್ಯ ತತೋಽನ್ಯತ್ರ ಗಂತುಮಾಸೀತ್ಸಮುತ್ಸುಕಃ ॥ ೩೪ ॥

ದೇವೈಶ್ಚ ಮುನಿಭಿಶ್ಚೈವ ಪ್ರಾರ್ಥಿತಸ್ಸೋಽಪಿ ದೂರತಃ ।
ಯೋಜನತ್ರಯಮುತ್ಸೃಜ್ಯ ಸ್ಥಿತಃ ಸ್ಥಾನೇ ಚ ಕಾರ್ತಿಕಃ ॥ ೩೫ ॥

---

೩೧. ಸ್ಕಂದನು ಹೊರಟುಹೋಗಲು ಅವನ ವಿಯೋಗದಿಂದ ಪಾರ್ವತಿಯು ತುಂಬಾ ದುಃಖಪಟ್ಟಳು. ಆಗ ಈಶ್ವರನನ್ನು ಕುರಿತು ನಾವಿಬ್ಬರೂ ಸ್ಕಂದನನ್ನು ನೋಡಲು ಹೋಗೋಣ ಎಂದು ದೈನ್ಯದಿಂದ ಬೇಡಿಕೊಂಡಳು.

೩೨-೩೩. ಪಾರ್ವತಿಯ ಮಾತಿನಂತೆ ಈಶ್ವರನು ತನ್ನ ಅಂಶದಿಂದ 'ಮಲ್ಲಿಕಾರ್ಜುನನೆಂಬ ಜ್ಯೋತಿರ್ಲಿಂಗಸ್ವರೂಪನಾಗಿ ಆ ಕ್ರೌಂಚಪರ್ವತದಲ್ಲಿ ನೆಲಸಿರುವನು. ಈಗಲೂ ಪಾರ್ವತಿಯೊಡನೆ ಮಲ್ಲಿಕಾರ್ಜುನನು ಪ್ರಕಾಶಿಸುತ್ತಿರುವುದನ್ನು ನೋಡಬಹುದು. ಜ್ಯೋತಿರ್ಲಿಂಗಸ್ವರೂಪನಾದ ಅವನು ತನ್ನ ಭಕ್ತರ ಅಭೀಷ್ಟವನ್ನೆಲ್ಲಾ ನೆರವೇರಿಸುವನು.

೩೪. ಈಶ್ವರನು ಪಾರ್ವತಿಯೊಡನೆ ಬಂದುದನ್ನು ನೋಡಿ ಕುಮಾರನು ಆ ಸ್ಥಳವನ್ನು ಬಿಟ್ಟು ಬೇರೇಕಡೆಗೆ ಹೋಗಲು ಸಿದ್ಧನಾದನು.

೩೫. ದೇವತೆಗಳೂ ಮುನಿಗಳೂ ಎಷ್ಟೇ ಪ್ರಾರ್ಥನೆಮಾಡಿಕೊಂಡರೂ ಸಹ ಕೇಳದೆ, ಕ್ರೌಂಚಪರ್ವತವನ್ನು ಬಿಟ್ಟು ಮೂರು ಯೋಜನದ ದೂರಕ್ಕೆ ಹೊರಟುಹೋದನು.

ಪುತ್ರಸ್ನೇಹಾತುರೌ ತೌ ವೈ ಶಿವೌ ಪರ್ವಣಿ ಪರ್ವಣಿ ।
ದರ್ಶನಾರ್ಥಂ ಕುಮಾರಸ್ಯ ತಸ್ಯ ನಾರದ ಗಚ್ಛತಃ ॥ ೩೬ ॥

ಅಮಾವಾಸ್ಯಾದಿನೇ ಶಂಭುಃ ಸ್ವಯಂ ಗಚ್ಛತಿ ತತ್ರ ಹ ।
ಪೂರ್ಣಮಾಸೀದಿನೇ ತತ್ರ ಪಾರ್ವತೀ ಗಚ್ಛತಿ ಧ್ರುವಂ ॥ ೩೭ ॥

ಯದ್ವೃತ್ತಸ್ಯ ಚ ವೃತ್ತಾಂತಂ ಭವತ್ಪೃಷ್ಟಂ ಮುನೀಶ್ವರ ।
ಕಾರ್ತಿಕಸ್ಯ ಗಣೇಶಸ್ಯ ಪರಮಂ ಕಥಿತಂ ಮಯಾ ॥ ೩೮ ॥

ಏತಚ್ಛ್ರುತ್ವಾ ನರೋ ಧೀಮಾನ್ ಸರ್ವಪಾಪೈಃ ಪ್ರಮುಚ್ಯತೇ ।
ಶೋಭನಾಂಲ್ಲಭತೇ ಕಾಮಾನೀಪ್ಸಿತಾನ್ ಸಕಲಾನ್ಸದಾ ॥ ೩೯ ॥

ಯಃ ಪಠೇತ್ಪಾಠಯೇದ್ವಾಪಿ ಶೃಣುಯಾಚ್ಛ್ರಾವಯೇತ್ತಥಾ ।
ಸರ್ವಾನ್ಕಾಮಾನವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥ ೪೦ ॥

ಬ್ರಾಹ್ಮಣೋ ಬ್ರಹ್ಮವರ್ಚಸ್ವೀ ಕ್ಷತ್ರಿಯೋ ವಿಜಯೀ ಭವೇತ್ ।
ವೈಶ್ಯೋ ಧನಸಮೃದ್ಧಸ್ಸ್ಯಾಚ್ಛೂದ್ರಸ್ಸತ್ಸಮತಾಮಿಯಾತ್ ॥ ೪೧ ॥

---

೩೬. ಆದರೂ ಪುತ್ರಸ್ನೇಹದಿಂದ ಪಾರ್ವತೀಪರಮೇಶ್ವರರು ಪ್ರತಿ ಪರ್ವಕಾಲಗಳಲ್ಲಿಯೂ ಕುಮಾರನ ದರ್ಶನಕ್ಕೋಸ್ಕರವಾಗಿ ಅವನಿರುವ ಸ್ಥಾನಕ್ಕೆ ಹೋಗುವರು.

೩೭. ಶಂಕರನು ಅಮಾವ್ಯಾಸ್ಯೆಯ ದಿನವೂ, ಗಿರಿಜೆಯು ಪೂರ್ಣಿಮೆಯ ದಿನವೂ, ಕುಮಾರನನ್ನು ನೋಡಲು ತಪ್ಪದೆ ಹೋಗುವರು.

೩೮-೩೯. ಎಲೈ ನಾರದನೇ, ನೀನು ಕೇಳಿದ ಕುಮಾರನ ಮತ್ತು ಗಣಪತಿಯ ಪರಮಪವಿತ್ರವಾದ ಕಥೆಯನ್ನು ಹೇಳಿರುವೆನು. ಇದನ್ನು ಕೇಳಿದವನ ಪಾಪಗಳೆಲ್ಲಾ ನಾಶವಾಗುವುದು. ತನಗಿಷ್ಟವಾದುದನ್ನೆಲ್ಲವನ್ನೂ ಪಡೆಯುವನು.

೪೦. ಯಾರು ಈ ಚರಿತ್ರೆಯನ್ನು ಓದುವರೋ ಅಥವಾ ಮತ್ತೊಬ್ಬರಿಂದ ಓದಿಸುವರೋ, ಕೇಳುವರೋ, ಅಥವಾ ಕೇಳುವಂತೆ ಪ್ರೇರೇಪಿಸುವರೋ ಅವರು ತಮ್ಮ ಅಭೀಷ್ಟಗಳನ್ನೆಲ್ಲಾ ಪಡೆಯುವರು. ಇದರಲ್ಲಿ ಸಂಶಯವಿಲ್ಲ.

೪೧-೪೨. ಈ ಉಪಾಖ್ಯಾನವನ್ನು ಕೇಳಿದರೆ ಬ್ರಾಹ್ಮಣನು ಬ್ರಹ್ಮವರ್ಚಸ್ವಿಯಾಗುವನು. ಕ್ಷತ್ರಿಯನು ವಿಜಯಶಾಲಿಯಾಗುವನು. ವೈಶ್ಯನು ಧನವಂತನಾ

ರೋಗೀ ರೋಗಾತ್ಪ್ರಮುಚ್ಯೇತ ಭಯಾನ್ಮುಚ್ಯೇತ ಭೀತಿಯುಕ್ ।
ಭೂತಪ್ರೇತಾದಿಬಾಧಾಭ್ಯಃ ಪೀಡಿತೋ ನ ಭವೇನ್ನರಃ ॥ ೪೨ ॥
ಏತದಾಖ್ಯಾನಮನಘಂ ಯಶಸ್ಯಂ ಸುಖವರ್ಧನಂ ।
ಆಯುಷ್ಯಂ ಸ್ವರ್ಗಮತುಲಂ ಪುತ್ರಪೌತ್ರಾದಿಕಾರಕಂ ॥ ೪೩ ॥
ಅಪವರ್ಗಪ್ರದಂ ಚಾಪಿ ಶಿವಜ್ಞಾನಪ್ರದಂ ಪರಂ ।
ಶಿವಾಶಿವಪ್ರೀತಿಕರಂ ಶಿವಭಕ್ತಿವಿವರ್ಧನಂ ॥ ೪೪ ॥
ಶ್ರವಣೀಯಂ ಸದಾ ಭಕ್ತೈರ್ನಿಷ್ಕಾಮೈಶ್ಚ ಮುಮುಕ್ಷುಭಿಃ ।
ಶಿವಾದ್ವೈತಪ್ರದಂ ಚೈತತ್ಸದಾಶಿವಮಯಂ ಶಿವಂ ॥ ೪೫ ॥

ಇತಿ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಕುಮಾರಖಂಡೇ
ಗಣೇಶವಿವಾಹವರ್ಣನಂ ನಾಮ ವಿಂಶೋಽಧ್ಯಾಯಃ
॥ ಸಮಾಪ್ತಶ್ಚಾಯಂ ಕುಮಾರಖಂಡಃ ॥

---

ಗುವನು. ಶೂದ್ರನು ಸತ್ಪುರುಷರ ಸೇವನಾಗುವನು. ರೋಗಿಯು ಈ ಚರಿತ್ರೆಯನ್ನು ಕೇಳಿದರೆ ಅವನ ರೋಗವೆಲ್ಲವೂ ನಾಶವಾಗುವುದು. ಭಯಪಟ್ಟವನ ಭಯವು ನಾಶವಾಗುವುದು. ಇದನ್ನು ಕೇಳಿದ ಮನುಷ್ಯನಿಗೆ ಭೂತಪ್ರೇತಾದಿಗಳ ತೊಂದರೆಯೆಲ್ಲವೂ ಪರಿಹಾರವಾಗುವುದು.

೪೩-೪೫. ಈ ಚರಿತ್ರೆಯು ಪರಮಪವಿತ್ರವಾದುದು. ಇದರ ಶ್ರವಣದಿಂದ ಕೀರ್ತಿಯೂ ಸುಖವೂ ಆಯುಸ್ಸೂ ಹೆಚ್ಚುವುದು. ಶ್ರೇಷ್ಠವಾದ ಸ್ವರ್ಗವು ಸಿಕ್ಕುವುದು. ಪುತ್ರಪೌತ್ರರು ಅಭಿವೃದ್ಧಿಯಾಗುವರು. ಮೋಕ್ಷಪ್ರಾಪ್ತಿಯಾಗುವುದು. ಶಿವನಲ್ಲಿ ಭಕ್ತಿಯು ಹೆಚ್ಚುವುದು. ಪಾರ್ವತೀಪರಮೇಶ್ವರರು ಸಂತುಷ್ಟರಾಗುವರು. ಆದುದರಿಂದ ಮೋಕ್ಷವನ್ನು ಪಡೆಯಲಿಷ್ಟವುಳ್ಳವರೂ ಶಿವನಲ್ಲಿ ಭಕ್ತಿ ಇರುವವರೂ ನಿಷ್ಕಾಮಿಗಳೂ ಯಾವಾಗಲೂ ಈ ಚರಿತ್ರೆಯನ್ನು ಕೇಳಬೇಕು. ಈ ಚರಿತ್ರೆಯು ಶಿವೈಕ್ಯವನ್ನುಂಟುಮಾಡುವುದಾಗಿಯೂ ಯಾವಾಗಲೂ ಮಂಗಳಕರವಾಗಿಯೂ ಇರುವುದು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ರುದ್ರಸಂಹಿತೆಯಲ್ಲಿನ ಕುಮಾರಖಂಡದಲ್ಲಿ
ಗಣೇಶವಿವಾಹವರ್ಣನವೆಂಬ ಇಪ್ಪತ್ತನೆಯ ಅಧ್ಯಾಯವು ಮುಗಿದುದು.

ಕುಮಾರಖಂಡವು ಮುಗಿದುದು.

॥ ಮಂಗಳಂ ॥

